# ಕಸ್ತೂರಿ





ಡಿಸೆಂಬರ್, ೧೯೬೨

ಬೆಲೆ: ೭೫ ನ. ಪೈ.

ಇಂದಿನ ವಿಶ್ವಕ್ಕೊಂದು ಬೆಳಕಿಂಡಿ

# ಕಸ್ತೂರಿ

**ಕನ್ನಡ ಡೈಜೆಸ್ಟ**

ಪ್ರತಿ ತಿಂಗಳ ೧ ನೇ ದಿನಾಂಕ
ಪ್ರಕಟವಾಗುವುದು.

ಮುಖ್ಯ ಸಂಪಾದಕರು :
ರಂಗನಾಥ ದಿವಾಕರ

ಸಹಾಯಕ ಸಂಪಾದಕರು :
ಪಿ. ವಿ. ಆಚಾರ್ಯ

ಪ್ರಕಾಶಕರು :
ಲೋಕ ಶಿಕ್ಷಣ ಟ್ರಸ್ಟ-ಹುಬ್ಬಳ್ಳಿ

ಕಚೇರಿ :
ಸಂಯುಕ್ತ ಕರ್ನಾಟಕ ಕಾರ್ಯಾಲಯ
ಹುಬ್ಬಳ್ಳಿ

ಮುದ್ರಕರು :
ಸಂಯುಕ್ತ ಕರ್ನಾಟಕ ಮುದ್ರಣಾಲಯ
ಹುಬ್ಬಳ್ಳಿ

ಮುಖಚಿತ್ರ :
ಭೂಗತ ಮಾರ್ಗದಲ್ಲಿ
ಎ. ಎಸ್. ಆರ್. ಮೂರ್ತಿ

ಚಂದಾ ದರ :

| | |
|---|---|
| ವಾರ್ಷಿಕ(ಅಂಚೆಸೇರಿ). | ರೂ.೮.೦೦ |
| ಅರ್ಧ ವರ್ಷ — | ರೂ. ೪.೫೦ |
| ಬಿಡಿಸಂಚಿಕೆ — | ರೂ. ೦.೭೫ |

Kasturi, December 1962


## ಲೇಖಕರಿಗೆ ಸೂಚನೆ

ಕಸ್ತೂರಿಯಲ್ಲಿ ಪ್ರಕಟನೆಗಾಗಿ ಲೇಖ, ಪ್ರಬಂಧ, ಕಥೆ ಮೊದಲಾದವನ್ನು ಸ್ವೀಕರಿಸಲಾಗುವದು. ಕಾಗದದ ಒಂದೇ ಮಗ್ಗಲಿಗೆ ವಿರಳವಾಗಿ ಬರೆದು ಕಳಿಸಬೇಕು. ಲೇಖಕರು ತಮ್ಮ ಹೆಸರು ವಿಳಾಸಗಳನ್ನು ಸ್ಪಷ್ಟವಾಗಿ ತಿಳಿಸಬೇಕಲ್ಲದೆ, ಅನುವಾದ, ರೂಪಾಂತರ ಇಲ್ಲವೆ ಸಾಧಾರ ಲೇಖಗಳಾದರೆ ಅವುಗಳ ಮೂಲ ಲೇಖಕ ಹಾಗೂ ಪ್ರಕಾಶಕರ ಹೆಸರು ವಿಳಾಸಗಳನ್ನೂ ಒದಗಿಸಬೇಕು. ಮೂಲ ಲೇಖಕರ ಅನುಮತಿ ಪಡೆದೇ ಲೇಖಗಳನ್ನು ಕಳಿಸಿದರೆ ಅವುಗಳ ಮೇಲೆ ಬೇಗನೆ ನಿರ್ಣಯಕ್ಕೆ ಬರಲು ಸುಲಭವಾಗುವದು. ಅಸ್ವೀಕೃತ ಲೇಖಗಳು ತಿರುಗಿ ಬೇಕಾಗಿದ್ದರೆ ಲೇಖಗಳ ಸಂಗಡವೇ ತಿರುಗಿ ಕಳಿಸಲು ಅವಶ್ಯಬೀಳುವಷ್ಟು ಅಂಚೆ ತಿಕೀಟುಗಳನ್ನೂ ಕಳಿಸಿರಬೇಕು. ಲೇಖ ಸ್ವೀಕೃತವಾದರೆ ಯಥಾವಕಾಶ ಪ್ರಕಟಿಸಲಾಗುವದು. ಲೇಖಕರು ತಮ್ಮ ಲೇಖಗಳ ಸ್ಥಳಪ್ರತಿಗಳನ್ನು ಕಾಯ್ದಿಟ್ಟುಕೊಳ್ಳುವದೊಳಿತು. ಲೇಖಗಳು ಅಕಸ್ಮಾತ್ತಾಗಿ ಕಳೆದು ಹೋದರೆ ಸಂಪಾದಕರು ಹೊಣೆಗಾರರಲ್ಲ

ಲೇಖ ಪ್ರಕಟವಾದರೆ "ಕಸ್ತೂರಿ" ಯು ಆಗಿಂದಾಗ್ಗೆ ಗೊತ್ತುಪಡಿಸಿಕೊಂಡ ಕ್ರಮದಲ್ಲಿ ಪ್ರತಿಫಲವನ್ನು ಆದಷ್ಟು ಬೇಗ ಕೊಡಲಾಗುವದು. ಲೇಖಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ

## ಚಂದಾದಾರರಿಗೆ ಸೂಚನೆ

ಪ್ರತಿತಿಂಗಳ "ಕಸ್ತೂರಿ" ಆಯಾ ತಿಂಗಳ ೧ನೇ ದಿನಾಂಕದೊಳಗೆ ಪ್ರಕಟವಾಗುವದು. ಅದು ಚಂದಾದಾರರಿಗೆ ಆಯಾ ತಿಂಗಳ ೫ನೇ ದಿನಾಂಕದೊಳಗೆ ತಲುಪುವದು. ಹಾಗೆ ಬಾರದಿದ್ದರೆ ಚಂದಾದಾರರು ತಮ್ಮ ಟಪಾಲು ಕಟ್ಟೆಯಲ್ಲಿ ಮೊದಲು ವಿಚಾರಿಸಿ ನಮಗೆ ತಿಳಿಸಬೇಕು. ಚಂದಾದಾರರು ಕಾರ್ಯಾಲಯದೊಡನೆ ಪತ್ರವ್ಯವಹಾರ ಮಾಡುವಾಗ್ಗೆ ತಮ್ಮ ಚಂದಾ ನಂಬರು ಕಾಣಿಸಲು ಮರೆಯಬಾರದು.

## ಕೆಮ್ಮು ಮತ್ತು ನೆಗಡಿಯನ್ನು ನಿಶ್ಚಿತವಾಗಿ ಉಪಶಮನಗೊಳಿಸಲು





# ಸಿರೋಲಿನ್ 'ರೋಶ್'

## ತೆಗೆದುಕೊಳ್ಳಿರಿ

ನೆಗಡಿ ಮತ್ತು ಕೆಮ್ಮನ್ನು ಎಂದಿಗೂ ಅಲಕ್ಷಿಸಬೇಡಿರಿ — ಅವನ್ನು ನಿಶ್ಚಿತವಾಗಿ, ನಿರಪಾಯಕರವಾಗಿ ಮತ್ತು ಶೀಘ್ರವಾಗಿ ಉಪಶಮನಗೊಳಿಸಲು ಸಿರೋಲಿನ್ ತೆಗೆದುಕೊಳ್ಳಿರಿ. ಅದು ಕೆಮ್ಮನ್ನು ಕೇವಲ ತಾತ್ಕಾಲಿಕವಾಗಿ ನಿಲ್ಲಿಸುವುದಿಲ್ಲ— ಕೆಮ್ಮಿಗೆ ಮೂಲವಾದ ಹಾನಿಕಾರಕ ರೋಗಾಣುಗಳನ್ನೆ ಅದು ಪ್ರತಿಭಟಿಸುತ್ತದೆ. ಸಿರೋಲಿನ್ ಗಂಟಲು ನೋವಿಗೆ ಉಪಶಮನವನ್ನೀಯುತ್ತದೆ, ಕಫನಿವಾರಣೆಗೆ ನೆರವಾಗುತ್ತದೆ ಮತ್ತು ಅತ್ಯಂತ ದುರ್ದಮ ಕೆಮ್ಮನ್ನೂ ಶೀಘ್ರವಾಗಿ, ಸೌಮ್ಯವಾಗಿ ಪರಿಹರಿಸುತ್ತದೆ. ಅದು ನಿರಪಾಯಕರವಾಗಿಯೂ, ಪರಿಣಾಮಕಾರಿಯಾಗಿಯೂ ಇದ್ದು, ಸೇವಿಸಲು ಚೆನ್ನಾಗಿರುವುದರಿಂದ ಮನೆಯವರೆಲ್ಲರ ಮೆಚ್ಚಿಕೆಗೆ ಪಾತ್ರವಾಗುತ್ತದೆ. ಮಕ್ಕಳಿಗಂತೂ ಸಿರೋಲಿನ್ ಸೇವಿಸುವುದೆಂದರೆ ಬಹಳ ಆನಂದ!




**ಮನೆಯಲ್ಲಿ ಸಿರೋಲಿನನ್ನು ತಪ್ಪದೆ ಇಟ್ಟುಕೊಳ್ಳಿರಿ**

'ರೋಶ್' ಉತ್ಪಾದನ    ಸೋಲ್ ಡಿಸ್ಟ್ರಿಬ್ಯೂಟರ್ಸ್ : ವೋಲ್ಟಾಸ್ ಲಿಮಿಟೆಡ್

# ಡಿಸೆಂಬರ್ ಬಿಡುಗಡೆ!

ಕನ್ನಡಿಗರಿಗೊಂದು ಕಲಾಕಾಣಿಕೆ!

ಪಾಂಡುರಂಗಾ ಪ್ರೊಡಕ್ಷನ್ಸ್ ರವರ...

# ತೇಜಸ್ವಿನಿ

[ಕನ್ನಡ]

ದಿಗ್ದರ್ಶನ: ಹೆಚ್.ಎಲ್.ಎನ್.ಸಿಂಹ

ನಿರ್ಮಾಪಕಿ: ಎಂ.ಪಂಡರೀಬಾಯಿ.





## ಶೈಲಶ್ರೀ ಪ್ರೊಡಕ್ಷನ್ಸ್

ಅರ್ಪಿಸುವ ಮತ್ತೆರಡು ಚಿತ್ರರತ್ನಗಳು!

ಕೃಷ್ಣಮೂರ್ತಿ ಪುರಾಣಿಕರ
ಭವ್ಯಕಾದಂಬರಿ

## ಕುಲವಧು

[ಕನ್ನಡ]

ಅ.ನ.ಕೃಷ್ಣರಾಯರ
ಅಮರಕೃತಿ.

## ಸಂಧ್ಯಾರಾಗ

[ಕನ್ನಡ]

ದಿಗ್ದರ್ಶನ: ಟಿ.ವಿ.ಸಿಂಗ್ ಠಾಕೂರ್

ನಿರ್ಮಾಪಕರು: ಎ.ಸಿ.ನರಸಿಂಹಮೂರ್ತಿ ಮತ್ತು ಮಿತ್ರರು

ಶೈಲಶ್ರೀ ಪಿಕ್ಚರ್ಸ್ ಹಂಚಿಕೆ.

# ಈ ಸಂಚಿಕೆಯಲ್ಲಿ



ಪುಸ್ತಕ ಸಂಗ್ರಹ

ಕಸ್ತೂರಿ



ಸಂಚಿಕೆ ೪ ಡಿಸೆಂಬರ್, ೧೯೬೨ ವರ್ಷ ೭

# ಸಂತ ಮತ್ತು ಸಾಮಾನ್ಯ

ಸಂಜೀವ ಲಕ್ಷ್ಮೇಶ್ವರ

ಒಮ್ಮೆ ಒಬ್ಬರು ರಾಮಕೃಷ್ಣ ಪರಮಹಂಸರಿಗೆ "ಸಂತರಿಗೂ ಸಾಮಾನ್ಯರಿಗೂ ಏನು ಅಂತರ? ಸಂತರೆಂದು ಕರೆಯಿಸಿಕೊಳ್ಳುವವರು ಕೂಡ ಸಾಮಾನ್ಯರಂತೆ ತಿನ್ನುವರು, ಉಣ್ಣುವರು, ಅರಿವೆ ತೊಡುವರು. ಅಂದ ಮೇಲೆ ಏನು ಭೇದ ಏದೆ?" ಎಂದು ಕೇಳಿದರು.

ಅದಕ್ಕೆ ಪರಮಹಂಸರು, "ನಾನೊಂದು ಕತೆ ಹೇಳುವೆನು. ಅದರ ಮೇಲಿಂದ ಸಾಮಾನ್ಯರಿಗೂ ಸಂತರಿಗೂ ಇರುವ ಭೇದ ತಿಳಿಯುವುದು" ಎಂದು ಈ ಕತೆ ಹೇಳಿದರು :

"ಒಂದು ದೊಡ್ಡ ಊರಲ್ಲಿ ಭವ್ಯವಾದ ರಾಜ ಮಾರ್ಗದಲ್ಲಿ ಒಬ್ಬ ತಂದೆ-ಮಗ ಹೊರಟಿದ್ದರು. ಮಗನು ಮೂರು ನಾಲ್ಕು ವರ್ಷದವನಿದ್ದನು. ಅವನು ತನ್ನ ತಂದೆಗೆ ಅನೇಕ ಪ್ರಶ್ನೆಗಳನ್ನು ಕೇಳುತ್ತಿದ್ದನು. ಅಷ್ಟರಲ್ಲಿ ಕೆಲ ಪೋಲೀಸರು ಒಬ್ಬ ಕಳ್ಳನನ್ನು ಹಿಡಿದುಕೊಂಡು ಅದೇ ಮಾರ್ಗ ವಾಗಿ ಹೊರಟಿದ್ದರು. ಆರು ಜನ ಪೋಲೀಸರು ಆ ಕಳ್ಳನನ್ನು ನಡುವೆ ಮಾಡಿಕೊಂಡು ಹೊರಟಿದ್ದರು.

ಆಗ್ಗೆ ಆ ಹುಡುಗನು, "ಅಪ್ಪಾ ಆ ನಡುವಿನ ಮನುಷ್ಯನಾರು?" ಎಂದು ಕೇಳಿದ.

"ಅವನೊಬ್ಬ ಕಳ್ಳ. ಅದೇ ಅವನ ಎಡಬಲಕ್ಕೆ ಪೋಲೀಸರಿರುವರು"

ಮುಂದೆ ಸ್ವಲ್ಪ ಸಮಯದಲ್ಲಿಯೇ ಆ ದೇಶದ ರಾಜನು ಕುದುರೆಯ ಮೇಲೆ ಕುಳಿತುಕೊಂಡು ಬರುತ್ತಿದ್ದನು. ಅವನ ಎಡಬಲಕ್ಕೂ ೭ ಜನ ಸಿಪಾಯಿಗಳಿದ್ದರು. ಅದನ್ನು ನೋಡಿದ ಹುಡುಗ "ಅಪ್ಪಾ, ಅಲ್ಲಿ ನೋಡಿರಿ. ಇನ್ನೊಬ್ಬ ಕಳ್ಳನು ಕುದುರೆಯ ಮೇಲೆ ಕುಳಿತು ಬರುತ್ತಿದ್ದಾನೆ."

ತಂದೆ— ಹುಚ್ಚಾ, ಅವರು ನಮ್ಮನ್ನಾಳುವ ರಾಜರು ಅವರಿಗೆ ನಮಸ್ಕರಿಸು.

ಹುಡುಗ— ಆದರೆ ಅಪ್ಪಾ, ಆ ಕಳ್ಳನಿಗೂ ರಾಜನಿಗೂ ಏನಾದರೂ ಅಂತರವಿದೆಯೆ? ಆ ಕಳ್ಳನ ಸುತ್ತಲೂ ಪೋಲೀಸರಿದ್ದರು, ಈ ರಾಜನ ಸುತ್ತಲೂ ಪೋಲೀಸರಿರುವರು. ಅಂದಮೇಲೆ ಅವನು ಕಳ್ಳನೇಕೆ? ಇವನು ರಾಜನೇಕೆ?

ತಂದೆ— ಓಹೋ, ಮಹದಂತರವಿದೆ!

ಹುಡುಗ— ಯಾವುದು? ಅವರು ಧರಿಸಿದ ಬಟ್ಟೆಯದೋ ಅಥವಾ ಕುದುರೆಯ ಮೇಲೆ ಕುಳಿತಿರುವುದೋ?

ತಂದೆ— ಅದಾವುದೂ ಅಲ್ಲ. ಮೊದಲು ನಾವು ನೋಡಿದ ಕಳ್ಳನು ಆ ಶಿಪಾಯಿಗಳ ಅಧೀನದಲ್ಲಿದ್ದನು. ಆದರೆ ಇಲ್ಲಿ ಶಿಪಾಯಿಗಳು ಆ ರಾಜನ ಅಧೀನದಲ್ಲಿರುವರು. ಇದೇ ಇರುವ ಅಂತರ ತಿಳಿಯಿತೆ?

ರಾಮಕೃಷ್ಣ ಪರಮಹಂಸರು ತಮ್ಮ ಕತೆ ಮುಗಿಸಿ ಹೇಳಿದರು. "ತಿಳಿಯಿತೆ ಸಾಮಾನ್ಯ ಮನುಷ್ಯನಿಗೂ ಸಂತರಿಗೂ ಇರುವ ಅಂತರ? ಸಾಮಾನ್ಯ ಮನುಷ್ಯನು ಷಡ್ರಿಪುಗಳ ಅಧೀನದಲ್ಲಿರುವನು. ಆದರೆ ಷಡ್ರಿಪುಗಳು ಸಂತರ ಅಧೀನದಲ್ಲಿರುವವು. ಇದೇ ಅವರಲ್ಲಿರುವ ಅಂತರ." *

# ಬಲ್ಲವರ ಮಾದರಿ

ಜೈಲಿನಲ್ಲಿದ್ದಾಗ ಬಾಪೂಜಿ ತಮ್ಮ ಸಾಯಂಕಾಲದ ಅಡ್ಡಾಡುವ ವೇಳೆಯನ್ನು ಹೆಚ್ಚಿಸಿದರು. ನಾನಂದೆ,— ''ಮೊದಲು ಅರ್ಧ ಗಂಟೆ ಅಡ್ಡಾಡುತ್ತಿದ್ದಿರಿ, ಈಗ ಒಂದು ಗಂಟೆ ತಿರುಗಾಡಲಿಕ್ಕೆ ಹೋಗುತ್ತೀರಲ್ಲ. ಯಾಕೆ? ತೊಂದರೆಯಾಗದೆ ಆರೋಗ್ಯಕ್ಕೆ?''

ಅದಕ್ಕೆ ಅವರೆಂದರು: ''ಶಕ್ತಿ ಹೆಚ್ಚಾಗಿದೆ ಎಂದು ನನಗೆ ಅನ್ನಿಸುತ್ತಿದೆ. ಅದಕ್ಕೆ ನಾನು ಹೆಚ್ಚು ತಿರುಗಾಡುತ್ತಿದ್ದೇನೆ. ಇದೂ ಒಂದು ಬಗೆಯ ಬ್ರಹ್ಮಚರ್ಯದ ಪಾಲನೆ.''

''ಅದು ಹೇಗೆ?''

''ಪ್ರತಿ ಒಬ್ಬನಲ್ಲಿ ಸಾಕಷ್ಟು ಶಕ್ತಿ ಇರುತ್ತದೆ. ಅದನ್ನು ಆತ ಮಲಗುವ ಮುಂಚೆ ಉಪಯೋಗಿಸಬೇಕು. ಇದು ನಿಜವಾಗಿ ಅಸಂಗ್ರಹ–(ಅಪರಿಗ್ರಹ). ಈ ರೀತಿ ಎಲ್ಲ ಶಕ್ತಿಯನ್ನು ಬಳಿಕೆಯಲ್ಲಿ ತರದಿದ್ದರೆ ದಿನದ ಕೊನೆಗೆ ವ್ಯಯವಾಗದೆ ಉಳಿಯುವ ಶಕ್ತಿ ಅನಾವಶ್ಯಕವೆಂದಾಗುವುದು. ದಿನಕ್ಕೆ ಬೇಕಾಗುವ ಆಹಾರಸಾಮುಗ್ರಿ ಶರೀರಕ್ಕೆ ಒದಗಿಸುವಲ್ಲಿ ಕಡಿಮೆ ಮಾಡುವುದಿಲ್ಲ ಎಂದ ಮೇಲೆ ಶರೀರದಿಂದ ಕೆಲಸ ಮಾಡಿಸಿಕೊಳ್ಳುವಲ್ಲಿ ಯಾಕೆ ಹಿಂಜರಿಯಬೇಕು? ಮೈಮುರಿ ದುಡಿಯಬೇಕು. ಆಗ ಚೆನ್ನಾಗಿ ನಿದ್ದೆ ಹತ್ತುತ್ತದೆ. ಆದ್ದರಿಂದ ದುಡಿತವು ಅಪರಿಗ್ರಹ ಹಾಗೂ ಬ್ರಹ್ಮಚರ್ಯ ಎರಡಕ್ಕೂ ಬೇಕು.'' ಸ್ವಲ್ಪ ನಿಂತು ಮುಂದೆ ಮತ್ತೆ ಹೇಳಿದರು: "ನಾನು ದಕ್ಷಿಣ ಆಫ್ರಿಕೆಯಲ್ಲಿದ್ದಾಗ ನಲವತ್ತು ಮೈಲು ನಡೆಯುವ ಶಕ್ತಿ ಇದ್ದಾಗ ಮೂವತ್ತೊಂಭತ್ತು ಮೈಲಿಗೆ ಎಂದೂ ತಡೆಯುತ್ತಿದ್ದಿಲ್ಲ. ಚೆನ್ನಾಗಿ ತಿನ್ನುತ್ತಿದ್ದೆ. ಚೆನ್ನಾಗಿ ದುಡಿಯುತ್ತಿದ್ದೆ."

— ಕಾಕಾ ಕಾಲೇಲಕರ

ಏಳನೇ ಎಡ್ವರ್ಡನು ಇಂಗ್ಲಂಡಿನ ರಾಜನಿದ್ದಾಗ ಒಮ್ಮೆ ಸಪರಿವಾರವಾಗಿ ಹ್ಯಾರೋ ಶಾಲೆಗೆ ಭೆಟ್ಟಿಕೊಡಲು ಹೋಗಿದ್ದನು. ಆ ಶಾಲೆಯ ಮುಖ್ಯಾಧ್ಯಾಪಕರು ಆಗ್ಗೆ ತಮ್ಮ ವರ್ಗದಲ್ಲಿ ಖುರ್ಚಿಯ ಮೇಲೆ ಕುಳಿತು ವಿದ್ಯಾರ್ಥಿಗಳಿಗೆ ಪಾಠ ಹೇಳುತ್ತಿದ್ದರು. ಶಾಲೆಯ ಎಲ್ಲ ವರ್ಗಗಳನ್ನು ನೋಡುತ್ತ ನೋಡುತ್ತ ರಾಜ ಹಾಗು ಇತರ ಅಧಿಕಾರಿಗಳು ಮುಖ್ಯಾಧ್ಯಾಪಕರಿದ್ದ ಕ್ಲಾಸಿನ ಬಳಿಗೆ ಬಂದು ಬಾಗಿಲ ಹತ್ತಿರ ನಿಂತರು. ಆದರೆ ಮುಖ್ಯಾಧ್ಯಾಪಕರು ತಮ್ಮ ವರ್ಗವನ್ನು ನಿಲ್ಲಿಸಲಿಲ್ಲ. ತಿರುಗಿ ಕೂಡ ನೋಡಲಿಲ್ಲ. ತಾಸು ಮುಗಿಯುವವರೆಗೆ ನಿರರ್ಗಳವಾಗಿ ಅವರ ಪಾಠ ನಡೆದೇ ಇದ್ದಿತು.

ರಾಜನೊಂದಿಗೆ ಬಂದಿದ್ದ ಇತರ ಅಧಿಕಾರಿಗಳು ಮುಖ್ಯಾಧ್ಯಾಪಕರ ಉದ್ಧಟ ವರ್ತನೆ

ಯಿಂದ ತಮಗೆ ಏನು ಶಿಕ್ಷೆ ದೊರೆಯುವುದೋ ಎಂದು ಗಾಬರಿಯಿಂದ ನಡುಗುತ್ತಿದ್ದರು.

ವರ್ಗದ ತಾಸು ಮುಗಿಯಿತು. ಮುಖ್ಯಾಧ್ಯಾಪಕರು ಹೊರಗೆ ಬಂದು ರಾಜನನ್ನೂ ಅಧಿಕಾರಿಗಳನ್ನೂ ತಮ್ಮ ಕೋಣೆಗೆ ಕರೆದುಕೊಂಡು ಹೋಗಿ ನಮಸ್ಕರಿಸಿ, "ಪ್ರಭೋ, ಈಗ ನಾನು ನಿಮ್ಮ ಪ್ರಜೆ. ತಾವು ನಮ್ಮನ್ನಾಳುವ ರಾಜರೆಂದು ತಮಗೆ ವಂದಿಸುವೆ. ವರ್ಗದಲ್ಲಿಯ ನನ್ನ ನಡತೆಯಿಂದ ತಮಗೆ ಕೋಪ ಬಂದಿರಲು ಸಾಕು. ಅದರ ಕಲ್ಪನೆ ನನಗಿದೆ. ಆದರೆ ಗುರುವಿನ ಬಗ್ಗೆ ನನ್ನವು ಕೆಲ ತತ್ವಗಳಿವೆ. ಗುರುವು ಪಾಠ ಹೇಳಿಕೊಡುತ್ತಿರುವಾಗ್ಗೆ, ಅವನಿಗಿಂತ ಹೆಚ್ಚಿನವರಾರೂ ಇಲ್ಲ, ಈ ದೇಶದ ರಾಜನನ್ನು ಮೊದಲ್ಗೊಂಡು, ಎಂದು ವಿದ್ಯಾರ್ಥಿಗಳಿಗೆ ಭಾವನೆ ಆಗಿರಬೇಕು. ತಮ್ಮ ಆಗಮನವಾದ ಕೂಡಲೆ ನಾನು ವರ್ಗವನ್ನು ನಿಲ್ಲಿಸಿ ತಮ್ಮ ಕಡೆಗೆ ಬಂದಿದ್ದರೆ ವಿದ್ಯಾರ್ಥಿಗಳ ದೃಷ್ಟಿಯಲ್ಲಿ ನಾನು ಅಲ್ಪನಾಗುತ್ತಿದ್ದೆ."

ರಾಜನು ಆ ಶಿಕ್ಷಕರಿಗೆ ಮುಂದೆ ಮಾತನಾಡಲು ಕೊಡದೆ ಹೇಳಿದ: "ಶಹಬಾಸ್! ಇಂಗ್ಲಂಡ್ ಧನ್ಯವಾಯಿತು. ಎಲ್ಲಿಯ ವರೆಗೆ ಇಂಥ ಶಿಕ್ಷಕರಿರುವರೋ ಅಲ್ಲಿಯವರೆಗೆ ಇಂಗ್ಲಂಡಿಗೆ ಉಜ್ವಲ ಭವಿತವ್ಯವಿದೆ. ಆದ್ದರಿಂದ ನಿಮ್ಮ ಬಗ್ಗೆ ನನಗೆ ಕೋಪ ಬರದೇ ಅಭಿಮಾನವೆನಿಸುತ್ತದೆ."

ಸಂಗ್ರಹ : **ಸಂಜೀವ ಲಕ್ಷ್ಮೇಶ್ವರ**

ದ್ವಿತೀಯ ಜಗತ್ಸಂಗ್ರಾಮದ ವೇಳೆಯಲ್ಲಿ ಒಂದು ದಿನ ಬ್ರಿಗೇಡಿಯರ್ ಜನರಲ್ ಥಿಯೊಡೋರ್ ರೂಸ್‌ವೆಲ್ಟ್ (ಜ್ಯೂನಿಯರ್)ಅವರು ವಿಮಾನವನ್ನು ಹತ್ತಲು ನಿಲ್ದಾಣದಲ್ಲಿ ಕಾಯುತ್ತಿದ್ದರು.

ಆ ಸಮಯದಲ್ಲಿ ಒಬ್ಬ ನಾವಿಕ ತರುಣನು ಧಾವಿಸಿ ಬಂದು ಸಮೀಪದಲ್ಲಿ ಇದ್ದ ಟಿಕೀಟು ಮಾರುವೆಡೆಯಲ್ಲಿ "ದಯವಿಟ್ಟು ನನಗೆ ಒಂದು ಸ್ಥಳವನ್ನು ಕಲ್ಪಿಸಿಕೊಡಿ; ನನಗೆ ಸಮಯವಿಲ್ಲ. ನಾನು ಅಗತ್ಯವಾಗಿ ನಮ್ಮ ತಾಯಿಯವರನ್ನು ನೋಡಬೇಕು" ಎಂದ.

ಆ ತರುಣನ ಪ್ರಾರ್ಥನೆ ನಿರಾಕರಿಸಲ್ಪಟ್ಟಿತು.

ಅದನ್ನೆಲ್ಲ ನೋಡುತ್ತಿದ್ದ ರೂಸ್‌ವೆಲ್ಟರು ಅಲ್ಲಿಗೆ ಹೋಗಿ, "ಅವನಿಗೆ ನನ್ನ ಟಿಕೀಟನ್ನು ಕೊಡಿ," ಎಂದರು.

ರೂಸ್‌ವೆಲ್ಟರ ಮಿತ್ರರು, "ನಿಮಗೆ ಅವಸರವಿಲ್ಲವೆ?" ಎಂದು ಅಚ್ಚರಿಯಿಂದ ಕೇಳಿದಾಗ ರೂಸ್‌ವೆಲ್ಟರು ಹೇಳಿದ್ದು:

"ಅದು ಸರದಿಯ ವಿಷಯ ನೋಡಿ, ನಾನು ಕೇವಲ ಒಬ್ಬ ಜನರಲ್. ಆದರೆ ಅವನು ಒಬ್ಬ ತಾಯಿಯ ಮಗ."

ಸಂಗ್ರಹ : **ಬಿ. ಆರ್. ಶಂಕರ್**

ಇಂಚಗೇರಿ ಸಂಪ್ರದಾಯದ ಶ್ರೀ ಗಣಪತರಾವ ಮಹಾರಾಜರೂ ಆಗ್ರಾದಿಂದ ಶ್ರೀ ದತ್ತ ಮಹಾರಾಜರೂ ನಮ್ಮಲ್ಲಿ ಆಗಮಿಸಿದ್ದರು. ಆಗ ಪ್ರವಚನದ ಕಾಲದಲ್ಲಿ ಶ್ರೀ ದತ್ತಮಹಾರಾಜರು ಕೆಳಗಿನ ಪ್ರಸಂಗವನ್ನು ವರ್ಣಿಸಿದರು—

ಹೀಗೆಯೇ ಜನ ನೆರೆದ ಸಮಯದಲ್ಲೊಮ್ಮೆ ಆಗಂತುಕರೊಬ್ಬರು ಬಂದು ಮಿಠಾಯಿ ಹಂಚಲು ಪ್ರಾರಂಭಿಸಿದರು.

ಮಿಠಾಯಿ ತಿಂದಾದ ನಂತರ ಯಾರೋ ಒಬ್ಬರು "ಈಗೇಕೆ? ವಿಶೇಷವೇನು?" ಎಂದು ಕೇಳಿದಾಗ "ವಿಶೇಷವೇನಿಲ್ಲ. ನನ್ನ ಕುದುರೆ ಕಳೆದು ಹೋಗಿದೆ ಅದಕ್ಕೆ," ಎಂದರವರು.

ಕುಳಿತವರೆಲ್ಲ ಗೊಳ್ಳನೆ ನಕ್ಕು, "ಕುದುರೆ ಕಳೆದರೆ ಯಾರಾದರೂ ಮಿಠಾಯಿ ಹಂಚುವರೆ?" ಎಂದು ಕೇಳಿದಾಗ, ಅಷ್ಟೇ ಶಾಂತರಾಗಿ ಅವರು ಉತ್ತರಿಸಿದರಂತೆ: "ಹೌದು, ದೈವಯೋಗದಿಂದ ನಾನು ಕುದುರೆಯ ಮೇಲೆ ಕುಳಿತುಕೊಂಡಿರಲಿಲ್ಲ, ಇಲ್ಲದಿದ್ದರೆ ನಾನೂ ಕಳವಾಗಿ ಹೋಗುತ್ತಿದ್ದೆ."

**— ಶಂ. ನಾ. ಸದರಜೋಶಿ**



ನಿನ್ನ ದಾನಕ್ಕಾಗಿ ಧನ್ಯವಾದಗಳು. ಆದರೆ ನಮಗೆ ಇನ್ನೂ ಅಷ್ಟುಮಟ್ಟಿಗೆ ಶಸ್ತ್ರಾಸ್ತ್ರಕೊರತೆ ಬದ್ದಿಲ್ಲ!






ಪೆಕಿಂಗ್ ರೇಡಿಯೋ ಹಚ್ಚರಿ—ಅವರು ನಾಳೇ ಸುದ್ದಿ ಇವೊತ್ತೇ ಕೊಡ್ತಾರಂತಲ್ಲ!



ಬೇಗ! ಬೇಗ!—ನೆನಪಿರಲಿ, ಇದು ಅವಸರದ ಸಭೆ!

ಏನು ದಡ್ಡರೂಂತೇನೆ ನೀವು! ಈಗಿರೊ ಪೇಟೆ
ದರದಲ್ಲಿ ಧಾಣಾ ಡಂಗುರವಾಗಿ ಮಾರಲಿಕ್ಕೆ
ಬರುವಾಗ ಬ್ಲಾಕ್ ಮಾರ್ಕೆಟ್ ದರದಲ್ಲಿ ಮಾರಿ
ಅವರು ಸಿಕ್ಕಿಬೀಳುವ ಅಗತ್ಯವಾದರೂ ಏನು?



ಇದು ಪ್ರತಿಯೊಬ್ಬ ಸಾರ್ವಜನಿಕ
ಕಾರ್ಯಕರ್ತನಿಗೂ ಆದರ್ಶವಾಗಲಿ !

# ಅವರ ಪ್ರಾಮಾಣಿಕತೆ ಆದರ್ಶವಾಗಿತ್ತು



ರಾಮಪ್ರತಾಪ ತ್ರಿಪಾಠಿ

ಹಿಂದೀ ಸಾಹಿತ್ಯ ಸಮ್ಮೇಲನವು ದಿ. ರಾಜರ್ಷಿ ಟಂಡನ್ನರ ಮಾನಸಪುತ್ರನೆನ್ನಲಡ್ಡಿಯಿಲ್ಲ. ತಮ್ಮ ಜೀವಮಾನದಲ್ಲೆಲ್ಲ ಅವರಿಗೆ ತಮ್ಮ ಏಳು ಜನ ಗಂಡು ಮಕ್ಕಳಿಗಿಂತಲೂ ಈ ಮಾನಸಪುತ್ರನ ಚಿಂತೆಯೆ ಹೆಚ್ಚಾಗಿದ್ದಿತು. ತಮ್ಮ ಕೊನೆಯುಸಿರಿನವರೆಗೂ ಅವರು ಸಮ್ಮೇಲನದ ಉದ್ಧಾರ ಮತ್ತು ಉತ್ಥಾನಗಳಿಗಾಗಿ ಪರಿಶ್ರಮಿಸಿದರು. ಸಮ್ಮೇಲನದ ಬಗ್ಗೆ ಅವರಲ್ಲಿದ್ದ ಅಪಾರ ಪ್ರೀತಿಯ ಒಂದಿಷ್ಟು ಪರಿಚಯ ನನಗೆ ಬಂದ ಈ ಒಂದು ಅನುಭವದಲ್ಲಿ ಆಗುವಂತಿದೆ.

ಇದು ನಡೆದದ್ದು ೧೫-೧೬ ವರ್ಷಗಳ ಹಿಂದೆ. ಸಾಂಸ್ಕೃತಿಕ ಮತ್ತು ರಾಜಕೀಯ ಕಾರ್ಯಕ್ರಮಗಳಲ್ಲಿ ಭಾಗವಹಿಸಲು ಟಂಡನ್ನರಿಗೆ ದೇಶದ ಎಲ್ಲೆಡೆಗಳಿಂದ ಕರೆ ಬರುತ್ತಲಿತ್ತು. ಅವರು ಹೋದೆಡೆಗಳಲ್ಲಿ ಅವರಿಗೆ ಮಾನಪತ್ರಗಳು, ಬೆಲೆ ಬಾಳುವ ಕಾಣಿಕೆಗಳೇ ಮುಂತಾದವು ಅರ್ಪಿಸಲ್ಪಡುತ್ತಿದ್ದವು. ಈ ವಸ್ತುಗಳನ್ನು ಅವರು ಬಹು ಕಾಳಜಿಯಿಂದಿಟ್ಟುಕೊಂಡು ಪ್ರಯಾಗಕ್ಕೆ ಬಂದೊಡನೆ ಅವನ್ನು ಸಮ್ಮೇಲನದ ಸಂಗ್ರಹಾಲಯಕ್ಕೆ ಕೊಟ್ಟುಬಿಡುತ್ತಿದ್ದರು. ಅವರಿಂದ ಈ ಬಗೆಯಾಗಿ ಸಿಕ್ಕ ವಸ್ತುಗಳ ವಿಶಾಲ ಸಂಗ್ರಹವು ಹಿಂದೀ ಸಂಗ್ರಹಾಲಯದ 'ರಾಜರ್ಷಿ ಕೋಣೆ' ಯಲ್ಲಿದೆ.

ನಾನು ಹೇಳುತ್ತಿರುವ ಪ್ರಸಂಗ ನಡೆದ ಸಮಯದಲ್ಲಿ ಉತ್ತರ ಪ್ರದೇಶದ ಗಾಜೀಪುರ, ವಾರಾಣಸಿ ಮುಂತಾದ ಪೂರ್ವ ಜಿಲ್ಲೆಗಳಲ್ಲಿ ಟಂಡನ್ನರು ಸಂಚಾರಕ್ಕೆ ಹೋಗಿದ್ದರು. ಗಾಜೀಪುರದಲ್ಲಿ ಅವರಿಗೆ ಅನೇಕ ಅಭಿನಂದನ ಪತ್ರಗಳು ಅರ್ಪಿಸಲ್ಪಟ್ಟವು. ಅಲ್ಲಿಯ ಅತ್ತರವು ಭಾರತದಲ್ಲೆಲ್ಲ ವಿಖ್ಯಾತವಾದದ್ದು. ಗಾಜೀಪುರದಲ್ಲಿ ಅಲ್ಲಿಯ ಅತ್ತರ ವ್ಯಾಪಾರಿಯೊಬ್ಬನು ಯಾವುದೋ ಸಂದರ್ಭದಲ್ಲಿ ಟಂಡನ್ನರಿಗೆ ಎರಡು ಬಾಟ್ಲಿ ಗುಲಾಬಿಅತ್ತರ ಮತ್ತು ಒಂದು ಚಿಕ್ಕ ಬಾಟ್ಲಿ ಖಸ್ ಅತ್ತರ ಕಾಣಿಕೆ ಕೊಟ್ಟಿದ್ದ. ಅವರು ಪ್ರವಾಸ ಮುಗಿಸಿ ಪ್ರಯಾಗಕ್ಕೆ ಬಂದೊಡನೆಯೆ ನಾನವರ ಭೆಟ್ಟಿಗೆ ಹೋದೆ

ಕ್ಷೇಮ ಸಮಾಚಾರ, ಸಮ್ಮೇಲನದ ಸುದ್ದಿಗಳ ಮಾತು ಮುಗಿದೊಡನೆ ಅವರು ತಮ್ಮ ಕಾರದರ್ಶಿಯನ್ನು ಕರೆದು ಪ್ರವಾಸದಲ್ಲಿ ಸಿಕ್ಕ ವಸ್ತುಗಳನ್ನು ತಂದು ನನ್ನ ಹತ್ತರ ಕೊಡಲು ಹೇಳಿ

• ನವನೀತ • ದಿಂದ

ದರು. ಆತ ಒಳಗಿಂದ ಕೆಲವು ಮಾನಪತ್ರಗಳನ್ನು, ಒಂದು ಗುಲಾಬಿ ಅತ್ತರದ ಬಾಟ್ಲಿಯನ್ನು ತಂದು ನನ್ನ ಕೈಗಿತ್ತಾಗ ನಾನು ಕುತೂಹಲದಿಂದ ಟಂಡನ್ನರಿಗೆ "ಬಾಬೂಜಿ, ಈ ಅತ್ತರದಿಂದ ಸಮ್ಮೇಲನಕ್ಕೇನು ಪ್ರಯೋಜನವಿದೆ? ಇದು ನಿಮ್ಮ ಮನೆಯಲ್ಲಿಯೇ ಇರಲಿ." ಎಂದು ಹೇಳಿದೆ.

ರಾಜರ್ಷಿ ಬೇರೆ ಯಾವುದೊ ಯೋಚನೆಯಲ್ಲಿದ್ದವರು ನನ್ನ ಮಾತನ್ನು ಕೇಳಿದವರೇ ಕಾರ್ಯದರ್ಶಿ ತಂದು ನನ್ನ ಮುಂದಿಟ್ಟಿದ್ದ ಸಾಮಾನುಗಳ ಮೇಲೆ ಕಣ್ಣು ಹಾಯಿಸಿದರು. ತುಸು ಕಠೋರ ಸ್ವರದಲ್ಲಿ "ಗುಲಾಬಿ ಅತ್ತರದ ಎರಡು ಬಾಟ್ಲಿಗಳು ಮತ್ತು ಖಸ್ ಅತ್ತರದ ಒಂದು ಬಾಟ್ಲಿ ಇರಲಿಲ್ಲವೆ?" ಎಂದು ಕೇಳಿದರು. ಕಾರ್ಯದರ್ಶಿ ಮಾತಾಡಲಿಲ್ಲ. ಟಂಡನ್ನರು ಪುನಃ ಅದೇ ಪ್ರಶ್ನೆಯನ್ನು ಕೇಳಲು ಆತ ನಿರುಪಾಯನಾಗಿ "ಬಾಬೂಜಿ, ಅತ್ತರದ ಎರಡು ಬಾಟ್ಲಿಗಳನ್ನು "ಬೌಆ" (ಟಂಡನ್ನರ ಪತ್ನಿ) ಮನೆಗೆಂದು ಇಟ್ಟುಕೊಂಡಿದ್ದಾರೆ" ಎಂದ.

"ಯಾಕೆ? ಅಲಹಾಬಾದಿನಲ್ಲಿ ಅತ್ತರ ಸಿಗುವುದಿಲ್ಲವಂತೇನು?" ಟಂಡನ್ನರು ಉದ್ವಿಗ್ನತೆಯಿಂದ ಕೇಳಿದರು. "ಇದು ಗಾಜೀಪುರದ ಖರೇ ಅತ್ತರ. ಅಲಹಾಬಾದಿನಲ್ಲಿ ಇಂಥದೆಲ್ಲಿ ಸಿಗಬೇಕು? ಡಾಕ್ಟರರ (ಟಂಡನ್ನರ ಆರನೆಯ ಪುತ್ರ ಡಾ. ಆನಂದಕುಮಾರ ಟಂಡನ್) ಲಗ್ನಕ್ಕೆ ಇದು ಬೇಕು ಎಂದು ಬೌಆ ಹೇಳುತ್ತಿದ್ದರು." ಎಂದು ಕಾರ್ಯದರ್ಶಿ ಉತ್ತರವಿತ್ತ.

ಮಾತು ನಿಜವಾಗಿತ್ತು. ಡಾ. ಆನಂದ ಕುಮಾರರ ಲಗ್ನ ಸದ್ಯದಲ್ಲೆ ಆಗಲಿತ್ತು. ಈ ಅಪ್ರಿಯ ಸಂದರ್ಭದ ನಡುವೆ ಬಾಯಿ ಹಾಕಿ ನಾನು ಹೇಳಿದೆ "ಬಾಬೂಜಿ, ಇರಲಿ ಬಿಡಿ. ಸಮ್ಮೇಲನದಲ್ಲಿ ಅತ್ತರವನ್ನು ತೆಗೆದುಕೊಂಡು ಮಾಡುವುದೇನು?" ಟಂಡನ್ನರು ಎಂಥ ಕಠಿಣ ಸಮಯದಲ್ಲೂ ತಮ್ಮ ಸಹೃದಯತೆಯನ್ನು ಕಳೆದುಕೊಳ್ಳುತ್ತಿರಲಿಲ್ಲ. ಆದರೆ ಈಗಿನ ಪ್ರಸಂಗದಲ್ಲಿ ಅವರು ಅತ್ಯಂತ ಕಠೋರರಾಗಿರುವುದನ್ನು ಕಂಡೆ. ಅವರ ದಾರ್ಶನಿಕ ಕಣ್ಣುಗಳಲ್ಲಿ ಕೋಪದ ಕೆಂಪು ಮೂಡಿತ್ತು, ಅವರು ನನ್ನತ್ತ ತೀಕ್ಷ್ಣವಾಗಿ ನೋಡಿ ಅಂದರು "ನಿಮಗೆ ಗೊತ್ತಿಲ್ಲ. ನನಗೆ ಕಾಣಿಕೆಯಾಗಿ ಸಿಕ್ಕ ಇಂಥ ವಸ್ತುಗಳ ಉಪಯೋಗವನ್ನು ನನ್ನ ಮನೆಯವರು ಮಾಡಲಾರರು. ನೀವದನ್ನು ಒಯ್ದು ಯಾವಾಗಲಾದರೂ ಸಭೆ ಅಥವಾ ಅಧಿವೇಶನ ಸೇರಿದಾಗ ಉಪಯೋಗಿಸಿ."

ಅವರ ಕಠೋರ ಮುದ್ರೆಯನ್ನು ಕಂಡು ಸುಮ್ಮನಾದೆ. ಟಂಡನ್ನರು ಎದ್ದು ಒಳಗೆ ಹೋದವರು ಬಹಳ ಹೊತ್ತಾದರೂ ತಿರುಗಿ ಬರಲಿಲ್ಲ. ನಾನು ಬಂದಿದ್ದರಿಂದ ಜರುಗಿದ ಈ ಅಪ್ರಿಯ ಪ್ರಸಂಗದಿಂದ ನಾನು ತುಂಬಾ ಪಶ್ಚಾತ್ತಾಪಕ್ಕೊಳಗಾಗಿದ್ದೆ. ಟಂಡನ್ನರು ಅನೇಕ ವಾರಗಳ ಸಂಚಾರದಿಂದ ಪ್ರಯಾಗಕ್ಕೆ ಈಗ ತುಸು ಹೊತ್ತಿನ ಮುಂಚೆಯೆ ಬಂದಿದ್ದರು. ಇನ್ನೂ ಅವರ ಸ್ನಾನಾದಿಗಳು ಕೂಡ ಆಗಿರಲಿಲ್ಲ. ಮತ್ತೂ ಹತ್ತಿಪ್ಪತ್ತು ಮಿನಿಟುಗಳ ನಂತರ ಟಂಡನ್ನರು ಹೊರಗೆ ಬಂದು "ಹಿಡಿಯಿರಿ ಅತ್ತರದ ಬಾಟ್ಲಿಗಳು. ಗಾಜೀಪುರದ ಈ ಅತ್ತರ ಬಲು ಸುವಾಸನೆಯುಳ್ಳದ್ದು" ಎಂದರು.

ಆ ಮೇಲೆ ಬೇರೆ ಮಾತುಕತೆ ನಡೆದವು. ನಡೆದ ಅಪ್ರಿಯ ಪ್ರಸಂಗವನ್ನು ಹೇಗೆ ಬದಲಾಯಿಸಬೇಕು ಎಂದು ನಾನು ಯೋಚಿಸುತ್ತಿದ್ದೆ. ಟಂಡನ್ನರ ಮನಸ್ಸಿನಲ್ಲಿ ಏನೋ ವಿಚಾರ ಬರುತ್ತಿರಬೇಕು. ಏಕೆಂದರೆ ನನ್ನ ಮಾತುಗಳತ್ತ ಅವರ ಲಕ್ಷ್ಯವಿರಲಿಲ್ಲ. ನಾನು ಸಾಹಸ ಮಾಡಿ ನುಡಿದೆ "ಬಾಬೂಜಿ, ಈ ಅತ್ತರವನ್ನು ಬಾಆರಿಗೆ ಕೊಡಿ. ಕಾಣಿಕೆಯ ವಸ್ತುಗಳ ಮೇಲೆ ಕುಟುಂಬದವರ ಅಧಿಕಾರವಿಲ್ಲ ಎಂದು ನೀವು ಹೇಳುವುದಾದರೆ ಈ ಬಾಟ್ಲಿಗಳ ಬೆಲೆಯೆಂದು ಏನಾದರೂ ಕೊಡಿ. ಸಮ್ಮೇಲನದ ಖಾತೆಗೆ ಜಮಾ ಮಾಡುತ್ತೇನೆ."

ನನ್ನ ಮಾತು ಕೇಳಿ ಬಾಬೂಜಿ ತುಂಬ ಪ್ರಸ

ನ್ನರಾದರು. ಮುಗುಳ್ನಗುತ್ತ "ನಿಮ್ಮ ಸೂಚನೆ ಚೆನ್ನಾಗಿದೆ. ಇದರಿಂದ ಎರಡೂ ಕಾರ್ಯ ಸಿದ್ಧಿಸುವುದು. ನಾನು ನನ್ನ ಕರ್ತವ್ಯಕ್ಕೆ ಭಂಗ ತಂದು ಕೊಂಡಂತಾಗುವುದಿಲ್ಲ ಮತ್ತು ಬಾಆಳ ಮನಸ್ಸೂ ಸಂತೋಷಗೊಳ್ಳುವುದು!" ಎಂದರು.

ಇಷ್ಟಂದು ಅವರು ಕೂಡಲೆ ಎದ್ದು ಒಳಗೆ ಹೋಗಿ ಇಪ್ಪತ್ತು ರೂಪಾಯಿಗಳನ್ನು ತಂದು ನನ್ನ ಕೈಲಿಟ್ಟು "ಅತ್ತರದ ಬೆಲೆ ಸರಿಯಾಗಿದೆ ತಾನೆ!" ಎಂದು ಕೇಳಿದರು.

ನಾನು ಅವಾಕ್ಕಾದೆ. ಬಹಳೆಂದರೆ ೪-೫ ರೂಪಾಯಿ ಬೆಲೆ ಬಾಳುವ ಅತ್ತರಕ್ಕೆ ನಾನು ಇಪ್ಪತ್ತು ರೂಪಾಯಿ ತೆಗೆದುಕೊಳ್ಳುವುದು ನನಗೆ ಕಠಿಣವಾಗಿತ್ತು. ಆದರೆ ರಾಜರ್ಷಿಗಳ ಮುಖದ ಮೇಲೆ ಪ್ರಸನ್ನತೆಯ ಭಾವ ರಾರಾಜಿಸುತ್ತಿತ್ತು. ಅವರು ನನ್ನ ಮುಂದಿದ್ದ ಅತ್ತರದ ಬಾಟ್ಲಿಗಳನ್ನು ಕಾರ್ಯದರ್ಶಿಯ ಕೈಗೆ ಕೊಟ್ಟು "ಒಯ್ದಿ ಇವನ್ನು. ಬಾಆಗೆ ಕೊಟ್ಟು ಶಾಸ್ತ್ರೀಜಿಯವರಿಂದ ನಿಮಗಾಗಿ ಕೊಂಡು ತಂದೆ ಎಂದು ಹೇಳು" ಎಂದರು.

ಟಂಡನ್ನರಿತ್ತ ಇತರ ವಸ್ತುಗಳು ಮತ್ತು ರೂಪಾಯಿಗಳೊಂದಿಗೆ ನಾನು ಸಮ್ಮೇಲನದ ಕಚೇರಿಗೆ ಬಂದಾಗ ನನ್ನ ಹೃದಯ ಮತ್ತು ಮನಸ್ಸುಗಳ ಮೇಲೆ ಅವರ ಈ ಅನುಪಮ ತ್ಯಾಗ ಮತ್ತು ಆದರ್ಶಗಳ ಅಸಹ್ಯ ಭಾರವಿತ್ತು. ತನಗೆ ಕಾಣಿಕೆಯಾಗಿ ಬಂದ ವಸ್ತುಗಳನ್ನೆ ಅದರ ಇಮ್ಮಡಿ ಮುಮ್ಮಡಿ ಬೆಲೆಗೆ ಕೊಂಡ ಈ ಅನುಭವ ನನ್ನ ಸಾರ್ವಜನಿಕ ಜೀವನದಲ್ಲಿ ಮೊದಲನೆಯದಾಗಿತ್ತು. ಸಮ್ಮೆಲನದ ಬಗೆಗೆ ಟಂಡನ್ನರಿಗಿದ್ದ ಪ್ರೇಮ ಈ ರೀತಿಯಾಗಿತ್ತು. ಎಷ್ಟೋ ಆಘಾತಗಳು ಬಂದರೂ ಈ ಪ್ರೇಮರಜ್ಜು ಅವರ ಜೀವಮಾನವಿಡೀ ತುಂಡಾಗದೆ ಉಳಿದಿತ್ತು.*

---

ಇತ್ತೀಚೆಗೆ ನಮ್ಮೂರಿಗೆ ಮರಳಿ ಬಂದ ಖ್ಯಾತ ಪತ್ರಿಕೋದ್ಯಮಿಗಳು ಅಮೇರಿಕೆಯಿಂದ ಬರುವಾಗ ತಮ್ಮ ಹೆಂಡತಿಗೆಂದು ತಂದ ಜರಿ ಸೀರೆಗಳ ಬಗ್ಗೆ ಕುತೂಹಲಕಾರಿಯಾದ ಘಟನೆಯೊಂದನ್ನು ಹೇಳಿದರು.

ಆ ಪತ್ರಿಕೋದ್ಯಮಿಗಳು ಐಡಲ್ ವೀಲ್ಡ್ ವಿಮಾನ ನಿಲ್ದಾಣಕ್ಕೆ ಬಂದಾಗ ಅಲ್ಲಿನ ಸುಂಕದ ಅಧಿಕಾರಿಗಳು ಒಬ್ಬೊಬ್ಬರನ್ನೇ ತಪಾಸಿಸತೊಡಗಿದರು. ಕೊನೆಗೆ ಇವರ ಸರದಿ ಬಂದಾಗ "ಮಿ— ನಿಮ್ಮ ಬ್ಯಾಗಿನಲ್ಲಿ ಏನಿದೆ?" ಎಂದು ಕೇಳಿದರು.

"ನನ್ನ ಬ್ಯಾಗಿನಲ್ಲಿ ನನ್ನ ಅರಿವೆಗಳ ಹೊರತು ಮತ್ತೇನಿಲ್ಲ!"

"ಸರಿ ತೆರೆಯಿರಿ ನಿಮ್ಮ ಬ್ಯಾಗ್?" ಬ್ಯಾಗು ತೆರೆದಾಗ, ಪತ್ರಿಕೋದ್ಯಮಿಗಳ ಬ್ಯಾಗಿನಲ್ಲಿ ಎಂಟು ಹತ್ತು ಜರಿ ಸೀರೆಗಳಿರಬೇಕೆ?

"ಮಿ— ಇವು ನಿಮ್ಮ ಅರಿವೆಗಳೇನು?"

"ಹೌದು"

"ಸರಿ, ನಿಮ್ಮ ಅರಿವೆಗಳನ್ನು ಉಟ್ಟು ತೋರಿಸುವಿರಾ?" ಒಬ್ಬ ಚತುರ ಅಧಿಕಾರಿ ಹಾಕಿದ ಪ್ರಶ್ನೆ ಭಾರತೀಯನನ್ನು ಗೊಂದಲದಲ್ಲಿ ಕೆಡವಿತು. ಆದರೂ ಭಾರತೀಯ ಧೈರ್ಯ ಮಾಡಿ ಒಂದು ಸೀರೆಯನ್ನು ತೆಗೆದುಕೊಂಡು ತನ್ನ ತಲೆಗೆ ಪೇಟಾದಂತೆ ಸುತ್ತಿಕೊಂಡು ಹೇಳತೊಡಗಿದ. "ಸರ್ ಇಲ್ಲಿ ನೋಡಿ ಇದು, ಸಂಜೆಯಲ್ಲಿ ತೊಡುವ ಪೇಟಾ, ಇದು ಹಸಿರು ಬಣ್ಣದ್ದು. ಮುಂಜಾನೆ ಇಕಾ। ಇದು ಶಾಲಿ, ಸಮಾರಂಭಗಳಲ್ಲಿ—" ಸುಂಕದ ಅಧಿಕಾರಿಗಳು ದಂಗಾಗಿ ಹೋದರು.

— ವೆಂಕಟೇಶ ಪ್ಯಾಟಿ



ಹಿಮಾಲಯದ ಸ್ಪೀತಿ ಕಣಿವೆಯಲ್ಲಿ
ಸಿಕ್ಕಿಬಿದ್ದ ಭೂಗರ್ಭ ಶಾಸ್ತ್ರಿಗಳ
ತಂಡದ ವೀರಗಾಥೆ

# ಹಿಮರಾಶಿಯಲ್ಲಿ ಅಗ್ನಿಪರೀಕ್ಷೆ

ಸಂಪಿಗೆ ವಿ. ಶ್ರೀಕಂಠಯ್ಯ

ಕಳೆದ ಜುಲೈ ೧ ರಿಂದಲೂ ನಾವು ಸ್ಪೀತಿ ಕಣಿವೆಯ [ಪಂಜಾಬ] ಶಿಗ್ರಿ ಹಿಮನದಿಯ ನೀರ್ಗಲ್ಲ ಮುರುಕಲು ಕುಪ್ಪೆಯ ತಪ್ಪಲಲ್ಲಿ ಠಾಣೆ ಹೂಡಿದ್ದೆವು. ನಾವು ಅಲ್ಲಿ ಆಂಟಿಮನಿ ಲೋಹದ ಶೋಧದಲ್ಲಿ ತೊಡಗಿದ್ದೆವು. ನಮ್ಮ ಭೂಗರ್ಭ ವಿಜ್ಞಾನಿ ತಂಡದಲ್ಲಿ ಶ್ರೀ ಆರ್. ಎನ್. ಪಥಿ, ಎಸ್. ಕೆ. ವಿಶ್ವಾಸ್ ಮತ್ತು ನಾನು ಹೀಗೆ ಮೂವರಿದ್ದೆವು; ನಮ್ಮ ಸಂಗಡ ಇಬ್ಬರು ಪೇದೆಗಳು ಮತ್ತು ನಾಲ್ವರು ಕೂಲಿಯಾಳುಗಳು ಇದ್ದರು.

ಸುಮಾರು ಒಂದು ವಾರ ನಡೆದು ನಾವು ಜಾರಾ ಶಿಗ್ರಿ ಸೇರಿದ್ದೆವು. ಸಮುದ್ರ ಮಟ್ಟದಿಂದ ೧೪,೦೦೦ ಅಡಿ ಎತ್ತರವಿರುವ ಈ ಸ್ಥಳದ ಬಳಿಯ ಚಂದ್ರಾ ನದಿ ಹರಿಯುತ್ತದೆ. ಹತ್ತಿರವೇ ಕೋಟ್ಯಂತರ ವರ್ಷಗಳಿಂದ ಹರಿಯುವ ಶಿಗ್ರಿ ಬರ್ಫನದಿ ೨೦,೦೦೦ ಅಡಿ ಎತ್ತರದಿಂದ ಹರಿದು ಬರುತ್ತಿದೆ. ಹಿಮಕಿರೀಟಧಾರಿಗಳಾದ ಪರ್ವತಗಳಿಂದ ಸುತ್ತುವರಿಯಲ್ಪಟ್ಟ ಈ ಕಣಿವೆಯಲ್ಲಿ ನಾನು ೧೮,೦೦೦ ಅಡಿ ವರೆಗೂ ಏರಿ ಹೋಗಿ

---

ಹುಬ್ಬಳ್ಳಿಯ ಶ್ರೀ ಸಂಪಿಗೆ ವೆಂಕಟೇಶಯ್ಯನವರ ಪುತ್ರರಾದ ೨೭ ವಯಸ್ಸಿನ ಭೂಗರ್ಭ ಶಾಸ್ತ್ರಿ ಶ್ರೀ ಎಸ್. ವಿ. ಶ್ರೀಕಂಠಯ್ಯನವರು ಕರ್ನಾಟಕ ವಿಶ್ವವಿದ್ಯಾಲಯದ ಎಂ. ಎಸ್‌ಸಿ. ಪರೀಕ್ಷೆಯಲ್ಲಿ ಪ್ರಥಮ ವರ್ಗದಲ್ಲಿ ಪ್ರಥಮ ಸ್ಥಾನ ಪಡೆದವರು. ಅವರು ಭಾರತ ಸರಕಾರದ ಭೂಗರ್ಭ ಸರ್ವೇಕ್ಷಾ ಶಾಖೆ ಸೇರಿ ಸ್ಪೀತಿ ಕೊಳ್ಳದ ಲೋಹ ಸಂಶೋಧನ ತಂಡದ ನಾಯಕರಾಗಿ ಈ ವರ್ಷ ಹೋಗಿದ್ದರು. ಇಡೀ ಭಾರತವನ್ನು ಚಿಂತೆಗೀಡುಮಾಡಿದ ಕುಲು, ಸ್ಪೀತಿ ಕೊಳ್ಳಗಳ ಹಿಮಪಾತದ ಅನಾಹುತದಲ್ಲಿ ಸಿಕ್ಕಿಬಿದ್ದವರಲ್ಲಿ ಇವರ ತಂಡವೂ ಒಂದಾಗಿತ್ತು. ಮತ್ತು ಅಪ್ರತಿಮ ಮನೋಬಲದಿಂದ ಧೃತಿಗೆಡದೆ ಇಡೀ ತಂಡವು ಗೌರವಾನ್ವಿತವಾಗಿ ಪಾರಾದ ನಿದರ್ಶನವೂ ಇವರದೊಂದೇ ಆಗಿದೆ.

---

ಹಿಮ ನದಿಯ ಉಗಮದಿಂದ ಅದರ ಮೂತಿಯವರೆಗೂ ಒಂದೇ ನೋಟಕ್ಕೆ ನೋಡಬಂದೆ. ಈ ಪ್ರದೇಶವೆಲ್ಲ ಒಂದು ಹಸುರು ಪೊದೆ ಕೂಡ ಇಲ್ಲದ ಬಂಜರು ಭೂಮಿ. ಅಲ್ಲೊಂದು

ಇಲ್ಲೊಂದು ಹಸುರು ಖಂಡ ಹೊರ ಹಣಕುತ್ತ ಕೆಳಗೆ ಹುಲ್ಲುಗಾವಲಿದೆಯೆಂದು ಸೂಚಿಸುತ್ತದೆ. ಇಲ್ಲಿಗೆ ಕುರಿ ಮೇಯಿಸಲು ಬೇಸಗೆಯಲ್ಲಿ ಕುರುಬರು ಬಂದು ಚಳಿಗಾಲಕ್ಕೆ ಮೊದಲೇ ಕೆಳಗಿಳಿದು ಹೋಗುತ್ತಾರೆ.

ಇಲ್ಲಿಯ ಹವೆ ಬಹಳ ದುರೂಹ್ಯವಾಗಿದೆ. ಸೆಪ್ಟೆಂಬರ್ ಆರಂಭಕ್ಕೆ ಮೊದಲೇ ರಾತ್ರಿ ಬಹಳ ಚಳಿ ಆರಂಭವಾಯಿತು. ತಲೆಯ ಮೇಲೆ ಅರ್ಧ ವರ್ತುಲಾಕಾರದ ಗುಮ್ಮಟದಂತೆ ಮೋಡಗಳು ಮುಸುಕಿದ್ದವು. ಆದಾಗಿ ಕೆಲ ಕಾಲದಲ್ಲೆ ತೆಳ್ಳಗೆ ಹಿಮ ಬಿದ್ದು ನೋಡನೋಡುತ್ತ ಸುತ್ತೆಲ್ಲ ಬೆಳ್ಳಗಾಗಿ ಹೋಯಿತು. ಆದರೆ ಅದು ಬೇಗನೆ ಕರಗಿ ಹೋಗಿ ಮತ್ತೆ ಸುತ್ತಲ ಗಿರಿ ಶೃಂಗಗಳಷ್ಟೆ ಹಿಮನಿಬಿಡವಾಗಿ ಕಂಡವು.

ಬಾರಾ ಶಿಗ್ರಿಯಲ್ಲಿ ಸೆಪ್ಟೆಂಬರ್ ಎರಡನೇ ವಾರದಲ್ಲಿ ಭಾರಿ ಮಳೆಯಾಯಿತು. ಆದ್ದರಿಂದ ಸೆಪ್ಟೆಂಬರ್ ೨೧ ಕ್ಕೆ ಶಿಬಿರವನ್ನು ಮುಚ್ಚಿಕೊಂಡು ಶಿಗ್ರಿಯಿಂದ ಹೊರಡಲು ನಾನು ನಿರ್ಧರಿಸಿದೆ. ಆದರೆ ೧೯ ನೇ ದಿನಾಂಕ ವಿಪರೀತ ಮಳೆಯಾಯಿತು. ಇನ್ನು ಹಿಮ ಬೀಳತೊಡಗುವುದೆಂದು ನನಗೆ ಖಂಡಿತವಾಯಿತು. ನಮ್ಮ ಹತ್ತಿರ ಎರಡು ದಿನಕ್ಕೆ ಬೇಕಾದಷ್ಟೇ ಆಹಾರ ಮತ್ತು ಸೌದೆ ಉಳಿದಿತ್ತು. ನಾವೀಗ ಒಮ್ಮೆಲೇ ಈ ಕೊಳ್ಳದಲ್ಲಿ ಸಿಕ್ಕಿಬಿದ್ದಂತಾಗಿತ್ತು. ಆದ್ದರಿಂದ ದಿನಕ್ಕೆ ಒಂದೇ ಊಟ (ಅದೂ ಬರಿ ಅನ್ನ) ಮಾಡಿ ಆಹಾರ ವಸ್ತುಗಳನ್ನು ಉಳಿಸಿಕೊಳ್ಳಲು ನಿರ್ಧರಿಸಿದೆವು.

೨೦ ನೇ ದಿನಾಂಕ ಬೆಳಗ್ಗೆ ಮಳೆಯಾಯಿತು. ಅಪರಾಹ್ನ ತೆಳ್ಳಗೆ ಹಿಮದ ಪಳಕುಗಳು ನೆಲದ ಮೇಲೆ ಬೀಳತೊಡಗಿದವು. ಸಂಜೆಯೊಳಗೆ ಮೂರಡಿ ದಟ್ಟವಾದ ಹಿಮ ಕೂಡಿಬಿದ್ದಿತ್ತು. ಅದರ ಭಾರಕ್ಕೆ ನಮ್ಮ ಡೇರೆ ಕುಸಿದು ಬೀಳದಂತೆ ಅದರ ಗುಡಾರವನ್ನು ಬಡಿಬಡಿದು ಹಿಮವನ್ನು ಕೆಡವಲಾರಂಭಿಸಿದೆವು.

ಆ ರಾತ್ರಿ ನಮ್ಮೊಬ್ಬ ಪೇದೆ ಮೂರ್ಛೆ ಹೋದ. ಅವನಿಗೆ ವಿಶ್ರಾಂತಿ ಕೊಡಬೇಕಾಯಿತು. ಮಧ್ಯರಾತ್ರಿಯೊಳಗೆ ನಮ್ಮ ಡೇರೆ ಪೂರ್ತಿಯಾಗಿ ಹಿಮಾವೃತವಾಗಿತ್ತು. ನಾವು ಸೇವಕರನ್ನೆಬ್ಬಿಸಿ ಡೇರೆಯ ಸುತ್ತ ಕುಣಿ ತೋಡತೊಡಗಿದೆವು. ಅಂದು ರಾತ್ರಿಯೆಲ್ಲ ಹಿಮವೃಷ್ಟಿಯಾಗಿ ಮರುದಿನವೂ ಮುಂದುವರಿಯಿತು. ನಮ್ಮ ಡೇರೆಯನ್ನು ಸುರಕ್ಷಿತವಾಗಿಡಲು ನಾವು ಮತ್ತಷ್ಟು ಹಿಮವನ್ನು ತೋಡಿ ತೆಗೆಯಬೇಕಾಯಿತು. ಹೊರಗೆ ಏನೇನೂ ಕಾಣಿಸುತ್ತಿದ್ದಿಲ್ಲ. ಆ ಎರಡು ದಿನಗಳುದ್ದಕ್ಕೂ ಪರ್ವತದಿಂದ ಬಂಡೆಗಳೂ ನೀರ್ಗಲ್ಲುಗಳೂ ಉರುಳುವ ಗರ್ಜನೆ ಕೇಳುತ್ತಲೇ ಇತ್ತು. ಕೆಳಗೆ ಕಣಿವೆಯಲ್ಲಿ ಏನಾಗುತ್ತಿತ್ತೋ ನಮಗೆ ತಿಳಿಯುತ್ತಿರಲಿಲ್ಲ. ಜನರ ಆಕ್ರಂದನ ಆಕ್ರೋಶಗಳು ಕೇಳುತ್ತಿದ್ದವಾದರೂ ಅವು ಎಲ್ಲಿಂದ ಬರುತ್ತಿದ್ದವೆಂದಾಗಲಿ ಅವರ ಗತಿಯೇನಾಯಿತೆಂದಾಗಲಿ ನಮಗೆ ಗೊತ್ತಾಗಲಿಲ್ಲ.

೨೨ನೇ ದಿನಾಂಕ ತುಸು ಹೊರಪಾಗಿತ್ತು. ಆದರೆ ಅಷ್ಟರೊಳಗೆ ನಮ್ಮ ಸುತ್ತೆಲ್ಲ ಎಂಟಡಿ ಹಿಮ ಏರಿಬಿಟ್ಟಿತ್ತು. ಹೊರಗೆ ಹಣಕಿದಾಗ ಕಣಿವೆಯ ಇನ್ನೊಂದೆಡೆ ಇದ್ದ ಪಿ.ಡಬ್ಲ್ಯು.ಡಿ. ಡೇರೆಗಳು ಹಿಮದಲ್ಲಿ ಹುಗಿದದ್ದನ್ನೂ ಅಲ್ಲಿದ್ದವರೆಲ್ಲ ಪಲಾಯನ ಮಾಡಿದ್ದನ್ನೂ ಕಂಡೆವು. ನಮ್ಮ ಶಿಬಿರವೇನೋ ಸುರಕ್ಷಿತ ಸ್ಥಳದಲ್ಲಿತ್ತು. ೨೩ ನೇ ದಿನಾಂಕ ಕೂಡ ಆಕಾಶವೂ ನಿರಭ್ರವಾಗಿತ್ತು. ಆದರೆ ನಮಗೆ ಬಾಹ್ಯ ಜಗತ್ತಿನ ಸಂಪರ್ಕ ಸಂಪೂರ್ಣ ತಪ್ಪಿಹೋಗಿತ್ತು. ನಮ್ಮ ಶಿಬಿರ ದಾರಿಯೆ ಇಲ್ಲದ ಪ್ರದೇಶದಲ್ಲಿ ಎಲ್ಲೋ ಇತ್ತು. ಆದ್ದರಿಂದ ನಮ್ಮನ್ನು ಕುರಿತು ಯಾರಾದರೂ ಕಾಳಜಿ ವಹಿಸದಿದ್ದರೆ ನಮಗೆ ಸಹಾಯ ದೊರೆಯುವ ಆಶೆಯೆ ಇರಲಿಲ್ಲ. ಅಲ್ಲದೆ ಇನ್ನೊಮ್ಮೆ ಹಿಮಪಾತವಾದರೆ ನಾವಲ್ಲಿ ಶಾಶ್ವತವಾಗಿ ಹುಗಿದು ಹೋಗುವೆವೆಂದು ನನಗೆ ಚಿಂತೆಯಾಯಿತು. ನಾವಿದ್ದ ಸ್ಥಳದಿಂದ ಹೊರಟು ಹಿಮೀಭೂತ ನದಿಯ

ದಂಡೆಗುಂಟ ಮೇಲ್ಮುಖವಾಗಿ ೨೦ ಮೈಲು ದೂರ ಹೊಸತಾಗಿ ಬಿದ್ದ ಹಿಮದ ಮೇಲೆ ನಡೆದು ಸೇತುವೆಯ ಮೂಲಕ ನದಿ ದಾಟುವ ಯತ್ನ ಈ ಹವೆಯಲ್ಲಿ ಕಲ್ಪನಾತೀತವಾಗಿತ್ತು. ಇತ್ತ ಕೋಡುಗಟ್ಟಿದ ನದಿಗಳನ್ನು ಇಳಿದು ದಾಟುವುದು ಮೃತ್ಯುವಿಗೆ ಆಮಂತ್ರಣವಾಗಿತ್ತು. ಹಾಗೆ ಯತ್ನಿಸಿದ ಕೆಲವರು ತೇಲಿಹೋದದ್ದನ್ನು ನಾವು ಕಣ್ಣಾರೆ ಕಂಡೆವು. ಆಹಾರ ಕೊರತೆ ದಿನದಿನಕ್ಕೆ ಭೀಕರವಾಗುತ್ತಿತ್ತು. ಆದರೂ ನಮ್ಮ ಸಲಕರಣೆಗಳನ್ನೆಲ್ಲ ಅಲ್ಲೆ ತ್ಯಜಿಸಿ ಹೋಗುವ ವಿಚಾರ ನನಗೆ ಅಷ್ಟು ಹಿಡಿಸಲಿಲ್ಲ.

೨೪ ನೇ ತಾರೀಖಿನಂದು ಆಕಾಶದಲ್ಲಿ ಮೋಡ ಮುಸುಕಿ ಪುನಃ ತೆಳ್ಳಗೆ ಹಿಮ ಬೀಳಲು ಪ್ರಾರಂಭವಾಯಿತು. ನಮ್ಮೊಂದಿಗೆ ಇದ್ದ ನಾಲ್ಕು ಜನ ಕೂಲಿಯಾಳುಗಳು ಅಂದು ನಾವು ಹಾಸಿಗೆಯಿಂದ ಏಳುವ ಮೊದಲೇ ನಮ್ಮನ್ನು ಬಿಟ್ಟು ಹೋಗುವುದಾಗಿ ತಿಳಿಸಿದರು. ನಮಗೆ ಅದೊಂದು ಗಂಭೀರ ಪ್ರಸಂಗವೇ ಆಗಿತ್ತು. ನಾನು ತಂಡದ ಧುರೀಣನಾದ್ದರಿಂದ ತಂಡವನ್ನು ಅಪಾಯದಿಂದ ಪಾರು ಮಾಡುವ ಹೆಚ್ಚಿನ ಹೊಣೆ ನನ್ನ ಮೇಲಿತ್ತು. ನಾನು ಧೈರ್ಯಗುಂದಲಿಲ್ಲ. ನಾನು ಚಿತ್ತ ಸ್ಥೈರ್ಯವನ್ನು ತೋರಿಸಿದ್ದರಿಂದ ಶಿಬಿರದಲ್ಲಿ ಗಾಬರಿ ಹಬ್ಬಲು ಅವಕಾಶವಾಗಲಿಲ್ಲ.

ಕೊನೆಗೆ ನಮ್ಮ ಬಳಿ ಇದ್ದ ಖಾಸಗಿ ಹಾಗೂ ಸರಕಾರಿ ಸೊತ್ತುಗಳನ್ನೆಲ್ಲ ಅಲ್ಲಿಯೇ ಬಿಟ್ಟು ಅಲ್ಲಿಂದ ಪಾರಾಗಬೇಕೆಂದು ನಿರ್ಧರಿಸಿದೆವು. ಎತ್ತೆತ್ತಲೂ ಬೆಳ್ಳಗಿನ ಹಿಮದ ರಾಶಿ. ನಮ್ಮ ಕೂಲಿಯಾಳುಗಳು ಕೆಲವು ಬ್ಲಾಂಕೆಟುಗಳನ್ನು ಮಾತ್ರ ಹೊತ್ತೊಯ್ಯಲು ಒಪ್ಪಿಕೊಂಡರು. ನಾವು ನಮ್ಮ ಬಳಿ ಇದ್ದ ಬೆಲೆಬಾಳುವ ಉಡುಪುಗಳಲ್ಲಿ ಸಾಧ್ಯವಾದಷ್ಟನ್ನು ತೊಟ್ಟುಕೊಂಡೆವು. ನಾವು ತಯಾರಿಸಿದ ನಕಾಶೆಗಳನ್ನು ಅದುಮಿಕೊಂಡು ಉಳಿದದ್ದೆಲ್ಲವನ್ನೂ ಬಿಟ್ಟುಕೊಟ್ಟು ಶಿಬಿರದಿಂದ ಹೊರಟೆವು

ಹೊಸದಾಗಿ ಬಿದ್ದ ಹಿಮ ರಾಶಿಯ ಮೇಲೆ ನಡೆಯುವುದು ಕಠಿಣವೂ ನಿಧಾನವೂ ಆಗುತ್ತದೆ. ನಮ್ಮ ಕೂಲಿಗಳು ಮುಂದೆ ಹೋಗಲಾರದಷ್ಟು ಗಾಬರಿಯಾಗಿದ್ದರು. ಕೊನೆಗೆ ನಾನೇ ಮುಂದಾಗಿ ಏಳಡಿ ಆಳವಾದ ಹಿಮದಲ್ಲಿ ದಾರಿ ಮಾಡತೊಡಗಿದೆ. ಬಂಡೆಗಲ್ಲುಗಳು ಹಿಮದಲ್ಲಿ ಮುಚ್ಚಿಹೋಗಿದ್ದರಿಂದ ಅನೇಕ ಬಾರಿ ನನ್ನ ಪಾದಗಳು ಎರಡು ಬಂಡೆಗಲ್ಲುಗಳ ನಡುವೆ ಸಿಕ್ಕಿಕೊಳ್ಳುತ್ತಿದ್ದವು. ಬೆಳಗ್ಗೆ ೯-೩೦ ಕ್ಕೆ ಹೊರಟ ನಾವು ೧೧-೩೦ ಕ್ಕೆ ಹಿಮಶೀತ ಶಿಗ್ರಿ ನದಿಯನ್ನು ಇಳಿದು ದಾಟಿದೆವು. ನಮ್ಮ ಬಟ್ಟೆಯೆಲ್ಲ ಒದ್ದೆ ಮುದ್ದೆಯಾಯ್ತು. ಅಂದು ಹೊತ್ತುಮುಳುಗುವುದರೊಳಗೆ ನಾವು ಕೇವಲ ನಾಲ್ಕು ಮೈಲುಗಳಷ್ಟು ಮಾತ್ರ ನಡೆದಿದ್ದೆವು. ಹೇಸರಗತ್ತೆಗಳನ್ನು ತರಲಿಕ್ಕೆಂದು ನಾವು ಮೊದಲೇ ಕಳಿಸಿದ್ದ ನನ್ನ ತಹಶೀಲಪೇದೆ ಪಂಭೀರಾಮ ಸುರಕ್ಷಿತ ಸ್ಥಳದಲ್ಲಿದ್ದ. ನಾವು ಹಿಮದಲ್ಲಿ ಸಾಗುತ್ತಿದ್ದುದನ್ನು ಅವನು ನೋಡಿದ. ಒಡನೆಯೇ ಕೂಗಿ ಕರೆದು ನದಿಯ ದಡಕ್ಕೆ ಬರುವಂತೆ ಹೇಳಿದ. ನಾವು ನದೀ ತೀರದ ಸನಿಯಕ್ಕೆ ಬರುವ ಮೊದಲೇ ಸೂರ್ಯಾಸ್ತವಾಗಿ ಸುತ್ತಲೂ ಕತ್ತಲೆ ಆವರಿಸಿತು.

ರಾತ್ರಿ ಅಲ್ಲಿಯೇ ನಿಲ್ಲಲು ನಾನು ನಿರ್ಧರಿಸಿದೆ. ಹಿಮವನ್ನು ಅಗೆದು ತೆಗೆದು ಸ್ವಲ್ಪ ನೆಲವನ್ನು ಸಮತಟ್ಟುಗೊಳಿಸಿದೆವು. ಅದರ ಮೇಲೆ ಎಲ್ಲರೂ ಬ್ಲಾಂಕೆಟ್ಟುಗಳನ್ನು ಹಾಸಿದೆವು. ಚಂದ್ರಾ ನದಿ ಎರಡೇ ಫರ್ಲಾಂಗ್ ದೂರದಲ್ಲಿದ್ದರೂ ನಮ್ಮ ಅಸಾಧ್ಯ ನೀರಡಿಕೆ ತೀರಿಸಿಕೊಳ್ಳಲು ಅಲ್ಲಿಯ ವರೆಗೆ ನಡೆಯುವ ಶಕ್ತಿ ನಮಗಿರಲಿಲ್ಲ. ಹಿಮವನ್ನು ತಿಂದೇ ತೃಪ್ತಿಪಟ್ಟುಕೊಳ್ಳಬೇಕಾಯಿತು. ಆದರೆ ಅದರಿಂದ ಬಾಯಾರಿಕೆ ತಣಿಯುವ ಬದಲು ಮತ್ತಷ್ಟು ಹೆಚ್ಚಿತು.

ರಾತ್ರಿ ಪುನಃ ಹಿಮ ಬೀಳಲು ಪ್ರಾರಂಭವಾದ್ದರಿಂದ ನಿದ್ದೆ ಮಾಡುವುದಂತೂ ಅಸಾಧ್ಯವೇ ಆಗಿತ್ತು. ನಾವು ಹೊತ್ತು ಕಳೆಯಲು ಏನೇನೊ ಹರಟಿದೆವು. ಒಬ್ಬರು ಇನ್ನೊಬ್ಬರ ಕೈಕಾಲುಗಳನ್ನು ತಿಕ್ಕಿದೆವು. ಸೂರ್ಯೋದಯವಾಗುವುದನ್ನೇ ಎದುರು ನೋಡುತ್ತ ಕೊನೆಯಿರದ ರಾತ್ರಿಯನ್ನು ಕಳೆದೆವು.

ಮುಂಜಾನೆ ನಮ್ಮ ಪಾದರಕ್ಷೆಗಳನ್ನು ಹಾಕಿಕೊಳ್ಳಲು ವಿಶೇಷ ಪ್ರಯತ್ನವೇ ಬೇಕಾಯಿತು.

ನಂತರ ಸಾವಕಾಶವಾಗಿ ನಡೆಯುತ್ತ ಹೋಗಿ ನದಿಯ ದಡವನ್ನು ತಲುಪಿದೆವು. ಅಲ್ಲಿ ಆಚೆ ದಡದಲ್ಲಿ ನಮ್ಮ ವಿಶ್ವಾಸನಿಷ್ಠ ಸೇವಕ ಪಂಭಿರಾಮ ನಮಗಾಗಿ ಕಾಯುತ್ತಿದ್ದ. ನದಿ ದಾಟಲು ನೀರು ಕಡಿಮೆ ಇರುವ ಸ್ಥಳವೊಂದನ್ನೂ ಅವನು ಗೊತ್ತುಮಾಡಿಟ್ಟಿದ್ದ. ತಿರುಗಿ ಬಂದು ನಮ್ಮನ್ನು ಕರೆದೊಯ್ಯುವ ಭರವಸೆ ಇತ್ತು, ನಮ್ಮೊಂದಿಗಿದ್ದ ಕೂಲಿಯಾಳುಗಳು ಮೊದಲು ನದಿ ದಾಟಿದರು. ಆದರೆ ಆಚೆದಡವನ್ನು ಸೇರಿದ ಬಳಿಕ ಅವರು ತಿರುಗಿ ಬಂದು ನಮ್ಮನ್ನು ಕರೆದೊಯ್ಯಲು ಸ್ಪಷ್ಟವಾಗಿ ನಿರಾಕರಿಸಿದರು.

ಕೂಲಿಯವರು ಈ ದಡದ ಒಂದು ಬಂಡೆಗೆ ಹಗ್ಗದ ಒಂದು ತುದಿ ಕಟ್ಟಿ ಅದನ್ನು ಹಿಡಿದುಕೊಂಡು ಆ ದಡಕ್ಕೆ ಒಯ್ದಿದ್ದರು. ಪಂಭೀರಾಮನೆ ಈಗ ಆ ಹಗ್ಗ ಹಿಡಿದ.

ನಾವು ನಮ್ಮ ಬಟ್ಟೆಗಳನ್ನೂ ಇತರ ಸೊತ್ತುಗಳನ್ನೂ ಕೊರಳಿಗೆ ಸುತ್ತಿಕೊಂಡೆವು. ಮನಸ್ಸು ಗಟ್ಟಿಮಾಡಿ ಬರಿ ಮೈಯಲ್ಲಿ ಕೈ ಕೈ ಹಿಡಿದುಕೊಂಡು ಹಗ್ಗದ ಗುಂಟ ಕೋಡುವ ಚಂದ್ರಾನದಿಯಲ್ಲಿಳಿದು ಅದನ್ನು ದಾಟಿದೆವು. ಹಾಗೆ ಮಾಡಿರದಿದ್ದರೆ ನಮ್ಮಲ್ಲಿದ್ದದ್ದೆಲ್ಲ ನಿರುಪಯುಕ್ತವಾಗುತ್ತಿತ್ತು. ಎಲ್ಲರೂ ದಾಟುವವರೆಗೂ ಪಂಭೀರಾಮ ಹಗ್ಗ ಹಿಡಿದುಕೊಂಡು ನಿಂತಿದ್ದ. ನದಿ ದಾಟಿದ ಬಳಿಕ ಅವನು ನಮ್ಮ ಕೈಕಾಲುಗಳನ್ನು ತಿಕ್ಕಿದನು.

ನದಿ ದಾಟುವಾಗ ನಮ್ಮ ಅಡಿಗೆಯವನ ಬುದ್ಧಿ ಕೆಟ್ಟು "ನನ್ನನ್ನು ಬಿಟ್ಟುಬಿಡಿ, ನಾನಿಲ್ಲಿ ಮುಳುಗಿ ಸಾಯುವೆ" ಎಂದು ಕೂಗತೊಡಗಿದ. ಅವನನ್ನು ಸುರಕ್ಷಿತವಾಗಿ ಕರೆತರುವುದಕ್ಕೆ ಬಹಳ ಕಷ್ಟವಾಗಿ ಹೋಯಿತು.

ಇಲ್ಲಿಂದ ಮುಂದೆ ಹಿಮದ ಮೇಲೆ ಮಾಡಿದ ದಾರಿ ಇದ್ದದರಿಂದ ನಮ್ಮ ಸತ್ವಪರೀಕ್ಷೆಯ ಮೊದಲನೇ ಘಟ್ಟ ಮುಗಿದಂತಾಯಿತು. ನಂತರ ಸಿಧಾನವಾಗಿ ನಡೆಯುತ್ತ ಹೋಗಿ ಛೋಟಾಧಾರ ರೆಸ್ಟ್‌ಹೌಸನ್ನು ತಲುಪಿದೆವು. ನಮ್ಮ ಪಾದಗಳು ಪುಗ್ಗದಂತೆ ಉಬ್ಬಿಕೊಂಡಿದ್ದವು. ಮಾನಸಿಕ ಹಾಗೂ ದೈಹಿಕವಾಗಿ ಸಂಪೂರ್ಣ ಬಳಲಿದ್ದೆವು. ಹಸಿವೆಯೂ ಬಾಧಿಸುತ್ತಿತ್ತು. ಛೋಟಾಧಾರದಲ್ಲಿ ನಮಗೆ ಮೈ ಕಾಯಿಸಿಕೊಳ್ಳಲು ವ್ಯವಸ್ಥೆ ಮಾಡಿಕೊಡಲಾಯಿತಲ್ಲದೆ ಬಿಸಿ ಚಹ ಹಾಗೂ ಆಹಾರವನ್ನೂ ಮಲಗಲು ಹಾಸಿಗೆಯನ್ನೂ ನೀಡಲಾಯಿತು ಅಲ್ಲಿ ಎರಡು ದಿನ ವಿಶ್ರಾಂತಿ ಪಡೆದ ಬಳಿಕ ನಾವು ಛತ್ರುಗೆ ತೆರಳಿ ಕೊನೆಗೆ ೩೦ ನೇ ತಾರೀಖಿನಂದು ಸಂಜೆ ಬೊಕ್ಸಾರಕ್ಕೆ ಆಗಮಿಸಿದೆವು. ಅಲ್ಲಿ ನಮಗೆ ಸ್ಪೀತಿ-ಲಹೌಲಗಳ ಡೆಪುಟಿ ಕಮೀಶನರರು ಹಾಗೂ ಇತರರು ಭೆಟ್ಟಿಯಾದರು. ನಿಸರ್ಗ ಪ್ರಕೋಪದ-ವಿರುದ್ಧ ನಡೆಸಿದ ಸಾವು ಬದುಕಿನ ಹೋರಾಟಕ್ಕಾಗಿ ಎಲ್ಲರೂ ನಮ್ಮನ್ನು ಅಭಿನಂದಿಸಿದರು. ಅಲ್ಲಿ ನಮಗೆ ಔಷಧೋಪಚಾರ ದೊರೆತರೂ ಪಾದಗಳ ನೋವು ಸಹಿಸಲು ಅಸಾಧ್ಯವಾಗಿತ್ತು. ಐದು ದಿನಗಳವರೆಗೆ ಅಲ್ಲಿ ವಿಶ್ರಾಂತಿ ಪಡೆದ ಬಳಿಕ ನಾವು ೧೪,೦೮೦ ಅಡಿ ಎತ್ತರದಲ್ಲಿರುವ ರೋಹತಾಂಗ ಕಣಿವೆಮಾರ್ಗವನ್ನು ದಾಟಿ ಅಕ್ಟೋಬರ ೬ನೇ ತಾರೀಖಿನಂದು ಸಂಜೆ ಮನಾಲಿಗೆ ಆಗಮಿಸಿದೆವು.

ಈ ಆರು ದಿನಗಳ ಯಾತ್ರೆಯಲ್ಲಿ ನಾವು ಭೀಕರ ದೃಶ್ಯಗಳನ್ನು ಕಂಡೆವು. ಅಸಂಖ್ಯ ಉರುಳುತ್ತಿರುವ ಬರ್ಫ ಮತ್ತು ಶಿಲಾಪಾತಗಳು ನಮ್ಮನ್ನೆದುರಿಸಿದವು. ನಾವು ಹಿಮ, ಕೆಸರು ಮತ್ತು ಕೊಳಚೆಗಳನ್ನು ಹಾದು ಸಾಗಬೇಕಾಯಿತು. ಕೆಲವೆಡೆ ೧೫೦ಅಡಿ ಎತ್ತರದ ಹಿಮರಾಶಿಯ ನಡುವೆ ದಾರಿಕಡಿದು ಹೋಗಬೇಕಾಗಿತ್ತು. ಇನ್ನೊಂದೆಡೆ ನಾಲ್ಕು ಕಳೇವರಗಳು ಕೂತಲ್ಲೆ ಹೆಪ್ಪುಗಟ್ಟಿ ಹೋಗಿದ್ದು ನಮ್ಮ ಕಣ್ಣಿಗೆಬಿತ್ತು. ಹಿಮರಾಶಿಯಲ್ಲಿ ಇನ್ನೆಷ್ಟು ಜನ ಹುಗಿದು ಹೋಗಿದ್ದರೋ ನಾನರಿಯೆ.

ಮನಾಲಿಯಲ್ಲಿ "ಟೈಮ್ಸ್ ಆಫ್ ಇಂಡಿಯಾ" "ಇಂಡಿಯನ್ ಎಕ್ಸ್‌ಪ್ರೆಸ್" "ಹಿಂದುಸ್ತಾನ ಟೈಮ್ಸ್" ಮೊದಲಾದ ಪತ್ರಿಕೆಗಳ ಹಾಗೂ ಪ್ರೆಸ್ ಟ್ರಸ್ಟ್ ಆಫ್ ಇಂಡಿಯಾದ ವರದಿಗಾರರು ನಮ್ಮ ಸಂದರ್ಶನ ಪಡೆದರು. ದುರಂತದ ಸಂಪೂರ್ಣ ವಿವರಗಳನ್ನು ನಾನು ಅವರಿಗೆ ತಿಳಿಸಿದೆ. ನನ್ನ ಹೇಳಿಕೆಯನ್ನು ಈ ಪತ್ರಿಕೆಗಳು ಮುಖ ಪುಟದಲ್ಲಿ ಪ್ರಕಟಿಸಿದವು. ನಾವು ತೆಗೆದುಕೊಂಡಿದ್ದ ಕೆಲವು ಫೋಟೋಗಳು ಇಂಡಿಯನ್

ಎಕ್ಸ್‌ಪ್ರೆಸ್‌ನಲ್ಲಿ ಪ್ರಕಟವಾದವು.

ಮನಾಲಿಯಲ್ಲಿ ಬಹಳ ಚಳಿ ಇದ್ದುದರಿಂದ ೮ ನೇ ತಾರೀಖಿನಂದು ನಾವು ಕುಲುಗೆ ಆಗಮಿಸಿದೆವು. ಅಕ್ಟೋಬರ ೯ ನೇ ತಾರೀಖಿನಂದು ಪಂಜಾಬದ ಮುಖ್ಯ ಮಂತ್ರಿ ಪ್ರತಾಪಸಿಂಗ್ ಕೈರಾನರು ನಮಗೆ ಹೇಳಿ ಕಳಿಸಿದರು. ಸಭೆಯೊಂದರಲ್ಲಿ ನಮ್ಮನ್ನು ಅವರಿಗೆ ಭೆಟ್ಟಿ ಮಾಡಿಸಲಾಯಿತು. ಅವರು ನಮ್ಮನ್ನು ಬಹಳ ಆದರದಿಂದ ಕಂಡು ಮಾತನಾಡಿಸಿದರಲ್ಲದೆ ಅಲ್ಲಿ ನೆರೆದಿದ್ದವರಿಗೆ ತಿಳಿಯುವಂತೆ ನನ್ನ ಅನುಭವವನ್ನು ಸಂಪೂರ್ಣ ವಿವರಿಸಬೇಕೆಂದು ಕೇಳಿಕೊಂಡರು. ನಾನು ಸುಮಾರು ೧೫ ನಿಮಿಷಗಳ ವರೆಗೆ ಮಾತನಾಡಿ ಅವೆಲ್ಲವನ್ನೂ ತಿಳಿಸಿದೆ. ಎಲ್ಲರೂ ನನ್ನ ಭಾಷಣವನ್ನು ಬಹಳವಾಗಿ ಮೆಚ್ಚಿಕೊಂಡರು. ನಮ್ಮನ್ನು ಧೈರ್ಯಶಾಲಿಗಳೆಂದೂ ವೀರರೆಂದೂ ಬಾಯಿತುಂಬಾ ಹೊಗಳಿದರು. ಇಂಥ ಅಸಾಧ್ಯ ಪರಿಸ್ಥಿತಿಯಲ್ಲಿಯೂ ನಾವು ನಕಾಶಗಳನ್ನು (ಭೂಗರ್ಭ ಶೋಧನೆಗೆ ಸಂಬಂಧಪಟ್ಟದ್ದು) ನಮ್ಮೊಂದಿಗೆ ತಂದಿದ್ದೇವೆಂಬುದು ಗೊತ್ತಾದಾಗ ಮುಖ್ಯ ಮಂತ್ರಿಗಳು ಬಹಳ ಹರ್ಷ ವ್ಯಕ್ತ ಪಡಿಸಿದರು. ಹಾಗೂ ನಮ್ಮಿಂದ ನಕಾಶವನ್ನು ತೆಗೆದುಕೊಂಡು ನೋಡಿದರು. ಕುಲುದಲ್ಲಿ ನಡೆಯುವ ಎಲ್ಲ ಸರಕಾರಿ ಉಪಹಾರ ಹಾಗೂ ಭೋಜನ ಸಮಾರಂಭಗಳಿಗೂ ಅವರು ನಮಗೆ ಆಮಂತ್ರಣವಿತ್ತರು. ನಾವು ಬಾರಾಶಿಗ್ರಿಯಲ್ಲಿ ಸಿಕ್ಕಿಬಿದ್ದಾಗ ಅವರಿಗೆ ಬಹಳ ವಿವಂಚನೆಯುಂಟಾಗಿತ್ತೆಂದು ಕಾಣುತ್ತದೆ.

ಕೇಂದ್ರ ಉರುವಲು ಹಾಗೂ ಗಣಿಮಂತ್ರಿ ಶ್ರೀ ಮಾಲವೀಯರೂ ನಮ್ಮ ಯೋಗಕ್ಷೇಮ ವಿಚಾರಿಸಿದರು.

ನಮ್ಮ ತಂಡದಲ್ಲಿದ್ದವರೆಲ್ಲರನ್ನೂ ಸಿಮ್ಲಾಕ್ಕೆ ಕಳಿಸಿ, ಬಾರಾಶಿಗ್ರಿಯಲ್ಲಿ ನಾವು ಬಿಟ್ಟು ಬಂದ ಯಂತ್ರ ಸಲಕರಣೆ ಮತ್ತು ಅಮೂಲ್ಯ ಭೂಗರ್ಭ ಮಾದರಿಗಳನ್ನು ಮರಳಿ ಪಡೆಯುವ ಬಗ್ಗೆ ವ್ಯವಸ್ಥೆ ಮಾಡಲು ನಾನು ಅಲ್ಲಿಯೇ ಉಳಿದೆ. ಆ ಕಾರ್ಯಕ್ಕಾಗಿ ೧೩ ನೇ ತಾರೀಖಿನಂದು ವಿಶೇಷ ಕೂಲಿಯಾಳುಗಳನ್ನು ಕಳಿಸಿದೆ. ಅವೆಲ್ಲವೂ ಈಗ ನಮಗೆ ಮರಳಿ ದೊರೆತಿವೆಯೆಂದು ಹೇಳಲು ಸಂತೋಷವಾಗುತ್ತದೆ.

ನಮ್ಮ ತಂಡದಲ್ಲಿದ್ದ ಕೆಲವರಿಗೆ ಮಾನಸಿಕ ಅಸ್ವಾಸ್ಥ್ಯ ಉಂಟಾದರೂ ನಾನು ಮಾತ್ರ ಎದೆಗುಂದಲಿಲ್ಲ. ಅಷ್ಟಲ್ಲದೆ, ನನ್ನ ದೈಹಿಕ ಅಸ್ವಾಸ್ಥ್ಯದ ವಿಷಯವನ್ನು ಅವರಾರಿಗೂ ತಿಳಿಯಗೊಡಲಿಲ್ಲ. ಆದ್ದರಿಂದ ಅವರು ತಕರಾರು ಮಾಡದೆ ಸುಮ್ಮನೆ ನನ್ನನ್ನು ಹಿಂಬಾಲಿಸಿದರು. ನಾವೆಲ್ಲರೂ ಒಳ್ಳೆ ಸಂಘ ಶಕ್ತಿಯನ್ನು ಪ್ರದರ್ಶಿಸಿದೆವು. ಪಂಜಾಬದ ಮುಖ್ಯ ಮಂತ್ರಿಗಳು ನಮ್ಮನ್ನು ಬಹುವಾಗಿ ಪ್ರಸಂಶಿಸಿ "ಪಂಜಾಬದ ಜನರು ಈ ತಂಡದಿಂದ ಒಂದು ಪಾಠ ಕಲಿಯಬೇಕು" ಎಂದರು.

ನನ್ನ ತಹಶೀಲ ಪೇದೆ ಪಂಭೀರಾಮನಿಗೆ ಸರಕಾರ್‌ ಬಹುಮಾನ ಕೊಡಬೇಕೆಂದು ನಾನು ಸಿಫಾರಸು ಮಾಡಿದ್ದೇನೆ. ಉಳಿದೆಲ್ಲ ಜನರಲ್ಲಿ ಅವನೊಬ್ಬನೇ ಅಸಾಮಾನ್ಯ ಮನುಷ್ಯ. ಲಹೌಲ ಕೊಳ್ಳದ ಯಾವುದೊ ಒಂದು ಹಳ್ಳಿಯವನಾದ ಪಂಭೀರಾಮ ಸರಳ, ಅಶಿಕ್ಷಿತ ಹಾಗೂ ವಿನಮ್ರ ಭಾವದ ವ್ಯಕ್ತಿ. ಆದರೆ ತನ್ನ ಜೀವಕ್ಕೊದಗಿದ ಗಂಡಾಂತರಗಳನ್ನು ಲೆಕ್ಕಿಸದೆ ಅವನು ತನ್ನ ಯಜಮಾನನಿಗೆ ನಿಷ್ಠೆ ತೋರಿಸಿದ. ನಾವು ನದಿ ದಾಟುವಾಗ ಈ ಮನುಷ್ಯ ಕಣ್ಣಲ್ಲಿ ನೀರು ಸುರಿಸುತ್ತಾ ಕಾಯುತ್ತಿದ್ದನಲ್ಲದೆ ನಾವು ಜೀವಂತ ಪಾರಾದರೆ ಏನಾದರೂ ಕಾಣಿಕೆ ಸಲ್ಲಿಸುವುದಾಗಿ ದೇವರನ್ನು ಪ್ರಾರ್ಥಿಸುತ್ತಿದ್ದ! ಅವನಿಗೆ ಶಿರಬಾಗಿ ವಂದಿಸುತ್ತೇನೆ. ಮೊಸಳೆಯ ಕಣ್ಣೀರು ಸುರಿಸುವ ಹಾಗೂ ವಂಚನೆಯ ಮಾತುಗಳನ್ನಾಡುವ ಜನರಿರುವ ಈ ಜಗತ್ತಿನಲ್ಲಿ ನಮ್ಮ ಈ ಪೇದೆ ಪುತ್ಥಳಿ ಬಂಗಾರದಂತಿದ್ದಾನೆ. ಬಿಟ್ಟುಬಂದ ಸರಕುಗಳನ್ನು ಮರಳಿ ಪಡೆಯುವುದಕ್ಕೆ ನೆರವಾಗಲು ಅವನು ಪುನಃ ಬಾರಾಶಿಗ್ರಿಗೆ ಹೋಗಿದ್ದನು.

ಒಂದೇ ಸಂತಸದ ಮಾತೆಂದರೆ, ಕಷ್ಟವನ್ನನುಭವಿಸುತ್ತ ಜಗತ್ತಿನಲ್ಲಿ ಪ್ರತ್ಯೇಕವಾಗಿದ್ದಾಗಲೂ ನಾನು ಒಯ್ದಿದ್ದ ಟ್ರಾನ್ಸಿಸ್ಟರಿನ ಮೂಲಕ ಹೊರ ಜಗತ್ತಿನಲ್ಲಿ ನಡೆಯುವುದೆಲ್ಲ ನಮಗೆ ತಿಳಿಯುತ್ತಿತ್ತು. *

೦೦೦೦೦೦೦೦೦



# ಸಂತತಿ ನಿಯಂತ್ರಣಕ್ಕೆ ಶಸ್ತ್ರಕ್ರಿಯೆ

ಡಾ. ಜಿ. ಎಂ. ಫಡಕೆ

ಡಾ. ಜಿ. ಎಂ. ಫಡಕೆ, ಎಂ. ಬಿ., ಎಫ್. ಆರ್. ಸಿ. ಎಸ್. ಅವರು ಮುಂಬಯಿಯ ಪ್ರಸಿದ್ಧ ಸರ್ಜನ್ನರು. ಈಚೆಗೆ ಅವರು ಸಂತತಿ ನಿಯಂತ್ರಣದಲ್ಲಿ ವಿಶೇಷ ಆಸಕ್ತಿ ವಹಿಸಿದ್ದಾರೆ. ನಮ್ಮ ದೇಶದ ಪರಿಸ್ಥಿತಿಯಲ್ಲಿ ಶಸ್ತ್ರಕ್ರಿಯೆಯ ಮೂಲಕ ಸಂತಾನೋತ್ಪಾದನೆಯನ್ನು ಪ್ರತಿಬಂಧಿಸುವುದೊಂದೇ ಜನಸಂಖ್ಯಾ ನಿಯಂತ್ರಣಕ್ಕೆ ಪರಿಣಾಮಕಾರಿ ಉಪಾಯವೆಂದು ಅವರ ದೃಢವಾದ ಅಭಿಪ್ರಾಯ.

ಜನನ ಪ್ರಮಾಣದಲ್ಲಿ ಜಗತ್ತಿನ ದೇಶಗಳಲ್ಲೆಲ್ಲ ಭಾರತ ಮತ್ತು ಚೀನ ಮುಂದಾಗಿವೆ. ಜಗತ್ತಿನಲ್ಲಿ ಪ್ರತಿ ನಿಮಿಷ ಹುಟ್ಟುವ ೨೦೦ ಮಕ್ಕಳಲ್ಲಿ, ಭಾರತದಲ್ಲಿ ೩೪ ಮತ್ತು ಚೀನದಲ್ಲಿ ೫೦ ಹುಟ್ಟುತ್ತಾರೆಂದು ಅಂದಾಜು ಮಾಡಲಾಗಿದೆ. ಭಾರತದಲ್ಲಿ ನಾವು ಪರಮಾಣು ಶಕ್ತಿಗಿಂತಲೂ ಪ್ರಜೋತ್ಪಾದನ ಶಕ್ತಿಗೆ ಹೆದರಬೇಕಾಗಿದೆ. ಇಲ್ಲಿ ಜನನ ಪ್ರಮಾಣ ಅನೇಕ ವರ್ಷಗಳಿಂದ ಇದ್ದಂತೆ, ಅಂದರೆ ಪ್ರತಿ ಸಾವಿರ ಜನಸಂಖ್ಯೆಗೆ ವರ್ಷಕ್ಕೆ ೪೬ ರಂತೆ ಉಳಿದಿದೆ; ಆದರೆ ಮರಣ ಪ್ರಮಾಣ ಸಾವಿರಕ್ಕೆ ೪೪ ರಿಂದ ೨೭ ಕ್ಕೆ ಇಳಿದಿದ್ದು ಮುಂದಿನ ಐದು ವರ್ಷಗಳಲ್ಲಿ ಅದು ೨೧ ಕ್ಕಿಳಿಯುವುದೆಂಬ ನಿರೀಕ್ಷೆ ಇದೆ.

ಇದೇ ನಮ್ಮ ದೇಶದಲ್ಲಿ ಜನಸಂಖ್ಯೆ ಮಿತಿ ಮೀರಿ ಹೆಚ್ಚುತ್ತಿರಲು ಮುಖ್ಯ ಕಾರಣ. ಮರಣ ಪ್ರಮಾಣಕ್ಕೂ ಜನನ ಪ್ರಮಾಣಕ್ಕೂ ಇರುವ ಅಂತರ ಸೇಕಡಾ ೧ ಕ್ಕಿಂತ ಹೆಚ್ಚಾಗಿದ್ದರೆ ಅದು ಜನಸಂಖ್ಯೆಯ ವಿಪರೀತ ಹೆಚ್ಚಳಕ್ಕೆ ಕಾರಣವಾಗಿ ದೇಶದ ಆರ್ಥಿಕ ವ್ಯವಸ್ಥೆಗೆ ತುಂಬಾ ಧಕ್ಕೆ ತರುತ್ತದೆ. ಭಾರತದಲ್ಲಿ ಸದ್ಯ ಈ ಅಂತರ ವರ್ಷಕ್ಕೆ ಸೇಕಡಾ ೨·೧ ರಷ್ಟು ಇದೆ.

ಈ ಶತಮಾನದ ಆರಂಭದಲ್ಲಿ ೨೩ ಕೋಟಿ ಇದ್ದ ಭಾರತದ ಜನಸಂಖ್ಯೆ ೧೯೩೦ ರ ವರೆಗೆ ನಾಲ್ಕು ಕೋಟಿಯಷ್ಟು ಮಾತ್ರ ಏರಿತು. ಆದರೆ ಮುಂದಿನ ೩೦ ವರ್ಷಗಳಲ್ಲಿ ಅದು (ಔಷಧ ಶಾಸ್ತ್ರದ ಅದ್ಭುತ ಪ್ರಗತಿಯಿಂದಾಗಿ ಮರಣ ಪ್ರಮಾಣ ಕಡಿಮೆಯಾದ್ದರಿಂದ) ೧೬ ಕೋಟಿಯಷ್ಟು ಹೆಚ್ಚಿಕೊಂಡಿದೆ. ಹೀಗೇ ಮುಂದುವರಿಯಗೊಟ್ಟರೆ ೧೯೭೫ ರೊಳಗೆ ಜನಸಂಖ್ಯೆ ಮತ್ತೆ ಇಮ್ಮಡಿಯಾಗುವುದು. ಈ ಅಗಾಧವಾಗಿ ಹೆಚ್ಚಿದ ಜನಸಂಖ್ಯೆಯು ನಮ್ಮ ಪಂಚವಾರ್ಷಿಕ ಯೋಜನೆ ಮತ್ತು ಹೆಚ್ಚು ಆಹಾರ ಬೆಳೆಯುವ ಸತ್ರದ ಫಲಗಳನ್ನೆಲ್ಲ ತಿಂದು ಹಾಕಿದ್ದರಿಂದ ಈ ಯೋಜನೆಗಳಿಂದ ಆಗಬೇಕಾಗಿದ್ದ ಜೀವನ ಮಟ್ಟದ ಸುಧಾರಣೆ ಆಗಲೇ ಇಲ್ಲ.

ಪರಿಸ್ಥಿತಿಯ ಗಂಭೀರತೆಯನ್ನು ಸರಕಾರ ಅರಿತಿದೆ. ಮೊದಲನೇ ಪಂಚವಾರ್ಷಿಕ ಯೋಜನೆಯಲ್ಲಿ ಕೇವಲ ರೂ. ೬೫ ಲಕ್ಷವನ್ನು ಸಂತತಿ ನಿಯಂತ್ರಣಕ್ಕಾಗಿ ವೆಚ್ಚ ಮಾಡಿದ್ದರೆ ಮೂರನೇ

"ಇಲಸ್ಟ್ರೇಟೆಡ್ ವೀಕ್ಲಿ" ಯಿಂದ

ಯೋಜನೆಯಲ್ಲಿ ಅದು ರೂ. ೨೫ ಅಲ್ಲ, ರೂ. ೫೦ ಕೋಟಿಯನ್ನು ಕೂಡ ಖರ್ಚು ಮಾಡಲು ಸಿದ್ಧವಾಗಿದೆ. ೧೯೫೯ ರಲ್ಲಿ ದಿಲ್ಲಿಯಲ್ಲಿ ಸಭೆ ಸೇರಿದ ಅಂತಾರಾಷ್ಟ್ರೀಯ ಮಿತ ಸಂತತಿ ಮಹಾಮಂಡಲವು ಮುಂದಿನ ೨೦ ವರ್ಷಗಳೊಳಗೆ ಭಾರತವು ಜನಸಂಖ್ಯೆಯನ್ನು ಅಂಕೆಗೆ ತರದೇ ಹೋದರೆ ನಮ್ಮ ದೇಶಾಭಿವೃದ್ಧಿ ಕಾರ್ಯಕ್ರಮಗಳೆಲ್ಲ ಕೆಟ್ಟು ದೇಶ ಹಾಳಾಗಿ ಹೋಗುವುದೆಂದು ಎಚ್ಚರ ಕೊಟ್ಟಿದೆ.

ಜನಸಾಮಾನ್ಯರು ದೇಶದ ಜನಸಂಖ್ಯೆಯ ಚಿಂತೆ ಹಚ್ಚಿಕೊಳ್ಳದಿದ್ದರೂ ತಮ್ಮ ದೊಡ್ಡ ಕುಟುಂಬಗಳ ಹೊಟ್ಟೆ ಹೊರೆಯುವ ಭಾರದಿಂದ ಸಾಕಷ್ಟು ಚಿಂತಿತರಾಗಿದ್ದಾರೆ. ಹಿಂದೆ ರೈತರೂ ಕೂಲಿಕಾರರೂ ಹೆಚ್ಚು ಮಕ್ಕಳಿದ್ದಷ್ಟೂ ಒಳ್ಳೇದೆಂದು ಭಾವಿಸುತ್ತಿದ್ದರು. ಕುಟುಂಬದಲ್ಲಿ ದುಡಿದು ಗಳಿಸುವವರ ಸಂಖ್ಯೆ ಹೆಚ್ಚುತ್ತದಲ್ಲ! ಆದರೆ ಈ ನಿರುದ್ಯೋಗದ ಕಾಲದಲ್ಲಿ ಪ್ರತಿ ಹಳ್ಳಿಗನೂ ಹೆಚ್ಚು ಮಕ್ಕಳಾದರೆ ಒದಗುವ ಕಷ್ಟವನ್ನರಿತಿದ್ದಾನೆ.

ಮಿತಿಮೀರಿದ ಜನಸಂಖ್ಯೆಯನ್ನು ಹಿಡಿತಕ್ಕೆ ತರಲು ಎರಡೇ ಉಪಾಯಗಳಿವೆ. ೧. ಮರಣ ಪ್ರಮಾಣವನ್ನು ಹೆಚ್ಚಿಸುವುದು. ೨. ಜನನ ಪ್ರಮಾಣವನ್ನು ಕಡಿಮೆ ಮಾಡುವುದು. ಯಾವ ನಾಗರಿಕ ಸಮಾಜವೂ ಸಾವುಗಳನ್ನು ಹೆಚ್ಚಿಸಲು ಇಚ್ಛಿಸದು. ಉಳಿದಿರುವ ಉಪಾಯವೆಂದರೆ ಜನನ ಪ್ರಮಾಣವನ್ನು ಕಡಿಮೆಮಾಡುವುದು.

ಸಂತತಿ ಪ್ರತಿಬಂಧಕ್ಕೆ ಹಲ ಉಪಾಯಗಳಿವೆ. ಪುರುಷ ಬೀಜವು ಸ್ತ್ರೀಯ ಅಂಡದೊಡನೆ ಸಮಾಗಮ ಹೊಂದದಂತೆ ನಡುವೆ ಎಲ್ಲಾದರೂ ತಡೆಯುವುದೇ ಅವುಗಳ ಮೂಲ ತತ್ವ. ಆದರೆ ಇದಕ್ಕೆ ಬೇಕಾದ ಕೃತ್ರಿಮ ಸಾಧನಗಳು ತುಟ್ಟಿಯಾಗಿರುತ್ತವೆ. ಅವುಗಳ ಉಪಯೋಗ ಕಷ್ಟವಾಗಿರುವುದಲ್ಲದೆ ಜನಸಾಮಾನ್ಯರ ತುಂಬಿದ ಮನೆಗಳಲ್ಲಿ ಈ ಸಾಧನಗಳನ್ನು ಗುಪ್ತವಾಗಿ ಇಡಲು ಕೂಡ ಅವಕಾಶ ದುರ್ಲಭವಾಗಿರುತ್ತದೆ. ಹೆಂಗಸಿನ ಹಡೆಯುವ ವಯಸ್ಸಿನುದ್ದಕ್ಕೂ ಇವುಗಳನ್ನುಪಯೋಗಿಸುತ್ತಲೇ ಹೋಗಬೇಕಾಗುವುದರಿಂದ ದಂಪತಿಗಳಿಗೆ ಬಹು ಬೇಗ ಬೇಜಾರು ಬಂದುಬಿಡುತ್ತದೆ. ಸಂತತಿ ಪ್ರತಿಬಂಧ ಸಾಧನಗಳು ವಿಫಲವಾಗುವುದಕ್ಕೆ ಇದು ಮುಖ್ಯ ಕಾರಣ. ನಮ್ಮ ಬಡ ಜನರಲ್ಲಿ ಹೆಚ್ಚಿನವರು ಅವುಗಳನ್ನು ಬಳಸಲಾರರೆಂಬುದು ಸ್ಪಷ್ಟವಾಗಿದೆ; ಮತ್ತು ಬಡವರು ಯಾವುದಾದರೊಂದು ಸಂತತಿ ಪ್ರತಿಬಂಧೋಪಾಯ ಮಾಡಿಕೊಂಡ ಹೊರತು ನಮ್ಮ ಜನಸಂಖ್ಯೆಯು ಏರಾಟ ಹೇಳಿಕೊಳ್ಳುವಷ್ಟು ಹಿಡಿತಕ್ಕೆ ಬಾರದು.

ಆದರೆ ಇಚ್ಛಿತ ಉದ್ದೇಶ ಸಾಧಿಸಲು ಒಂದು ಖಂಡಿತೋಪಾಯ ಇದೆ. ಅದೆಂದರೆ ಪುರುಷ ಅಥವಾ ಸ್ತ್ರೀಯ ಮೇಲೆ ಶಸ್ತ್ರಕ್ರಿಯೆ ಮಾಡುವುದು. ಗರ್ಭ ನಿಲ್ಲಲು ಕಾರಣವಾದ ಬೀಜಾಣುಗಳು ಪುರುಷ ಮತ್ತು ಸ್ತ್ರೀಯರಿಬ್ಬರಲ್ಲೂ ವಿಶೇಷ ಗ್ರಂಥಿಗಳಲ್ಲಿ ತಯಾರಾಗಿ ಅಲ್ಲಿಂದ ವಿಶಿಷ್ಟ ನಾಳಗಳ ಮುಖಾಂತರ (ಸ್ತ್ರೀಯರಲ್ಲಿ ಡಿಂಭನಳಿಕೆ ಮತ್ತು ಪುರುಷರಲ್ಲಿ 'ವಾಸ್' ನಳಿಕೆ) ಸಾಗುತ್ತವೆ. ಸಂಭೋಗಕಾಲದಲ್ಲಿ ಈ ಸ್ತ್ರೀ-ಪುರುಷ ಬೀಜಾಣುಗಳು ಕೂಡಿಕೊಂಡು ಗರ್ಭೋತ್ಪತ್ತಿಯಾಗುತ್ತದೆ. ಈ ನಳಿಕೆಯ ಒಂದು ಚಿಕ್ಕ ಅಂಶವನ್ನು ಕತ್ತರಿಸಿಬಿಟ್ಟರೆ ಬೀಜಾಣುಗಳು ದಾರಿಯಲ್ಲೇ ತಡೆಯಲ್ಪಡುವುದರಿಂದ ಸಂಭೋಗ ಕಾಲದಲ್ಲಿ ಅವು ಒಂದುಗೂಡದಂತೆ ಆಗುವುದು.

ಯಾವ ಶಾರೀರಿಕ ಕ್ರಿಯೆಗೂ ಭಂಗ ಬರುವುದಿಲ್ಲಾದ್ದರಿಂದ ಈ ಶಸ್ತ್ರಕ್ರಿಯೆಯಿಂದ ಯಾವ ದುಷ್ಪರಿಣಾಮವೂ ಆಗದು. ಹೆಂಗಸರಿಗೆ ಈ ಶಸ್ತ್ರಕ್ರಿಯೆ ಮಾಡಬೇಕಾದರೆ ಹೊಟ್ಟೆ ಸೀಳಬೇಕಾಗುವುದರಿಂದ ಅದು ದೊಡ್ಡ ಶಸ್ತ್ರಕ್ರಿಯೆ. ಪುರುಷರಲ್ಲಿ ಅದನ್ನು ೧೫-೨೦ ನಿಮಿಷಗಳಲ್ಲಿ ಮುಗಿಸಿಬಿಡಬಹುದು. ಕೂಡಲೆ ಆತ ಮನೆಗೆ ಹೋಗಲಡ್ಡಿಯಿಲ್ಲ. ಯಾವ ತೊಡಕಿನ ಪರಿಣಾಮವೂ ಆಗುವುದಿಲ್ಲ. ಮೂರು ತಿಂಗಳ ವರೆಗೆ ಅವನು ಸಂಭೋಗವನ್ನು ವರ್ಜಿಸಬೇಕೆಂಬುದೊಂದೇ ವಹಿಸಬೇಕಾದ ಮುನ್ನೆಚ್ಚರಿಕೆ.

ಇದರ ಖರ್ಚೂ ತೀರ ಕಡಿಮೆ. ಒಬ್ಬ ಡಾಕ್ಟರನು ಚಿಕ್ಕ ಪೆಟ್ಟಿಗೆಯಲ್ಲಿ ಆರು ಜನರಿಗೆ ಶಸ್ತ್ರಕ್ರಿಯೆ ಮಾಡಲು ಬೇಕಾಗುವಷ್ಟು ಶಸ್ತ್ರಗಳನ್ನೂ ಶುದ್ಧೀಕೃತ ಡ್ರೆಸಿಂಗ್ ಸಾಮಗ್ರಿ

# ಬಾಯಿಯ ದುರ್ಗಂಧವನ್ನು ಕಾಲ್ಗೇಟಿನಿಂದ ತೊಲಗಿಸಿರಿ

ಅದರೊಂದಿಗೆ ದಿನವಿಡೀ

# ದಂತಕ್ಷಯವನ್ನು ಇದಿರಿಸಿರಿ !




ನಿಮಗೆ ಹಲ್ಲುಪುಡಿ ಹೆಚ್ಚು ಇಷ್ಟವಾದಲ್ಲಿ ಈ ಎಲ್ಲಾ ಪ್ರಯೋಜನಗಳನ್ನು ಕಾಲ್ಗೇಟ್ ಟೂತ್ ಪೌಡರ್‌ನಿಂದಲೂ ಪಡೆಯಿರಿ...ಒಂದು ಡಬ್ಬಿ ಹಲವು ತಿಂಗಳುಗಳವರೆಗೆ ಸಾಕಾಗುವುದು !

ಏಕೆಂದರೆ : ಕಾಲ್ಗೇಟ್ ಡೆಂಟಲ್ ಕ್ರೀಮ್‌ನೊಂದಿಗೆ ಒಮ್ಮೆ ಹಲ್ಲುಜ್ಜುವುದರಿಂದ ಬಾಯಿಯಲ್ಲಿ ದುರ್ಗಂಧವನ್ನುಂಟುಮಾಡುವ ಹಾಗೂ ಹಲ್ಲುಗಳನ್ನು ಕ್ಷಯಿಸುವ ಶೇಕಡ 85ರಷ್ಟು ಕ್ರಿಮಿಗಳು ನಾಶವಾಗುತ್ತವೆ

ಊಟವಾದೊಡನೆ ಕಾಲ್ಗೇಟ್‌ನಿಂದ ಹಲ್ಲುಜ್ಜುವುದರಿಂದ ದಂತಮಂಜನಗಳ ಇತಿಹಾಸದಲ್ಲೇ ಹಿಂದೆಂದೂ ಆಗದಷ್ಟು ಅಧಿಕ ಜನರ ದಂತಕ್ಷಯವನ್ನು ಅಧಿಕ ಪ್ರಮಾಣದಲ್ಲಿ ತಡೆಗಟ್ಟಲು ಸಾಧ್ಯವಾಗುತ್ತದೆ. ಇದಲ್ಲದೆ ಕಾಲ್ಗೇಟ್‌ನಿಂದ 10ರಲ್ಲಿ 7 ಸಂದರ್ಭಗಳಲ್ಲಿ ಬಾಯಿಯ ದುರ್ಗಂಧವು ಕೂಡಲೇ ನಿವಾರಿಸಲ್ಪಡುತ್ತದೆ. ಈ ಎರಡು ಪ್ರಮಾಣಗಳನ್ನು ಕಾಲ್ಗೇಟ್ ವೈಜ್ಞಾನಿಕ ಪರೀಕ್ಷೆಗಳ ಮುಖೇನ ಸಿದ್ಧಗೊಳಿಸಿರುತ್ತದೆ. ಕಾಲ್ಗೇಟಿಗೆ ಮಾತ್ರ ಈ ಪ್ರಮಾಣವಿದೆ!

ಊಟವಾದ ಮೇಲೆ ಬರೇ [illegible] ಮುಕ್ಕಳಿಸುವುದರಿಂದ ಪ್ರಯೋಜನವಾಗಲಾರದು ಪ್ರತಿ ಊಟದ ಮೇಲೆ ತಪ್ಪದೆ ನಿಮ್ಮ ಹಲ್ಲುಗಳನ್ನು ಕಾಲ್ಗೇಟಿನಿಂದ ಉಜ್ಜಿರಿ. ಇದರ ಪ[illegible]ವಾದ, ಸಂದು ಸಂದುಗಳಿಗೆ ಒಳಸುಗ್ಗುವ ನೊರೆಯು [illegible]ಚರವಾದ ಹಲ್ಲುಗಳ ನಡುವಿನ ಸಂದುಗಳಿಗೆ ಹೊಕ್ಕು ನಿಮ್ಮ ಬಾಯಿಯ ದುರ್ಗಂಧಕ್ಕೂ, ಹಲ್ಲುಗಳ ಕ್ಷಯಿಸುವಿಕೆಗೂ ಕಾರಣವಾದ ಕೊಳೆಯುತ್ತಿರುವ ಆಹಾರ ಕಣಗಳನ್ನು ನಿವಾರಿಸಿ ಸ್ವಚ್ಛಗೊಳಿಸುವುದು.

ಮಕ್ಕಳಿಗೆ ಕಾಲ್ಗೇಟಿನಿಂದ ಹಲ್ಲುಜ್ಜುವುದೆಂದರೆ ತುಂಬಾ ಪ್ರೀತಿ, ದೀರ್ಘಕಾಲ ಉಳಿಯುವ ಅದರ ನೆಚ್ಚಿನ ಪೆಪರ್‌ಮಿಂಟ್ ಸ್ವಾದವು ಇದರಲ್ಲಿ ಕೂಡಿರುತ್ತದೆ.




ಕಾಲ್ಗೇಟಿನಿಂದ ತಪ್ಪದೆ ಹಲ್ಲುಜ್ಜುವುದರಿಂದ

- ✔ ಬಾಯಿಯ ದುರ್ಗಂಧವು ನಿವಾರಿಸಲ್ಪಡುತ್ತದೆ
- ✔ ದಂತಕ್ಷಯವನ್ನು ನಿರೋಧಿಸಲಾಗುವುದು
- ✔ ಹಲ್ಲುಗಳು ಪರಿಶುಭ್ರವಾಗಿ ಉಳಿಯುವವು




ಬಾಯಿಯ ದುರ್ಗಂಧವನ್ನು ನಿವಾರಿಸಲು ಮತ್ತು ಹಲ್ಲುಗಳು ಶುಭ್ರವಾಗಿರಲು... ಹೆಚ್ಚಿಗೆ ಜನರು ಪ್ರಪಂಚದ ಇನ್ನಿತರ ಡೆಂಟಲ್ ಕ್ರೀಮ್‌ಗಳಿಗಿಂತ ಅಧಿಕವಾಗಿ ಕಾಲ್ಗೇಟನ್ನೇ ಕೊಂಡುಕೊಳ್ಳುತ್ತಾರೆ

ಗಳನ್ನೂ ತುಂಬಿಕೊಂಡು ಎಷ್ಟು ದೂರವಿದ್ದ ಹಳ್ಳಿಗೂ ಹೋಗಿ ಪ್ರಖರವಾದ ಹಗಲಿನ ಬೆಳಕಿನಲ್ಲಿ ಅಲ್ಲೇ ಅಣಿಗೊಳಿಸಿದ ಆಪರೇಶನ್ ಥಿಯೇಟರಿನಲ್ಲಿ ಯೋಗ್ಯ ಕ್ರಿಮಿಪ್ರತಿಬಂಧಕ ಮುಂಜಾಗ್ರತೆಯೊಡನೆ ಈ ಶಸ್ತ್ರಕ್ರಿಯೆಯನ್ನು ಮಾಡಿ ಮುಗಿಸಬಹುದು. ಒಮ್ಮೆ ಶಸ್ತ್ರಕ್ರಿಯೆ ಮುಗಿದ ಮೇಲೆ 'ರೋಗಿ'ಗೆ ಮಕ್ಕಳಾಗಲು ಸಾಧ್ಯವೇ ಇಲ್ಲ.

ಮಿತ ಸಂತಾನವನ್ನು ಸಾಧಿಸಲು ಇದು ಅತ್ಯುತ್ತಮ ಉಪಾಯವೆಂಬುದು ಖಂಡಿತ. ಆದರೆ ಇದಕ್ಕೆ ಎರಡು ಆಕ್ಷೇಪಗಳನ್ನು ಸಾಮಾನ್ಯವಾಗಿ ಎತ್ತಲಾಗುತ್ತದೆ. ಒಂದು, ಅದರಿಂದ ಗಂಡಸು ನಪುಂಸಕನಾಗುತ್ತಾನೆಂಬುದು ; ಇನ್ನೊಂದು ಇದನ್ನು ಉಪಸಂಹರಿಸಲು (ಆಪರೇಶನ್ ಮಾಡಿದ ಮೇಲೆ ತಿರುಗಿ ಮೊದಲಿದ್ದಂತೆ ಮಾಡಲು) ಬರುವುದಿಲ್ಲ ಎಂಬುದು

ಮೊದಲನೇ ಆಕ್ಷೇಪ ತೀರ ನಿರಾಧಾರ. ಈ ಶಸ್ತ್ರಕ್ರಿಯೆಯಲ್ಲಿ ಯಾವ ಮಹತ್ವದ ಗ್ರಂಥಿಯನ್ನೂ ತೆಗೆಯುವುದಿಲ್ಲ ಅಥವಾ ಅದರ ಕ್ರಿಯೆಯಲ್ಲಿ ಆತಂಕವೊಡ್ಡುವುದಿಲ್ಲ. ಆದ್ದರಿಂದ ನಪುಂಸಕತ್ವದ ಲಕ್ಷಣಗಳು ಕಾಣಿಸಿಕೊಳ್ಳಲು ಕಾರಣವೇ ಇಲ್ಲ. ಈ ಶಸ್ತ್ರಕ್ರಿಯೆ ಮಾಡಿಸಿಕೊಂಡ ಅನೇಕಾನೇಕ ಜನರ ಜೀವನವನ್ನು ಅನೇಕ ವರ್ಷಗಳ ವರೆಗೆ ನಾವು ಪರೀಕ್ಷಿಸಿದ್ದೇವೆ. ಅವರ ರಕ್ತದಲ್ಲಿ ಮಹತ್ವದ ಹಾರ್ಮೋನುಗಳಾವವೂ ಹ್ರಾಸ ಹೊಂದಿಲ್ಲ.

ಈ ಶಸ್ತ್ರಕ್ರಿಯೆಗೊಳಗಾದ ೨೦೦೦ ಜನರಿಗೆ ಅವರ ಅಭಿಪ್ರಾಯಗಳನ್ನು ಸಂಗ್ರಹಿಸುವ ಸಲುವಾಗಿ ನಾನು ಪ್ರಶ್ನೋತ್ತರ ಪತ್ರಿಕೆಗಳನ್ನು ಕಳಿಸಿದೆ. ಅವರಲ್ಲಿ ೬೫೫ ಜನರಿಂದ ಉತ್ತರಗಳು ಬಂದವು. ಒಂದೂ ಅಪವಾದವಿಲ್ಲದೆ, ಎಲ್ಲರೂ ಇದು ಅತ್ಯುತ್ತಮ ಸಂತತಿ ನಿಯಮನೋಪಾಯವೆಂದು ಹೇಳಿದ್ದರು. ಅವರಲ್ಲಿ ಕೆಲವರು ಮೊದಲು ಬೇರೆ ಸಂತತಿ ನಿಯಮನ ಸಾಧನಗಳನ್ನುಪಯೋಗಿಸಿ ಕೈಬಿಟ್ಟವರಾಗಿದ್ದರು. ಆರೋಗ್ಯ ವಿಚಾರದಲ್ಲಿ, ಸೇಕಡಾ ೭೫·೪ ಜನರು ತಮ್ಮ ಆರೋಗ್ಯದಲ್ಲಿ ಏನೂ ಬದಲಾವಣೆಯಾಗಿಲ್ಲೆಂದು ಹೇಳಿದ್ದರು; ೨೪.೫ ಜನರು ಆರೋಗ್ಯ ಸುಧಾರಣೆಯಾಗಿ ತಾವು ಹೆಚ್ಚು ಸತ್ವಶಾಲಿಗಳಾಗಿದ್ದೇವೆಂದಿದ್ದರು. ಈ "ಪುನರುಜ್ಜೀವನ"ಕ್ಕೆ ವೈಜ್ಞಾನಿಕ ಕಾರಣಗಳೇನೂ ಸಿಗುವುದಿಲ್ಲ; ಬಹುಶಃ ಹೆಚ್ಚು ಮಕ್ಕಳನ್ನು ಹಡೆಯುವ ಭಯದ ವಿಮೋಚನೆಯೇ ಇವರ ಉತ್ಸಾಹಕ್ಕೆ ಕಾರಣವಿರಬೇಕು.

ಇನ್ನು ಸಂಭೋಗಾಭಿಲಾಷೆ, ಅದರ ಪುನರಾವರ್ತನೆ ಮತ್ತು ಅದರ ಸಾಮರ್ಥ್ಯಗಳ ವಿಚಾರದಲ್ಲಿ ಸೇಕಡ ೮೦.೩ ಜನರು ಏನೂ ಬದಲಾವಣೆಯಾಗಿಲ್ಲೆಂದೂ ೧೧.೭ ಜನರು ಸಂಭೋಗ ಸಾಮರ್ಥ್ಯ ಹೆಚ್ಚಿದೆಯೆಂದೂ ಹೇಳಿದ್ದರು. ಸೇಕಡಾ ೭.೯ ಜನ ಮಾತ್ರ ಒಂದಲ್ಲ ಒಂದು ವಿಧದಿಂದ ಅದರಲ್ಲಿ ಕೊರತೆಯಾಗಿರುವುದಾಗಿ ಹೇಳಿದ್ದರೂ ಇದಕ್ಕೆ ಕಾರಣ ಈ ಶಸ್ತ್ರಕ್ರಿಯೆಗೆ ಸಂಬಂಧವಿಲ್ಲದ ಇತರ ಚಿಂತೆಗಳೆಂದು ತಿಳಿಸಿದ್ದರು. ಎಲ್ಲರೂ ಇದು ಅತ್ಯುತ್ತಮ ಸಂತತಿ ನಿಯಮನೋಪಾಯವೆಂದು ಒಪ್ಪಿದ್ದರು. ಅವರಲ್ಲಿ ಕೆಲವರು ೧೦–೨೫ ವರ್ಷ ಮುಂಚೆ ಶಸ್ತ್ರಕ್ರಿಯೆ ಮಾಡಿಸಿಕೊಂಡವರಾಗಿದ್ದರು.

ಇದಲ್ಲದೆ ಮದುವೆಯ ನಂತರ ನಿಪುತ್ರಿಕರಾಗಿ ಕಂಡು ಬಂದವರ ಪ್ರಕರಣಗಳೂ ಇದನ್ನೇ ದೃಢಪಡಿಸುತ್ತವೆ. ನಮ್ಮ ಕಡೆ ಬಂದ ಇಂಥ ೫೫೦ ಗಂಡಂದಿರಲ್ಲಿ ಯಾವುದೋ ರೋಗದಿಂದ ಬೀಜಾಣುವನ್ನೊಯ್ಯುವ ವಾಸ್ ನಳಿಕೆಯಲ್ಲಿ ತಡೆಯುಂಟಾಗಿತ್ತು. ಆದರೆ ಇವರೆಲ್ಲರೂ ಒಳ್ಳೇ ಆರೋಗ್ಯಶಾಲಿಗಳಾಗಿದ್ದರಲ್ಲದೆ ವ್ಯವಸ್ಥಿತವಾಗಿ ಸಂಭೋಗವನ್ನೂ ಆಚರಿಸುತ್ತಿದ್ದರು. ವಾಸ್ ನಳಿಕೆಯ ದೋಷದಿಂದ ಅವರ ಬೀಜಾಣುಗಳು ಮಾತ್ರ ವೀರ್ಯವನ್ನು ತಲಪಲಾರದ್ದರಿಂದ ಅವರ ವೀರ್ಯದಲ್ಲಿ ಬೀಜಾಣುಗಳಿರಲಿಲ್ಲ. ಅದರಿಂದ ಅವರಿಗೆ ಮಕ್ಕಳಾಗಿರಲಿಲ್ಲ. ಅಲ್ಲದೆ ಹುಟ್ಟುವಾಗಲೆ ಈ ನಲಿಕೆಗಳೇ ಇಲ್ಲದ ೭೨ ಪುರುಷರ ಪ್ರಕರಣಗಳೂ ನಮ್ಮ ಕಡೆ ಬಂದಿವೆ. ಅವರೆಲ್ಲರೂ ಉತ್ತಮ ಆರೋಗ್ಯದಲ್ಲಿದ್ದರು.

ಹೀಗಿದ್ದರೂ ತನ್ನ ಜನನೇಂದ್ರಿಯಗಳಿಗೆ ಸಂಬಂಧಪಟ್ಟ ಭಾಗಗಳ ಮೇಲೆ ಶಸ್ತ್ರಕ್ರಿಯೆ ಮಾಡ ಮೇಲೆ ಮನುಷ್ಯ ಬಹಳ ಅಂತರ್ಮುಖಿಯಾಗಿ ತನ್ನ ಇಂದ್ರಿಯ ವ್ಯಾಪಾರಗಳಲ್ಲಿ ಏನಾ

ದರೂ ಬದಲಾವಣೆಯಾಗಬಹುದೆಂದು ಕಲ್ಪಿಸಿಕೊಳ್ಳಬಹುದು ; ಮತ್ತು ಈ ಮಾನಸಿಕ ಭಯದಿಂದ ನಪುಂಸಕತ್ವ ಮಾತ್ರವಲ್ಲ, ಇನ್ನೂ ಕೆಲ ವಿಚಿತ್ರ ಲಕ್ಷಣಗಳು ವ್ಯಕ್ತವಾಗಬಹುದು. ಆದ್ದರಿಂದ ನಾವು ಶಸ್ತ್ರಕ್ರಿಯೆ ಕೈಕೊಳ್ಳುವ ಮೊದಲೇ 'ರೋಗಿ'ಗಳಿಗೆ, ಅಗತ್ಯ ಬಿದ್ದಾಗ ಚಿತ್ರ ಸಹಿತವಾಗಿ, ಈ ಶಸ್ತ್ರಕ್ರಿಯೆಯನ್ನು ವಿವರಿಸಿ, ಅದು ಹೇಗೆ ಯಾವ ಇಂದ್ರಿಯ ವ್ಯಾಪಾರಕ್ಕೂ ತಡೆ ಮಾಡುವುದಿಲ್ಲೆಂದು ತಿಳಿ ಹೇಳುತ್ತೇವೆ. ಆದರೂ ಅವರು ಶಂಕಿತರಾಗಿದ್ದರೆ ಅವರಿಗೆ ಶಸ್ತ್ರಕ್ರಿಯೆ ಮಾಡುವುದಿಲ್ಲ. ಇಂಥವರೇ ಮುಂದೆ ಕಾಲ್ಪನಿಕ ತೊಂದರೆಗಳನ್ನು ಸೃಷ್ಟಿಸಿಕೊಂಡು ಈ ಒಳ್ಳೇ ಶಸ್ತ್ರಕ್ರಿಯೆಗೆ ಅಪಕೀರ್ತಿ ತರುವವರು.

ಈಚೆಗಿನ ವರೆಗೂ ಒಮ್ಮೆ ಈ ಶಸ್ತ್ರಕ್ರಿಯೆಯಾದ ಮೇಲೆ ಮತ್ತೆ ಅದನ್ನು ಉಪಸಂಹರಿಸಲು (ಮೊದಲಿದ್ದಂತೆ ಮಾಡಲು) ಸಾಧ್ಯವಿಲ್ಲೆಂದೆಣಿಸಲಾಗಿತ್ತು. ಆದ್ದರಿಂದ ಸಾಕಷ್ಟು ಮಕ್ಕಳಾಗಿ ಇನ್ನು ಮಕ್ಕಳು ಬೇಡವಾದವರಿಗೇ ಇದನ್ನು ಮಾಡಬೇಕಾಗಿತ್ತು. ಆದರೂ ಎರಡನೇ ಮದುವೆಯಾಗುವ ಪ್ರಸಂಗ ಬಂದಾಗ ಇಲ್ಲವೇ ಇದ್ದ ಮಗ ಸತ್ತಾಗ ಸಮಸ್ಯೆ ಉತ್ಪನ್ನವಾಗುತ್ತಿತ್ತು.

ಇಂಥ ಪ್ರಸಂಗಗಳಲ್ಲಿ ನಾವು ವಾಸ್ ನಳಿಕೆಯನ್ನು ಪುನಃ ಜೋಡಿಸುವ ಯತ್ನ ಮಾಡಿದ್ದೇವೆ. ಅವು ತುಂಬ ಯಶಸ್ವಿಯಾಗಿವೆ. ನಾವು ಮಾಡಿದ ಇಂಥ ೩೧ ಪುನಸ್ಸಂಧಾನ ಶಸ್ತ್ರಕ್ರಿಯೆಗಳ ಪೈಕಿ ೨೮ ರಲ್ಲಿ ರೋಗಿಗಳ ವೀರ್ಯದಲ್ಲಿ ಪುನಃ ಬೀಜಾಣುಗಳು ಕಂಡುಬಂದಿವೆ. ಇವ

ಸಂತತಿ ನಿಯಮನಕ್ಕಾಗಿ ಶಸ್ತ್ರಕ್ರಿಯೆ ಮಾಡಿಸಿಕೊಳ್ಳುವ ಪುರುಷರಿಗೆ ಎರಡು ಭಯಗಳು ಕಾಡುತ್ತಿರುತ್ತದೆ. ಇದ್ದ ಮಕ್ಕಳು ತೀರಿದರೇನು ಗತಿ ? ಮತ್ತು ಹೆಂಡತಿ ಸತ್ತು ಎರಡನೇ ಮದುವೆಯಾಗಬೇಕಾದರೇನು ಗತಿ ? ಇದು ಸಾವಿರಕ್ಕೊ ಲಕ್ಷಕ್ಕೊ ಒಬ್ಬರಿಗೆ ಒದಗಬಹುದಾದ್ದ ಅವಘಡ. ಆದರೆ ಇಂಥ ಪ್ರಸಂಗಗಳಿಗೂ ಪರಿಹಾರದ ಆಶೆ ಇದೆ ಎಂದೀಚೆಗೆ ಕಂಡುಬಂದಿದೆ. ಡಾ. ಫಡಕೆಯವರು ಈ ವಿಚಾರದಲ್ಲಿ ಪ್ರಪಂಚದಲ್ಲೇ ಪ್ರಮುಖ ತಜ್ಞರಾಗಿದ್ದು ಕತ್ತರಿಸಿದ ವಾಸ್ ನಳಿಕೆಯನ್ನು ಅವರು ಪುನಸ್ಸಂಧಾನ ಮಾಡುವುದರಲ್ಲಿ ಯಶಸ್ವಿಯಾಗಿದ್ದಾರೆ. ಅಂಥವರಲ್ಲಿ ಹೆಚ್ಚಿನವರಿಗೆ ಮಕ್ಕಳೂ ಆಗಿವೆ.

ಹೀಗೆ ಒಮ್ಮೆ ಸಂತಾನ ನಿರೋಧಕ್ಕಾಗಿ ಶಸ್ತ್ರಕ್ರಿಯೆ ಮಾಡಿಸಿಕೊಂಡರೆ ಮುಂದೆ ಯಾವ ಉಪಾಯದಿಂದಲೂ ಮಕ್ಕಳನ್ನು ಪಡೆಯಲು ಸಾಧ್ಯವಿಲ್ಲ ಎಂಬ ಭಯಕ್ಕೆ ಇನ್ನು ಕಾರಣವಿಲ್ಲ. ವಾಸ್ ನಲಿಕೆಯನ್ನು ಪುನಃ ಜೋಡಿಸಲು ಡಾ. ಫಡಕೆಯವರಂಥ ಅಸಾಮಾನ್ಯ ಸರ್ಜನ್ನರೇ ಬೇಕೆಂದಿಲ್ಲ. "ಅದು ಸೂಕ್ಷ್ಮ ಶಸ್ತ್ರಕ್ರಿಯೆಯಾದರೂ ಪ್ರತಿ ಹಿರಿಯ ಸರ್ಜನ್ನನಿಗೂ ಅದನ್ನು ಮಾಡಲು ಸಾಧ್ಯವಿದೆಯೆಂದು ನನಗನಿಸುತ್ತದೆ. ಆದರೆ ಕಿರಿಯ ಸರ್ಜನ್ನರಿಗೆ ಅದರ ಸೂಕ್ಷ್ಮಗಳ ಅರಿವಾಗುವವರೆಗೆ ಅವರಿಗೆ ನಾನೀ ಕಾರ್ಯ ಒಪ್ಪಿಸಲಾರೆ" ಎಂದು ಡಾ. ಫಡಕೆ ನನಗೆ ಬರೆದಿದ್ದಾರೆ.

ಸದ್ಯವೇ ಕಲಕತ್ತೆಯಲ್ಲಿ ಸೇರಲಿರುವ ಸರ್ಜನ್ನರ ಸಂಘದ ಸಮ್ಮೇಳನದಲ್ಲಿ ಡಾ. ಫಡಕೆ ಈ ಬಗ್ಗೆ ಒಂದು ಪ್ರಬಂಧ ಓದುವವರಿದ್ದು ಈ ಪುನಸ್ಸಂಧಾನ ಶಸ್ತ್ರಕ್ರಿಯೆಯಲ್ಲಿ ಇತರ ಸರ್ಜನ್ನರ ಸಹಕಾರವನ್ನು ಪಡೆಯಲು ಯತ್ನಿಸಲಿದ್ದಾರೆ. ಇತರ ಸರ್ಜನ್ನರಿಗೂ ಅದು ( ಕತ್ತರಿಸಿದ ವಾಸ್ ನಳಿಕೆಯನ್ನು ಪುನಃ ಜೋಡಿಸುವುದು ) ಸಾಧ್ಯವಾದರೆ ಮುಂದೆ ಸಂತಾನ ನಿರೋಧ ಶಸ್ತ್ರ ಕ್ರಿಯೆಯ ಬಗ್ಗೆ ಜನರಿಗಿರುವ ಭಯ ಪೂರ್ತಿ ಹೊರಟು ಹೋಗಬಲ್ಲದು.

ರಲ್ಲಿ ೧೯ ಜನರ ಹೆಂಡಂದಿರಿಗೆ ಆ ಮೇಲೆ ಬಸಿರೂ ನಿಂತಿದೆ. ಇವರಲ್ಲಿ ಕೆಲವರು ೧೨-೧೫ ವರ್ಷ ಹಿಂದೆ ವಾಸ್ ನಳಿಕೆಯ ಶಸ್ತ್ರಕ್ರಿಯೆಗೊಳಗಾದವರಿದ್ದರೆಂದು ಇಲ್ಲಿ ಹೇಳಬೇಕಾಗಿದೆ.

ಯಾವ ವಯಸ್ಸಿನಲ್ಲಿ ಶಸ್ತ್ರಕ್ರಿಯೆ ಮಾಡುವುದುಚಿತ? ನಾನು ಶಸ್ತ್ರಕ್ರಿಯೆ ಮಾಡಿದ ಅತಿ ಎಳೆಯ ತರುಣನ ವಯಸ್ಸು ೨೮; ಆಗಲೇ ಅವನಿಗೆ ಒಂಭತ್ತು ಮಕ್ಕಳಾಗಿದ್ದವು. ಆದರೆ ಸಾಮಾನ್ಯವಾಗಿ ನಾವು ಪುರುಷನಿಗೆ ಸುಮಾರು ೩೫ ವಯಸ್ಸು ಯೋಗ್ಯವೆಂದು ಭಾವಿಸುತ್ತೇವೆ. ಅಷ್ಟರಲ್ಲಿ ಅವನಿಗೆ ಸಾಕಷ್ಟು ಮಕ್ಕಳಾಗಿ, ಒಂದು ವೇಳೆ ಹೆಂಡತಿ ತೀರಿಕೊಂಡರೂ ಎರಡನೇ ಮದುವೆ ಮಾಡಿಕೊಳ್ಳಲು ಹಿಂಜರಿಯುವ ಮನೋಭಾವಕ್ಕೆ ಬಂದಿರುತ್ತಾನೆ.

ಎಷ್ಟು ಮಕ್ಕಳಾದ ನಂತರ ಈ ಶಸ್ತ್ರಕ್ರಿಯೆ ಮಾಡಿಸಿಕೊಳ್ಳಬೇಕು! ಅಂತಾರಾಷ್ಟ್ರೀಯ ಮಿತ ಸಂತತಿ ಮಹಾಮಂಡಲವು ೩ ಎನ್ನುತ್ತದೆ. ಜನಸಂಖ್ಯಾ ನಿಯಂತ್ರಣದ ಬಗ್ಗೆ ಆತುರನಾದ ನಾನು ಎರಡನೇ ಮಗುವಿಗೆ ೩-೪ ವಯಸ್ಸಾದಾಗ ಮಾಡಬೇಕೆನ್ನುತ್ತೇನೆ.

ಹೆಂಗಸರ ಮೇಲೂ ಈ ಶಸ್ತ್ರಕ್ರಿಯೆ ಅಷ್ಟೇ ಪರಿಣಾಮಕಾರಿಯಾಗುತ್ತದೆ. ಅಂಡಾಣುವನ್ನು ಗರ್ಭಕೋಶಕ್ಕೊಯ್ಯುವ ನಳಿಕೆಯ ಒಂದಂಶವನ್ನು ಕತ್ತರಿಸಿದರಾಯಿತು. ಮುಂದೆ ಮಕ್ಕಳಾಗಲಾರವು. ಸಾಕಷ್ಟು ಮಕ್ಕಳಾದ ಮೇಲೆ, ಹೆರಿಗೆಯಾದ ಮೂರನೇ ದಿನ, ಈ ಶಸ್ತ್ರಕ್ರಿಯೆ ಮಾಡುವುದೊಳಿತೆಂದು ಪ್ರಸೂತಿ ಶಾಸ್ತ್ರಿಗಳ ಮತ. ಹೀಗೆ ಮಾಡಿದರೆ ಸಾಮಾನ್ಯವಾಗಿ ಹೆರಿಗೆ ಆಸ್ಪತ್ರೆಯಿಂದ ಹೊರಬೀಳುವ ಹೊತ್ತಿಗೇ 'ರೋಗಿ' ಹೊರಬೀಳಬಹುದು.

ಈ ಶಸ್ತ್ರಕ್ರಿಯೆಯ ನಂತರ ಮಹಿಳೆಯರು ಸ್ಥೂಲ ಶರೀರಿಗಳಾಗುತ್ತಾರೆಂಬುದಕ್ಕೆ ವೈಜ್ಞಾನಿಕ ಆಧಾರಗಳಿಲ್ಲ. ಬೇರೆ ರೋಗದಿಂದ ಡಿಂಭನಲಿಕೆಯಲ್ಲಿ ತಡೆಯುಂಟಾಗಿ ಶಸ್ತ್ರಕ್ರಿಯೆಗೊಳಪಟ್ಟವರಂತೆಯೆ, ಮಕ್ಕಳನ್ನು ಹಡೆಯುವುದು ತಡೆದುಬಿದ್ದ ಮಹಿಳೆಯರಿದ್ದಾರೆ ಅವರ ಮೈ ಸ್ಥೂಲವಾಗಿರುವುದಿಲ್ಲ. ಒಟ್ಟಿನ ಮೇಲೆ, ಹೇಗಿದ್ದರೂ ವಯಸ್ಸಾದಂತೆ ಹೆಂಗಸರು ಮೈತುಂಬಿಕೊಳ್ಳುತ್ತಾರೆ. ಬಸಿರಾಗುವ ಭಯ ತಪ್ಪಿದ ಮೇಲೆ ನಿಶ್ಚಿಂತೆಯುಂಟಾಗಿ ಅವರು ಹೆಚ್ಚು ಮೈತುಂಬಿಕೊಳ್ಳುವ ಸಂಭವ ಇಲ್ಲದಿಲ್ಲ.

ಜನಸಂಖ್ಯೆಯು ಹೆಚ್ಚಳದ ಮೇಲೆ ಎದ್ದುಕಾಣಿಸುವ ಪರಿಣಾಮ ಬೀರಲು ಇಂಥ ಎಷ್ಟು ಶಸ್ತ್ರಕ್ರಿಯೆಗಳು ಬೇಕಾಗಬಹುದು? ೧೯೫೮ ರಲ್ಲಿ ಶ್ರೀ ಆರ್. ಎ. ಗೋಪಾಲಸ್ವಾಮಿಯವರು ಪ್ರಕಟಿಸಿದ ಪ್ರಬಂಧದಲ್ಲಿ ಹೀಗೆ ಹೇಳಿದೆ:

"ಜಪಾನಿನಲ್ಲಿ ಪ್ರತಿ ವರ್ಷ ಪ್ರತಿ ೧೦೦೦ ಜನಸಂಖ್ಯೆಗೆ ಸರಾಸರಿ ೧೨ ರಂತೆ ಗರ್ಭಪಾತ ಮಾಡಿಸುವ ಮೂಲಕ ಹತ್ತು ವರ್ಷಗಳಲ್ಲಿ ಜನನ ಪ್ರಮಾಣವನ್ನು ಅರ್ಧಕ್ಕಿಳಿಸಲಾಯಿತು. ಪ್ರತಿ ಗರ್ಭಪಾತದಿಂದ ಒಂದು ಜನನವನ್ನಷ್ಟೇ ತಡೆದಂತಾಗುತ್ತದೆ. ಆದರೆ ಶಸ್ತ್ರಕ್ರಿಯೆಯಿಂದ ಮುಂದೆ ಕೊನೆವರೆಗೂ ಜನನಗಳು ನಿಲ್ಲುವುದರಿಂದ ಇಂಥ ಪ್ರತಿ ಶಸ್ತ್ರಕ್ರಿಯೆಯು ಎರಡಕ್ಕಿಂತ ಹೆಚ್ಚು, ಬಹುಶಃ ಮೂರು ಜನನಗಳನ್ನು ತಡೆಯುತ್ತ



ಗಂಡ: ಆಹಾ- ಡಿಯರ್....ನಿನ್ನ ಈ ಅಲಂಕಾರದ ಡಬ್ಬಗಳನ್ನೆಲ್ಲಾ ಮಾರಿದ್ರೆ ನನ್ನ ಒಂದು ತಿಂಗಳ ಸಂಬಳಾ ಹುಟ್ಟುತ್ತಿಲ್ಲೇ....!

ಬೆಂದರೂ ಸಲ್ಲುವುದು. ಹೀಗೆ, ಪ್ರತಿ ೧೦೦೦ ಜನ ಸಂಖ್ಯೆಗೆ ಪ್ರತಿವರ್ಷ ೫ ರಂತೆ (ಹೆಂಡತಿ ಅಥವಾ ಗಂಡನ ಮೇಲೆ) ಶಸ್ತ್ರಕ್ರಿಯೆ ನಡೆಸಿದರೆ ಅದು ಜನನ ಪ್ರಮಾಣವನ್ನು ಅರ್ಧಕ್ಕಿಳಿಸಿ ಅಲ್ಲೇ ಸ್ಥಿರಪಡಿಸಬಲ್ಲದು......"

ಈ ಲೆಕ್ಕದಿಂದ ೪,೫೦,೦೦,೦೦೦ ಜನ ಸಂಖ್ಯೆಯ ಮಹಾರಾಷ್ಟ್ರ ರಾಜ್ಯದಲ್ಲಿ ಮುಂದಿನ ೧೦ ವರ್ಷಗಳಲ್ಲಿ ವರ್ಷಕ್ಕೆ ಸರಾಸರಿ ೨,೨೫,೦೦೦ ಶಸ್ತ್ರಕ್ರಿಯೆಗಳನ್ನು ಕೈಕೊಳ್ಳಬೇಕಾದೀತು. (ಮೈಸೂರಿನ ೨,೩೫,೦೦,೦೦೦ ಜನ ಸಂಖ್ಯೆಗೆ ವಾರ್ಷಿಕ ೧,೧೭,೫೦೦ ಶಸ್ತ್ರಕ್ರಿಯೆಗಳು ಸಾಕು) ಇದು ಮೇಲೆ ಮೇಲೆ ಕಾಣಿಸುವಷ್ಟು ಕಷ್ಟವೇನೂ ಅಲ್ಲ. ಬ್ಲಾಕ್ ಮತ್ತು ಪಂಚಾಯತ ಕಾರ್ಯಕ್ರಮಗಳು ಇಡೀ ರಾಜ್ಯಕ್ಕೆ ಅನ್ವಯಿಸಲಿದ್ದು ಪ್ರತಿ ಬ್ಲಾಕಿನಲ್ಲಿ ೬೦-೭೦ ಸಾವಿರ ವ್ಯಕ್ತಿಗಳು ಸೇರುತ್ತಾರೆ. ಅದರಲ್ಲಿ ಪ್ರಾಥಮಿಕ ಶಸ್ತ್ರಕ್ರಿಯಾ ಸೌಕರ್ಯವುಳ್ಳ ಆರೋಗ್ಯ ಕೇಂದ್ರವಿದೆ. ಇಂಥ ಪ್ರತಿ ಕೇಂದ್ರದಲ್ಲಿ ಮೇಲಿನ ಲೆಕ್ಕದಂತೆ ವಾರಕ್ಕೆ ೮-೧೦ ಶಸ್ತ್ರಕ್ರಿಯೆಗಳನ್ನು ನೆರವೇರಿಸಿದರೆ ಸಾಕು. ಗಂಡಸರ ಮೇಲೆ ಶಸ್ತ್ರಕ್ರಿಯೆ ಸುಲಭವಾಗಿದ್ದು ತರಬೇತಿ ಹೊಂದಿದ ಸರ್ಜನ್ನನು ಬೇರೆ ಬೇರೆ ಬ್ಲಾಕ್ ಕೇಂದ್ರಗಳಿಗೆ ಭೆಟ್ಟಿಕೊಟ್ಟು ಪ್ರತಿ ವಾರ ಈ ಶಸ್ತ್ರಕ್ರಿಯೆಯನ್ನು ಪೂರೈಸಬಹುದು. ಅವನು ದಿನಕ್ಕೆ ಮೂರು ನಾಲ್ಕು ಘಂಟೆ ದುಡಿದರೆ ಧಾರಾಳವಾಯಿತು.

ನನ್ನ ಅಭಿಪ್ರಾಯದಲ್ಲಿ ನಮ್ಮ ಜನಸಂಖ್ಯಾ ನಿಯಂತ್ರಣ ಕಾರ್ಯಕ್ರಮದಲ್ಲಿ ಸಂತತಿ ಪ್ರತಿಬಂಧ ಶಸ್ತ್ರಕ್ರಿಯೆಗೆ, ವಿಶೇಷವಾಗಿ ಪುರುಷರಲ್ಲಿ, ಪ್ರಾಮುಖ್ಯ ಸ್ಥಾನ ಕೊಡುವುದು ಅಗತ್ಯ. ಅದು ನಿರುಪದ್ರವಿಯಾದದ್ದು, ಸುಲಭವಾದದ್ದು. ಆದರೆ ಇದರ ಬಗ್ಗೆ ತೀವ್ರವಾದ ಪ್ರಚಾರ ಅಗತ್ಯ. ನನ್ನ ಅಭಿಪ್ರಾಯದಲ್ಲಿ ಮಿತ ಸಂತಾನದ ಬಗ್ಗೆ ಸಾಕಷ್ಟು ಪ್ರಚಾರವಾಗುತ್ತಿಲ್ಲ. ದೇಶದ ಮಿತಿ ಮೀರಿದ ಜನ ಸಂಖ್ಯೆಯ ಸಮಸ್ಯೆ ಮತ್ತು ಅದರಿಂದ ಒದಗುವ ಪ್ರತಿಕೂಲ ಪರಿಸ್ಥಿತಿಯನ್ನು ಜನರ ಮುಂದೆ ಸದಾ ಇಡುತ್ತಿರಬೇಕು. *



## "ಮ್ಯಾಜಿಸ್ಟ್ರೇಟರಿಗೆ ಫಾಶಿ"

ಮುಂಬೈಯ ಹಿಂದಿನ ಪ್ರೆಸಿಡೆನ್ಸಿ ಮ್ಯಾಜಿಸ್ಟ್ರೇಟ್ ಆಸ್ಕರ ಬ್ರಾವುನರು ಬಹಳ ವಿನೋದಿ ಸ್ವಭಾವದವರೆಂದು ಪ್ರಸಿದ್ಧರಾಗಿದ್ದರು. ಜನ್ಮತಃ ಆಂಗ್ಲರಾಗಿದ್ದರೂ ಭಾರತೀಯ ಜನರಲ್ಲಿ ಹೊಂದಿಕೊಂಡು ಹೋಗುವ ಪ್ರವೃತ್ತಿಯುವರಾಗಿದ್ದರು. ಅವರು ಪ್ರೆಸಿಡೆನ್ಸಿ ಮ್ಯಾಜಿಸ್ಟ್ರೇಟರೆಂದು ನಿವೃತ್ತರಾದ ನಂತರ ಅದೇ ನ್ಯಾಯಾಲಯದಲ್ಲಿ ವಕೀಲರು ಅವರನ್ನು ಸತ್ಕರಿಸಲೆಂದು ಜರುಗಿದ ಸಮಾರಂಭದಲ್ಲಿ ಅವರ ತೈಲ ಚಿತ್ರ ಅನಾವರಣವು ಮುಖ್ಯವಾಗಿತ್ತು. ತಮಗಿತ್ತ ಸತ್ಕಾರಕ್ಕೆ ಉತ್ತರ ಕೊಡುತ್ತ ಆಸ್ಕರ ಬ್ರಾವುನ್‌ರು "ನಾನು ಅಧಿಕಾರದಲ್ಲಿದ್ದಾಗ ಇದೇ ನ್ಯಾಯಾಲಯದಲ್ಲಿ ಅನೇಕರಿಗೆ ಫಾಶಿ ಶಿಕ್ಷೆ ಕೊಟ್ಟು ಜೋತಾಡುವಂತೆ ಮಾಡಿದ್ದೇನೆ. ಆದರೆ ಸತ್ಕಾರ ಮಾಡುವ ನೆಪದಿಂದ ನನಗೆ ನನ್ನ ನ್ಯಾಯಾಲಯದಲ್ಲಿಯೇ ಜೋತಾಡುವ ಪ್ರಸಂಗ ಬಂದೀತು ಎಂದು ಕನಸಿನಲ್ಲಿಯೂ ಎಣಿಸಿರಲಿಲ್ಲ!"

— ಸಂಜೀವ ಲಕ್ಷ್ಮೇಶ್ವರ

* * *

ಗಂಡಸು ಹೆಂಗಸಿಗೆ ನಿನ್ನ ಮುಖ ತೋರಿಸಬೇಡ ಎಂದಾಗ ಅದರರ್ಥ ಸಾಮಾನ್ಯವಾಗಿ ಇನ್ನು ನನ್ನ ಮುಂದೆ ಮಾತಾಡಬೇಡ ಎಂದೇ ಇರುತ್ತದೆ.

— ಮಾರ್ಗರೆಟ್ ಜ್ಯಾನಿಂಗ್

# ಬೀಬಿಘರದ ತಮಾಷೆ



ಬ್ರಿಟಿಶ್ ಪ್ರತೀಕಾರ ಎಷ್ಟು ಭೀಕರವಾಗಿರಬಲ್ಲದೆಂಬುದಕ್ಕೊಂದು ನಿದರ್ಶನ

ಸಂಗ್ರಹ: ಎಸ್. ಎ. ಕುಲಕರ್ಣಿ

ಕಾನಪುರದಿಂದ ಕಣ್ಮರೆಯಾದ ಬ್ರಿಟಿಶ್ ಪ್ರಭುತ್ವವು, ೧೭ ಜುಲೈ ೧೮೫೭ ರ ನಿರ್ಣಾಯಕ ಯುದ್ಧದ ನಂತರ ಮತ್ತೆ ಮೆಲ್ಲಮೆಲ್ಲನೆ ತನ್ನ ವಸಾಹತನ್ನು ಸ್ಥಾಪಿಸತೊಡಗಿತ್ತು. ವಿದ್ರೋಹಿ ಮುಖಂಡನಾದ ನಾನಾ ಧೋಂಡೊಪಂತನ ಮುಯ್ಯಿ ತೀರಿಸಿಕೊಳ್ಳಲು ಜನರಲ್ ಹೆವಲಾ-ಕ್‌ನು ಸುಸಜ್ಜಿತ ಸೈನ್ಯದೊಂದಿಗೆ ಬಿಠೂರದ ಕಡೆಗಾಗಲೇ ದಂಡೆತ್ತಿ ಹೋಗಿದ್ದ. ಪ್ರಥಮ ಭಾರತೀಯ ಸ್ವಾತಂತ್ರ್ಯ ಸಂಗ್ರಾಮವನ್ನು ಸದೆಬಡಿಯಲು. ಬಂದ ಜನರಲ್ ನೀಲ್ ಕಾನಪುರದ ಸುವ್ಯವಸ್ಥೆಗಾಗಿ ನಿಂತುಕೊಂಡಿದ್ದ. ಅವನ ನೀಲಮಯ ಕಿಡಿಗಣ್ಣುಗಳಲ್ಲಿ, ಘಟಿಸಿ ಹೋಗಿದ್ದ ಕಗ್ಗೊಲೆಯ ಭಯಾನಕ ಇತಿಹಾಸ ಸ್ಪಷ್ಟವಾಗಿ ಮೂಡಿ ನಿಂತಿತ್ತು.

ಜನರಲ್ ಹೆವಲಾಕ್ ಬರುವುದಕ್ಕಿಂತ ಪೂರ್ವದಲ್ಲಿ, ಕಾನಪುರದಲ್ಲಿ ದಂಗೆ ಎದ್ದ ಅನಿಯಂತ್ರಿತ ವಿದ್ರೋಹಿ ಸೈನ್ಯವು, ನಾನಾಸಾಹೇಬ ಧೊಂಡೊಪಂತನ ಸಮ್ಮತಿಯಿಲ್ಲದೆಯೇ, "ಬೀಬೀಘರ"ದ ಆಂಗ್ಲ ಸ್ತ್ರೀ-ಪುರುಷರನ್ನೆಲ್ಲ, ಒಬ್ಬೊಬ್ಬರನ್ನಾಗಿ ಆಹುತಿ ತೆಗೆದುಕೊಂಡಿತ್ತು. ಹೀಗಾಗಿ ಕಳೆದ ಎಷ್ಟೋ ದಿನಗಳಿಂದ ಅಲ್ಲಿ ಬಿದ್ದ ಶವಗಳು ಕೊಳೆತು, ಭಯಂಕರ ದುರ್ವಾಸನೆಯನ್ನು ಹರಡಿದ್ದವು. ಬಾಯ್ಬಿಡುತ್ತ ಬಿದ್ದ ಆ ಶವಗಳು ತಮ್ಮ ದುರ್ದಶೆಯನ್ನೂ ವಿದ್ರೋಹಿಗಳ ಹತ್ಯಾಕಾಂಡವನ್ನೂ ಹೇಳುತ್ತಿರುವಂತಿದ್ದವು. ಇಂಥ ಭಯಂಕರವಾದ ದೃಶ್ಯವನ್ನು ನೋಡಿ ನೀಲನ ಬಾಯಿಂದ ಒಮ್ಮೆಲೆ ಸೇಡಿನ ಕಿಡಿಗಳು ಹೊರಬಿದ್ದವು: "ಇದರ ಸೇಡು ತೀರಿಸಿಕೊಳ್ಳುವೆ.

ಇನ್ನು ಮುಂದೆ ಎಂದೂ ಈ ಹಿಂದುಸ್ತಾನದವರು ಆಂಗ್ಲರ ಮೇಲೆ ಕೈಯೆತ್ತುವ ಸಾಹಸವನ್ನು ಮಾಡದಂತೆ ಸೇಡನ್ನು ತೀರಿಸಿಕೊಳ್ಳುವೆ."

ಆಮೇಲೆ ವಿದ್ರೋಹಿಗಳ ಮನೆಮನೆಗಳಲ್ಲಿಯೂ ಅಮಾನುಷ ಅತ್ಯಾಚಾರ ಆರಂಭವಾಯಿತು. ಶಹರದ ಸುಮಾರು ಐದು ನೂರು ಶಾಂತಿಪ್ರಿಯ ವ್ಯಕ್ತಿಗಳ ಬಂಧನವಾಯಿತು. ಇದರಲ್ಲಿ ಕೆಲವರು ವಿದ್ರೋಹಿಗಳ ದಂಗೆಯಲ್ಲಿ ಸ್ವತಃ ಪಾತ್ರ ವಹಿಸಿದವರೂ ಇದ್ದರು.

ಶತರಂಜೀ ಓಣಿಯಲ್ಲಿ ಅಜೀಜನ್‌ಳ ಮಹಲಿನವರೆಗೂ ನೀಲನ ಅತ್ಯಾಚಾರದ ಸುದ್ದಿ ಹರಡಿತು. ಅಜೀಜನ್ ಅಪೂರ್ವ ಸುಂದರಿ. ನಾನಾಸಾಹೇಬ ಧೋಂಡೋಪಂತನ ಪ್ರೇರಣೆಯಿಂದ ದಂಗೆಯಲ್ಲಿ ಪರೋಕ್ಷವಾಗಿ ಭಾಗ ವಹಿಸಿದ್ದಳು. ಇದು ವರೆಗೂ ಅವಳನ್ನು ಹಿಡಿಯುವುದಾಗಿರಲಿಲ್ಲ. ಸಾವಿಗಾಗಿ ಅವಳೆಂದೂ ಅಂಜಿದವಳಲ್ಲ.

ಪ್ರತಿಭಟನೆಯಿಲ್ಲದೆ, ಸಾವಿಗೀಡಾಗುವುದು ಹೇಡಿತನವೆಂದು ಅವಳು ಬಗೆದಿದ್ದಳು. ಅವಳೊಂದಿಗೆ ಅಲ್ತಾಫನೂ ಅಡಗಿಕೊಂಡಿದ್ದ. ಅವನು ಕಲೆಕ್ಟರ್ ಹಿಡ್ಲರಸನ್‌ನ ಅಡುಗೆ ಆಳು ಆಗಿದ್ದ. ಕಳೆದು ಮೂರು ವರಷಗಳಲ್ಲಿ ನಾಲ್ಕು ವೇಷಗಳನ್ನು ಬದಲಿಸಿದ್ದ. ಒಮ್ಮೆ ಕಲೆಕ್ಟರನ ನಿಷ್ಠಾವಂತ ಸೇವಕನಾಗಿದ್ದ. ಮತ್ತೊಮ್ಮೆ ಕಾನಪುರ ಛಾವಣಿಯ ಜನರಲ್ ವ್ಹೀಲರ್‌ನ ಮಗಳಾದ ಫ್ಲೋರಾಳ ಪ್ರಿಯನಾಗಿ ನಾಟಕವಾಡಿದ. ಆ ಮೇಲೆ ಸಮಯ ಸಾಧಿಸಿ ಅವಳನ್ನು ಓಡಿಸಿಕೊಂಡು ಛಾವಣಿಯಿಂದ ಕಣ್ಮರೆಯಾಗಿಬಿಟ್ಟ. ಆದರೆ ಕೊನೆಗೆ ಫ್ಲೋರಾ ಇವನ ಬಲೆಯಿಂದ ಪಾರಾಗಿ ಓಡಿಹೋದಾಗ, ಅವನೂ ಸಹ ಬೀಬೀಘರದ ಅನ್ಯ ಕೈದಿಗಳೊಂದಿಗೆ ಬಂಧಿಸಲ್ಪಟ್ಟಿದ್ದ. ಹೆವಲಾಕ್ ಅಲ್ಲಿಗೆ ಬಂದ ನಂತರ, ಅವನ ಅನುಯಾಯಿಯಂತೆ, ಅವನ ಸಮರ್ಥಕನಂತೆ ನಡೆದುಕೊಂಡು ಮತ್ತೆ ಛಾವಣಿಯಲ್ಲಿ ಸ್ಥಾನಪಡೆದ. ಕಾನಪುರದಲ್ಲಿ ಆಂಗ್ಲರ ಪ್ರಭುತ್ವ ಪುನಃ ಆರಂಭವಾದಾಗ, ಹೆವಲಾಕನಿಗೆ ವಿಶ್ವಾಸವನ್ನು ತಂದುಕೊಡುವಂತಹ, ಮೊದಲಿನ ನಿಷ್ಠಾವಂತ ಸೇವಕನೊಬ್ಬನೂ ಉಳಿದಿರಲಿಲ್ಲ. ಆದ್ದರಿಂದ ಅಲ್ತಾಫನು ಅಜೀಜನ್‌ಳ ಮಹಲಿನಲ್ಲಿ ಬಂದು ಅಡಗಿಕೊಂಡಿದ್ದ. ಇವನೂ ಒಬ್ಬ ವಿದ್ರೋಹಿ ಎಂಬ ದೃಷ್ಟಿಯಿಂದಷ್ಟೇ ಅವಳು ಆಶ್ರಯವಿತ್ತಿದ್ದಳು.

ಒಂದು ದಿನ ಅಲ್ತಾಫ ಅವಳ ಮಹಲಿನಿಂದ ಫರಾರಿಯಾಗಿ ಸಂಜೆಯ ವರೆಗೂ ತಿರುಗಿ ಬಂದಿರಲಿಲ್ಲ. ಆದರೆ ಸ್ವಲ್ಪ ಹೊತ್ತಿನ ನಂತರ ಬಂದಾಗ —ಮದ್ಯದ ನಿಶೆಯಲ್ಲಿ ಜೋಲಿ ಹೊಡೆಯುತ್ತ, ಹಾಡುತ್ತ, ಕುಣಿಯುತ್ತ ನೀಲನ ಗುಣಗಾನ ಮಾಡತೊಡಗಿದ್ದ. ಅಜೀಜನ್ ಆಶ್ಚರ್ಯದಿಂದ ಅವನನ್ನೇ ನೋಡಹತ್ತಿದಳು. ಏನಾಯಿತೆಂದು ಕೇಳಿದಾಗ— ನೀಲ ಬಗೆಹರಿಯದ ಸಮಸ್ಯೆಯೊಂದರಲ್ಲಿ ಚಿಂತಾಕ್ರಾಂತನಾದಾಗ ತಾನು ಅದನ್ನು ಬಿಡಿಸಿಕೊಟ್ಟು ಬಂದುದಾಗಿ ಮಾತ್ರ ಹೇಳಿದ. ಇದರಿಂದ ನೀಲನಿಗೆ ಅವನ ಸ್ವಾಮಿನಿಷ್ಠೆಯ ಮೇಲೆ ವಿಶ್ವಾಸವಾಗಿ, ಮರುದಿನ ಅವನಿಗೆ ಪುರಸ್ಕಾರ ದೊರೆಯುವುದಲ್ಲದೆ ತನ್ನನ್ನು ಬಂಧಿಸುವರೆಂಬುದನ್ನು ಕೇಳಿ ಅಜೀಜನ್‌ಳಿಗೆ ಭಯವಾಯಿತು. ಅಂದೇ ಅಲ್ತಾಫ ಅಜೀಜನ್‌ಳಿಗೆ ತನ್ನ ಕಾಮುಕತೆಯನ್ನು ವ್ಯಕ್ತಪಡಿಸಿದ. ಹಾಗೆ ಮಾಡಿದ್ದು ಅದೇ ಮೊದಲನೆಯ ಸಲ. ಅದಲ್ಲದೆ ಸ್ಪಷ್ಟವಾಗಿ ಅವಳ 'ದೇಹದ ಬೆಲೆಯನ್ನು' ಕೇಳಿದ. ಹಾಗೂ ಹೀಗೂ, ಒಮ್ಮೆ ಆ ಪೇಚಿನ ಪ್ರಸಂಗವನ್ನು ತಪ್ಪಿಸಿಕೊಂಡು, ಅವನನ್ನು ಮೂರ್ಖನನ್ನಾಗಿ ಮಾಡಿ, ಆ ಜಾಲದಿಂದ ಅತಿ ಪ್ರಯಾಸದಿಂದ ಪಾರಾದಳು.

ಬೆಳಗ್ಗೆ ಅಲ್ತಾಫ ತಡಮಾಡಿ ಎದ್ದ. ಮುಖ ತೊಳೆದುಕೊಂಡು ಹೊರಗೆ ಹೋಗುವ ತಯಾರಿಯನ್ನು ಮಾಡತೊಡಗಿದ. ಅಜೀಜನ್‌ಳೂ ತನ್ನ ಕರ್ತವ್ಯವನ್ನು ನಿರ್ಧರಿಸಿಕೊಂಡಿದ್ದಳು. ಅಲ್ತಾಫನ ಯೋಜನೆಯನ್ನು ಪೂರ್ತಿಯಾಗಿ ತಿಳಿದುಕೊಳ್ಳುವುದು ಅವಳಿಗೆ ಅವಶ್ಯಕವಾಗಿತ್ತು. ಮುಂಜಾವಿನ ಫಲಾಹಾರವನ್ನು ಕೊಡುತ್ತ ಸಿಹಿ

ಸಿಹಿ ಮಾತುಗಳನ್ನಾಡಿ, ಅವನನ್ನು ಮೋಹ ಗೊಳಿಸಿ, ನೀಲನಂತಹ ಜಾಣ ಜನರಲ್‌ನಿಗೆ ಬಂದಂತಹ ಸಮಸ್ಯೆಯಾದರೂ ಏನು? ಎಂಬು ದನ್ನು ತಿಳಿದುಕೊಳ್ಳಲು ಪ್ರಯತ್ನಿಸಿದಳು.

"ಅದಕ್ಕೆ ಉತ್ತರ ಇವತ್ತು ಮಧ್ಯಾಹ್ನ ಬೀಬೀ ಘರದಲ್ಲಿ ದೊರೆಯುತ್ತದೆ—" ಅಲ್ತಾಫ ನಗುತ್ತ ನುಡಿದ. "ನೀಲ ಸಾಹೇಬರು ನನ್ನ ಮೇಲೆ ಬಹಳ ಸಂತೋಷಪಟ್ಟಿದ್ದಾರೆ. ಅಜೀಜನ್, ನಿನ್ನನ್ನು ನಾನು ಮದುವೆಯಾಗುತ್ತೇನೆ. ಆಮೇಲೆ ನಾವಿಬ್ಬರೂ ಇಡೀ ಜೀವನವನ್ನೆಲ್ಲ ಸುಖ–ಸಂತೋಷ ದಿಂದ ಕಳೆಯೋಣ. ಇದು ವರೆಗೂ ನಾವು ಮಾಡಿದ್ದನ್ನೆಲ್ಲ ಮರೆತುಬಿಡಬೇಕಾಗುತ್ತದೆ."

ಅದನ್ನು ಕೇಳಿ ಅಜೀಜನ್ ಸುಮ್ಮನಾದಳು. ಅಲ್ತಾಫ ಫಲಾಹಾರ ಮುಗಿಸಿಕೊಂಡು ಹೊರಟು ಹೋದ. ಅಂದು ಮಧ್ಯಾಹ್ನ ವಿದ್ರೋಹಿ ಕೈದಿಗಳ ಮೆರವಣಿಗೆಯನ್ನು 'ಬೀಬೀಘರ'ದ ವರೆಗೆ ತೆಗೆದುಕೊಂಡು ಹೋಗಿ ಅಲ್ಲಿ ಶಿಕ್ಷೆ ವಿಧಿಸುವರೆಂಬ ಸಮಾಚಾರವೂ ಅವಳಿಗೆ ತಿಳಿದುಬಂತು. ಅಂದಿನ ಆ ತಮಾಷೆಯನ್ನು ನೋಡಲಿಕ್ಕೆ ಊರಿನ ಜನರಿಗೆಲ್ಲ ಸಾರ್ವಜನಿಕ ಆಮಂತ್ರಣ ವನ್ನೀಯಲಾಗಿತ್ತು. ಅದಲ್ಲದೆ ಸಶಸ್ತ್ರ ಆಂಗ್ಲ ಸೈನಿಕರು ದಾರಿಯಲ್ಲಿ ಹೊರಟ ಭಾರತೀಯರಿಗೆ ತಲವಾರುಗಳ ಮೊನೆಗಳಿಂದ ಚುಚ್ಚಿ ಚುಚ್ಚಿ ಒತ್ತಾಯದಿಂದ ಆ ತಮಾಷೆಯನ್ನು ನೋಡಲಿಕ್ಕೆ ಕರೆದೊಯ್ಯುತ್ತಿರುವರೆಂಬ ಸುದ್ದಿಯೂ ತಿಳಿಯಿತು. ಆಗ ಅವಳೂ 'ಚೌಕಿ'ನಲ್ಲಿ ಹೋಗಿ ನಿಂತಳು.

ಕೈದಿಗಳ ಮೆರವಣಿಗೆ ಹೊರಟಿತು. ಹಸಿವು, ರೋಗರುಜೆ ಹಾಗು ಅಧಿಕಾರಿಗಳ ಚಾಟಿಯ ಹೊಡೆತದಿಂದ ಬೆಂದು ಬಳಲಿದ ಭಾರತೀಯರ ಕರಿಯ ಶರೀರ ಮತ್ತಿಷ್ಟು ಮಿಂಚತೊಡಗಿತ್ತು. ಬೆನ್ನಿನ ಮೇಲೆ ಮೂಡಿದ ಬಾರುಗಳು ಅವರ ತಪ್ಪಿನ ಕಥೆಯನ್ನು ಹೇಳತೊಡಗಿದ್ದವು. ಕೈ–ಕಾಲುಗಳಲ್ಲಿ ದೊಡ್ಡ ದೊಡ್ಡ ಕಬ್ಬಿಣದ ಸಂಕೋಲೆಗಳನ್ನು ತೊಡಿಸಿದುದರ ಮೂಲಕ ನಡೆಯಲಿಕ್ಕೆ ಬರುತ್ತಿರಲಿಲ್ಲ. ಹೆಚ್ಚಾಗಿ ಅಪರಿಚಿತ ಮುಖಗಳೇ ಇದ್ದವಾದರೂ ಅಜೀಜನ್‌ಳಿಗೆ ಬಹಳಷ್ಟು ಪರಿಚಯವಿದ್ದ ವ್ಯಕ್ತಿಗಳೂ ಕಂಡು ಬಂದರು.

ಅವರಲ್ಲಿ ಉದ್ದವಾದ ಜುಟ್ಟುವುಳ್ಳ ಜಗನ್ನಾಥ ಪಂಡಿತನೂ ಇದ್ದ. ಅವನು 'ಸತ್ತಿಚೌರಾ' ಘಾಟದ ಹರಿಮಂದಿರದ ಪೂಜಾರಿಯಾಗಿದ್ದ. ಕಥೆ, ಕೀರ್ತನಗಳ ಮಧ್ಯದಲ್ಲಿ, ತನ್ನ ಅದ್ಭುತ ವಾದ ವಾಗ್ಝರಿಯನ್ನು ಹರಿಯಿಸಿ, ಎಷ್ಟೋ ಸಲ ಶ್ರೋತೃಗಳಲ್ಲಿ ಆವೇಶ ತುಂಬುವಂತೆ ಮಾಡಿದ್ದ. ಒಣಗಿದ ತೆಳ್ಳನೆಯ ಶರೀರವಾದರೂ ತೇಜಸ್ಸಿನಿಂದ ತುಂಬಿತ್ತು. ಬೋಳಾದ ತಲೆಯಲ್ಲಿ ಅಧಿಕ ಕೂದಲುಳ್ಳ ಉದ್ದನೆಯ ಜುಟ್ಟವು ದೂರದಲ್ಲಿ ಹೊಳೆಯುತ್ತಿತ್ತು. ನಿಶ್ಶಕ್ತವಾದ ಶರೀರವನ್ನು ಹೊತ್ತುಕೊಂಡು ಮೆಲ್ಲಮೆಲ್ಲಗೆ ನಡೆಯತೊಡಗಿದ್ದ. ಅವನ ಬರಿ ಮೈಯಲ್ಲಿ ಚಬಕದ ಬಾರುಗಳು ಸ್ಪಷ್ಟವಾಗಿ ಮೂಡಿದ್ದವು. ಅವನು ನಿಷ್ಠಾವಂತ ಧರ್ಮಿಷ್ಠನೆಂಬುದು ಸುಪ್ರಸಿದ್ಧವಾಗಿತ್ತು. ಹಿಂದೂ ಸಂಸ್ಕೃತಿಯಲ್ಲಿ ನಂಬಿಕೆಯುಳ್ಳವನಾಗಿದ್ದ. ಆಚಾರ-ವಿಚಾರ ಉಳ್ಳವನಾಗಿದ್ದ. ಅದಲ್ಲದೆ ನಿಜವಾದ ದೇಶ ಭಕ್ತ, ನಿಷ್ಠಾವಂತ ಭಾರತೀಯನಾಗಿದ್ದ. ಅವನ ಬಳಿಯಲ್ಲಿಯೇ ಮುಲ್ಲಾ ಮಕಸೂದನಿದ್ದ. ಕಾನಪುರದ ದೊಡ್ಡ ಮಸೀದೆಯ ಹಿರಿಯನಾಗಿದ್ದ. ಅಜೀಜನ್‌ಳಿಗೆ ಅವನ ಪರಿಚಯವೂ ಚೆನ್ನಾಗಿ ಇತ್ತು. ರಮಜಾನ ಹಬ್ಬಗಳ ರಾತ್ರಿಯಲ್ಲಿ ಪವಿತ್ರ ಗ್ರಂಥವನ್ನು ಓದುವಾಗ ಮಧ್ಯದಲ್ಲಿ ಹಿಂದುಸ್ತಾನದ ವೈಭವವನ್ನು ವರ್ಣಿಸುತ್ತ ಹೋದಾಗ ಕೇಳುವವರ ಕಣ್ಣಲ್ಲಿ ನೀರು ತುಂಬಿ ಮೈಯಲ್ಲಿ ಆವೇಶ ಮೇರೆದಪ್ಪಿ ಹರಿಯತೊಡಗುತ್ತಿತ್ತು. ಇಂತಹ ಒಂದು ಸುಸಮಯದಲ್ಲಿ ನಾನಾಸಾಹೇಬ ಆತನ ಪಾದಧೂಳಿಯನ್ನು ತಲೆಗೆ ಹಚ್ಚಿಕೊಂಡು "ನೀವು ನಿಜವಾಗಿಯೂ ಭಾರತದ ಮುಸಲ್ಮಾನರಾಗಿದ್ದೀರಿ"— ಎಂದು ಉದ್ಗಾರ ತೆಗೆದಿದ್ದನು.

ಅಜೀಜನ್‌ಳ ಗುರುತಿನವರು ಇನ್ನೂ ಕೆಲವರಿದ್ದರು. ಕೆಲವರು ಸೈನಿಕರಿದ್ದರು. ಕೆಲವರು ಸೈನಿಕರಲ್ಲದವರೂ ಇದ್ದರು. ಆದರೆ ಅವರೆಲ್ಲ ಭಾರತದ ಸ್ವಾತಂತ್ರ್ಯಕ್ಕಾಗಿ ಏಕಕಂಠದಿಂದ ಕೂಗಿಕೊಳ್ಳುತ್ತ ಬಿಳಿಯರ ವಿರುದ್ಧ ದಂಗೆ ಎದ್ದವರೇ ಆಗಿದ್ದರು. ಹತ್ತು-ಹದಿನಾರು ವರುಷಗಳ ಮಧ್ಯದ ವಯಸ್ಸಿನ ಎರಡು ಮೂರು ಹುಡುಗರೂ ಇದ್ದರು. ಅವರ ಅಪರಾಧವಿಷ್ಟೆ—ಆ ಹುಡುಗರ ಪಾಲಕರು ದೊರೆತಿರಲಿಲ್ಲ. ಅದಕ್ಕಾಗಿ ಅವರ ಸ್ಥಾನದಲ್ಲಿ ಇವರನ್ನು ಬಂಧಿಸಲಾಗಿತ್ತು.

ಈ ಮೆರವಣಿಗೆಯ ಹಿಂದೆ ಜನತೆಯ ಒಂದು ದೊಡ್ಡ ಸಮೂಹವೇ ಹೊರಟಿತ್ತು ನಿಜ. ಅವರೇನೂ ಕೈದಿಗಳಾಗಿರಲಿಲ್ಲ. ಆದರೆ ಬಿಚ್ಚುಗತ್ತಿಯ, ಸಿದ್ಧಬಂದೂಕುಗಳ ಮಧ್ಯದಲ್ಲಿ ನೀಲನ ಆದೇಶದ ಮೇರೆಗೆ 'ಬೀಬೀಘರ'ದ ತಮಾಷೆಯನ್ನು ನೋಡಲು ಹೊರಟಿದ್ದರು. ಅಜೀಜನ್‌ಳೂ ಸಹ ಅದರಲ್ಲಿ ಹೋಗಿ ಸೇರಿಕೊಂಡಳು.

'ಬೀಬೀಘರ'ದಲ್ಲಿ ಅಲ್ತಾಫ 'ಹಾಜರ' ಇದ್ದ. ಅವನು ನೀಲಿಯ ಕಣ್ಣಿನ ನೀಲನೊಂದಿಗೆ ಇದ್ದುದು ಅಜೀಜನ್‌ಳಿಗೆ ಕಾಣಿಸಿತು. ಒಂದು ಕಡೆಗ ಗಲ್ಲು ಸಿದ್ಧವಾಗಿತ್ತು. ಇನ್ನೊಂದು ಕಡೆಗೆ ರಕ್ತ ಮಾಂಸದಿಂದ ತುಂಬಿದ್ದ ಬೀಬೀಘರದ ಪ್ರಾಂಗಣ. ಮತ್ತು ಮಧ್ಯದಲ್ಲಿ ಮುನ್ನೂರು 'ಅಪರಾಧಿ'ಗಳ ಪ್ರವಾಹ. ಇಂತಹದನ್ನೆಲ್ಲ ನೋಡುವದರಿಂದ ಅಲ್ತಾಫನಿಗೆ ಬರುವ ಭಾಗ್ಯವಾದರೂ ಏನು? ಎಂಬುದು ಅಜೀಜನ್‌ಳಿಗೆ ಆಗೂ ತಿಳಿಯಲಿಲ್ಲ.

ಆಗ ಆಕಸ್ಮಿಕವಾಗಿ ನೀಲನ ಕಿಡಿಗಾರುವ ಕಣ್ಣುಗಳು, ಬೀಬೀಘರದ ರಕ್ತರಂಜಿತ ನೆಲದ ಕಡೆಗೆ ಹರಿದವು. ಅಂಗಭಂಗವಾದ ಶವಗಳನ್ನು ನೋಡಿದ. ಆಮೇಲೆ ಕೈದಿಗಳ ಪ್ರವಾಹದ ಮೇಲೆ ದೃಷ್ಟಿ ನಟ್ಟಿತು. ಅದರೊಂದಿಗೆ ಅವನ ಕಂಠದಿಂದ ಉಗ್ರವಾದ ಇಂಗ್ಲೀಷ್ ವಾಕ್ಯ ಹೊರಟಿತು. ಅದರ ಅರ್ಥ ಕೈದಿಗಳಿಗಾಗಲೀ ಅಲ್ಲಿ ನೆರೆದಿದ್ದ ಜನ ಸಮೂಹಕ್ಕಾಗಲೀ ತಿಳಿಯಲಿಲ್ಲ. ಅದು ನೀಲನ ಆದೇಶ ಮಾತ್ರವಾಗಿತ್ತು. ಅಲ್ತಾಫ, ಮೌಲವಿ ಮಕಸೂದನ ಕಡೆಗೆ ಬೆರಳು ಮಾಡಿ ತೋರಿಸಿದ. ಒಬ್ಬ ಆಂಗ ಸಿಪಾಯಿ ಮುಂದೆ ಬಂದು, ನೀಳದಾಡಿಯ ಮೌಲವಿ ಸಾಹೇಬನ ಕತ್ತನ್ನು ಹಿಡಿದುಕೊಂಡು ನೀಲ ಸಾಹೇಬನ ಮುಂದೆ ತಂದು ನಿಲ್ಲಿಸಿದ. ಶೃಂಖಲೆಗಳ ಝಣತ್ಕಾರ ನೀರವ ವಾತಾವರಣದಲ್ಲಿ ಮೊಳಗಿ ನಾಲ್ಕೂ ದಿಕ್ಕಿನಲ್ಲಿ ಭಯವನ್ನು ಹುಟ್ಟಿಸಿತು. ನೀಲನ ಶಿಕ್ಷೆಯ ರೀತಿ ಏನೆಂಬುದನ್ನು ನೋಡಲು ಜನ ನಿಬ್ಬೆರಗಾಗಿ ನಿಂತಿದ್ದರು.

ಮೊದಲು ನೀಲ ಇಂಗ್ಲೀಷಿನಲ್ಲಿ ಕೂಗಿಕೊಂಡ. ನಂತರ ಅಲ್ತಾಫ ಅದನ್ನು ಉರ್ದುವಿನಲ್ಲಿ ಅನುವಾದಿಸಿ ಮೌಲವಿಗೆ ತಿಳಿಸಿದ. ಜನತೆಗೆ ಮೊದಲೇನೂ ತಿಳಿಯಲಿಲ್ಲ. ಅಲ್ತಾಫ ಮತ್ತೆ ಸ್ಪಷ್ಟಪಡಿಸಿದ—"ಬೀಬೀಘರದ ಈ ನೆಲವನ್ನು ನಿನ್ನ ನಾಲಿಗೆಯಿಂದಲೇ ಒಳಿಯಬೇಕು! ಇಲ್ಲಿ ನಿರಪರಾಧಿಗಳಾದ ಬಿಳಿಯರ ರಕ್ತ ಹರಿಸಲಾಗಿದೆ. ಇದು ಅದರ ಪ್ರತೀಕಾರವಾಗಿದೆ."

ನೆರೆದಿದ್ದ ಸಮುದಾಯ ನಡುಗತೊಡಗಿತು. ಇದೇನು? ಮಾನವೀಯತೆಯ ವಿರುದ್ಧ ಇಂದು ನೀಲ ಆಂಗ್ಲ ಸಭ್ಯತೆಯ ರೀತಿಯನ್ನು ಪ್ರದರ್ಶಿಸುತ್ತಿದ್ದಾನೆಯೆ? ಮನುಷ್ಯ, ಮನುಷ್ಯನ ರಕ್ತ ಮಾಂಸವನ್ನು ತನ್ನ ನಾಲಿಗೆಯಿಂದ ಒಳಿಯಬೇಕೇ? ಓ! ಎಂಥ ಶಿಕ್ಷೆ! ಚಾಟಿಯ ಏಟುಗಳಿಂದ ಮೌಲವಿ ಸಾಹೇಬನ ಚರ್ಮ ಸುಲಿದು ಹೋದರೂ ಆತ ಹಾಗೆಯೇ ನಿಂತುಕೊಂಡಿದ್ದ. ಕೊನೆಯಲ್ಲಿ ಅವನ ಪ್ರಾಣಪಕ್ಷಿಯೂ ಹಾರಿಹೋಯಿತು. ಅದು ವರೆಗೂ ಅವನು ಬಾಯಿ ಬಿಡಲಿಲ್ಲ. ಚಾಟಿಯ ಏಟುಗಳ ನೋವಿನ ಚೀತ್ಕಾರವನ್ನು ಸಹ ಅವನು ಗಂಟಲಲ್ಲಿಯೇ ಹಿಡಿದುಕೊಂಡಿದ್ದ. ಚೀರಿಕೊಂಡಿದ್ದರೆ ತನ್ನ ಪ್ರಾಮಾಣಿಕತೆ ಭ್ರಷ್ಟವಾಗುತ್ತದೆಂದು ಬಗೆದಿದ್ದ. ಅಬ್ಬಾ! ಎಂತಹ ನಿಷ್ಠೆ! ಅಜೀಜನ್

ಭಯದಿಂದ ಕಣ್ಣು ಮುಚ್ಚಿಕೊಂಡಳು. ಆದರೆ ಚಾಟಿಯ ಏಟುಗಳ ಹೊಡೆತವನ್ನು ತಾಳಲಾರದೆ, ಚೀರಿಕೊಳ್ಳುವ ಜಗನ್ನಾಥ ಪಂಡಿತನ ಹೃದಯ ಭೇದಿಸುವಂಥ ಸ್ವರ ಕೇಳಿ ಕಣ್ತೆರೆದು ಮತ್ತೆ ನೋಡತೊಡಗಿದಳು.

ಜಗನ್ನಾಥ ದೇವರಲ್ಲಿ ಮೊರೆಯಿಡತೊಡಗಿದ. ಸಾವಾದರೂ ಏಕೆ ಬರಲೊಲ್ಲದು ಎಂದು ಹಳಹಳಿಸಿ ತನಗ ಎಷ್ಟೇ ಕಷ್ಟ ಕೊಡಲಿ, ಆದರೆ ಧರ್ಮಭ್ರಷ್ಟತೆಯನ್ನು ಮಾತ್ರ ಮಾಡಿಸಬೇಡಿ ಎಂದು ನೀಲನಲ್ಲಿ ಮೊರೆಯಿಟ್ಟ. ನೀಲ ನಗುತ್ತಲೇ ಇದ್ದ. ಅಲ್ತಾಫ ಪುನಃ ಪುನಃ ಕೂಗಿಕೊಳ್ಳಹತ್ತಿದ— "ಹೂಂ! ಬಳಿ, ಸ್ವಚ್ಛ ಮಾಡು. ನಿರ್ದೋಷಿಗಳಾದ ಬಿಳಿಯರ ರಕ್ತವನ್ನು ನಿಮ್ಮ ನಾಲಿಗೆಯಿಂದಲೇ ಬಳಿಯಬೇಕು. ಹೂಂ!"

ಕೊನೆಗೆ ನೀಲ ಅಲ್ತಾಫನಿಗೆ ಸಂಜ್ಞೆ ಮಾಡಿದ. ಆಗ ಅವನು ಮುನ್ನಡೆದು— ಮೌಲವಿಯಂತೆ ಸೆಟೆದು ನಿಂತ ಜಗನ್ನಾಥನ ಕತ್ತನ್ನು ಬಗ್ಗಿಸಲು ಬಯಸಿದ. ಹಿಂದಿನಿಂದ ಒಬ್ಬ ಆಂಗ್ಲ ಸೈನಿಕ ಚಾಟಿಯಿಂದ ಬಗಿದ. ಪಾಪ, ಜಗನ್ನಾಥ ಪಂಡಿತನ ಒಣಗಿದ ತೆಳ್ಳನೆಯ ಶರೀರದಲ್ಲಿ ಆ ಹೊಡೆತವನ್ನು ತಾಳುವಂಥ ಶಕ್ತಿಯಾದರೂ ಎಲ್ಲಿಂದ ಬರಬೇಕು? ಆದರೂ ಒಮ್ಮೆಲೇ ಜಗನ್ನಾಥ, ಅಲ್ತಾಫನಿಂದ ಕತ್ತನ್ನು ಕೊಸರಿಕೊಂಡು ಮತ್ತೆ ಮೊದಲಿನಂತೆಯೇ ಸೆಟೆದು ನಿಂತ. ಎರಡನೆಯ ಸಲ ನೀಲ ಜೋರಿನಿಂದ ಕೂಗಿಕೊಂಡು ಅಲ್ತಾಫನಿಗೆ ಸೂಚನೆಯಿತ್ತ. ಅಲ್ತಾಫ ಮತ್ತೆ ಮುನ್ನಡೆದ.

ಆಗ ಅಜೀಜನ್‌ಳ ಕಣ್ಣುಗಳಿಂದ ಕಿಡಿಕಾರತೊಡಗಿತು ತೀಕ್ಷ್ಣವಾದ ಬಾಣದಂತೆ ವೇಗವಾಗಿ ಓಡಿ, ಅಲ್ತಾಫ ಹಾಗು ಜಗನ್ನಾಥ ಪಂಡಿತರ ಮಧ್ಯ ನಿಂತುಕೊಂಡಳು. ಎಲ್ಲರೂ ಅಚ್ಚರಿಗೊಂಡರು. ಪೂರ್ವದ ಕಥೆ ಯಾರಿಗೂ ತಿಳಿಯಲಿಲ್ಲ. ಬಿಳಿಯರಿಂದ ಅವಳನ್ನು ಹಿಡಿಯುವುದೂ ಆಗಿರಲಿಲ್ಲ. ಅದೇ ಕ್ಷಣದಲ್ಲಿಯೇ ಮಿಂಚಿನಂತೆ ತನ್ನ ಕೈಯಲ್ಲಿದ್ದ ಕತ್ತಿಯನ್ನು ಝಳಪಿಸಿ ಮೊದಲು ಜಗನ್ನಾಥ ಪಂಡಿತನ ಹೊಟ್ಟೆಯೊಳಗೂ ನಂತರ ಅಲ್ತಾಫನ, ಆಮೇಲೆ ಸ್ವತಃ ತನ್ನ ಹೊಟ್ಟೆಯೊಳಗೂ ತಿವಿದುಕೊಂಡಳು. ಆಗ ಜಗನ್ನಾಥ ಪಂಡಿತನ ಮುಚ್ಚಿದ ಕಣ್ಣುಗಳು ಮೆಲ್ಲನೆ ತುಸು ತೆರೆದವು. ಅಜೀಜನ್‌ಳನ್ನು ನೋಡಿದಾಗ ಅವನ ಮುಖದಲ್ಲಿ ಕಿರುನಗೆ ಮೂಡಿತು. "ಹೇ! ಶಿವಾ!" ಎನ್ನುತ್ತಾ ಬೇಡಿಗಳೊಂದಿಗೆ ಹಿಂದೆ ಸರಿದು, ಬೀಬೀಘರದ ರಕ್ತಸಿಕ್ತ ಅಂಗಳದಿಂದ ಹೋಗಿ ಶುಭ್ರ ನೆಲದ ಮೇಲೆ ಬಿದ್ದು ಪ್ರಾಣನೀಗಿದ. ಅಲ್ತಾಫ ಎಲ್ಲಿ ನಿಂತಿದ್ದನೋ ಅಲ್ಲಿಯೇ ಬಿದ್ದಿದ್ದ. ಅಜೀಜನಳು ಅವನ ಬಳಿಯೇ ಇದ್ದಳು. ತನ್ನ ಹೊಟ್ಟೆಯೊಳಗಿನ ಅನಂತ ವೇದನೆಯನ್ನು ಸಹಿಸುತ್ತಲೇ, ಮೆಲ್ಲಗೆ ಎದ್ದು, ಅಲ್ತಾಫನನ್ನು 'ದರದರ' ಎಳೆದುಕೊಂಡು ಹೋಗಿ, ಬೀಬೀಘರದ ರಕ್ತಮಾಂಸಗಳ ತುಂಡುಗಳಿಂದ ತುಂಬಿದ ಅಂಗಳದಲ್ಲಿ ಹಾಕಿದಳು. ಅಲ್ತಾಫನ ಮುಖ ಅದರಲ್ಲಿ ಮುಳುಗಿ ಹೋಯಿತು. ಅವನಾಗಲೇ ಸತ್ತು ಹೋಗಿದ್ದ. ಅಷ್ಟರಲ್ಲಿಯೇ ಅವಳೂ ಅಲ್ತಾಫನ ಬಳಿಯೇ ಬಿದ್ದಳು. ಆದರೆ ಮೇಲ್ಗಡೆ ನೋಡುತ್ತಿದ್ದ ಅವಳ ಮುಖ— ಮುಗಿಲನ್ನು ನೋಡುತ್ತ ಏನೋ ಹೇಳುತ್ತಿರುವಂತೆ ಕಾಣುತ್ತಿತ್ತು.

ಆ ಮೇಲೆ ಸಂಜೆಯೊಳಗೆ ಉಳಿದ ಮುನ್ನೂರು ಕೈದಿಗಳು ಸ್ವಲ್ಪ ಸ್ವಲ್ಪಾಗಿ ಬೀಬಿಘರದ ಕೆಲವೊಂದು ಭಾಗವನ್ನು ತಮ್ಮ ನಾಲಿಗೆಯಿಂದ ಬಳಿದು ಸ್ವಚ್ಛಗೊಳಿಸಿದರು. ಈ ಹೇಯ ಕೃತ್ಯದ ನಂತರ ಅವರನ್ನು ಒಬ್ಬೊಬ್ಬರನ್ನಾಗಿ ಗಲ್ಲಿಗೇರಿಸಲಾಯಿತು. *

'' ಕಾದಂಬಿನಿ '' ಯಿಂದ





ಹೊಗೆ ಸೇದುವ ಉಪಕರಣಗಳ ಸ್ವಾರಸ್ಯದ ಕಥೆ

# ಗುಡಗುಡಿ ಬಲು ಒಳ್ಳೆ'ದಣ್ಣ!

"ವಾಙ್ಮಯೀ"

೧೬೦೪ ರ ಒಂದು ಸಂಜೆಯ ಸಮಯದಲ್ಲಿ ಮೊಗಲ ಬಾದಶಾಹ ಅಕಬರನ ದರಬಾರಿನ ಪ್ರಖ್ಯಾತ ಸಾಹಿತಿ ಅಸದ ಬೇಗ ಕಝುವಿ ವಿಜಾಪುರದ ಬೀದಿಯಲ್ಲಿ ನಡೆಯುತ್ತಿದ್ದವನು ಹಠಾತ್ತಾಗಿ ಒಂದೆಡೆ ನಿಂತುಬಿಟ್ಟ. ಅವನ ಕಣ್ಣಿಗೆ ಒಂದು ಅದ್ಭುತ - ಕುತೂಹಲಕಾರಿ ದೃಶ್ಯ ಬಿದ್ದಿತ್ತು. ರಸ್ತೆಯ ಒಂದು ಮಗ್ಗಲಲ್ಲಿ ಕುಳಿತಿದ್ದ ಮಕ್ಕಾ ಮದೀನಾ ಯಾತ್ರೆಗೆಂದು ಹೊರಟಿದ್ದ ಕೆಲವರು ಮಣ್ಣಿನ ಕೊಳವೆಯೊಂದರಲ್ಲಿ ಕೆಂಡ ತುಂಬಿಕೊಂಡು ಅದರ ಮೇಲೆ ಯಾವುದೊ ಒಂದು ಚೂರ್ಣವನ್ನು ಉದುರಿಸಿ ಇನ್ನೊಂದು ಕೊಳವೆಯನ್ನು ಬಾಯಲ್ಲಿಟ್ಟು-ಕೊಂಡು ಸೇದುತ್ತಿದ್ದರು. ಅವರು ದಮ್ಮು ಎಳೆದಾಗಲೆಲ್ಲ ಕೆಂಡ ಉರಿದೇಳುತ್ತಿತ್ತು. ದಮ್ಮು ಎಳೆದ ನಂತರ ಬಾಯಿಂದ ಹೊಗೆ ಬಿಡುತ್ತಿರುವಾಗ ಆ ಯಾತ್ರಿಕರ ಮುಖದ ಮೇಲೆ ಆನಂದ, ಉತ್ಸಾಹಗಳ ರೇಖೆ ಹಬ್ಬುತ್ತಿತ್ತು.

ಕುತೂಹಲ ತಡೆಯದೆ ಅಸದ ಬೇಗ ಆ ಯಾತ್ರಿಕರ ಬಳಿಗೆ ಹೋಗಿ ಅವರ ಕೈಲಿದ್ದ ಕೊಳವೆಯನ್ನು ಮುಟ್ಟಿ ತೋರಿಸಿ "ಏನಿದು?" ಎಂದು ಕೇಳಿದ.

"ಇದು ಚಿಲುಮೆ. ಇದರಲ್ಲಿ ತಂಬಾಕು ತುಂಬುತ್ತಾರೆ. ಹೊಗೆಯನ್ನು ಒಳಗೆಳೆದುಕೊಂಡಾಗ ದಿವ್ಯಾನಂದದ ಅನುಭವವುಂಟಾಗುತ್ತದೆ" ಎಂದ ಒಬ್ಬ ದಮ್ಮು ಎಳೆಯುತ್ತ.

ಆ ದಿವ್ಯಾನಂದದ ರಹಸ್ಯ, ಅದನ್ನು ಪಡೆಯುವ ವಿಧಿವಿಧಾನಗಳನ್ನು ಕೇಳಿ ತಿಳಿದುಕೊಂಡ ಅಸದ ಬೇಗನಿಗೆ ಅತ್ಯಾನಂದವಾಯಿತು. ಆತ ಆ ಯಾತ್ರಿಕರಿಂದ ಕೆಲವಾರು ಸುಂದರ ಚಿಲುಮೆಗಳನ್ನೂ ಬಹಳಷ್ಟು ತಂಬಾಕನ್ನೂ ಖರೀದಿ ಮಾಡಿದ.

ದಿಲ್ಲಿಗೆ ಮರಳಿ ಬಂದ ಮೇಲೆ ಆತ ಸ್ವರ್ಗ ಸುಖವನ್ನೊದಗಿಸುವ ಈ ದಿವ್ಯ ಕಾಣಿಕೆಯನ್ನು ಅಕಬರನ ಸನ್ನಿಧಿಗೆ ಒಪ್ಪಿಸಿದ. ತಂಬಾಕಿನ ಮಹಿಮೆಯನ್ನು ಸಾರುತ್ತ ಆತ ಚಿಲುಮೆ ತುಂಬುವ ಕಲೆಯನ್ನು ಪ್ರದರ್ಶಿಸಿ ಅದರ ಆನಂದವನ್ನು ಅನುಭವಿಸಲು ಬಾದಶಾಹನಿಗೆ ಬಿನ್ನವಿಸಿಕೊಂಡ. ಆಶ್ಚರ್ಯಚಕಿತ ಬಾದಶಾಹ ಒಂದೆರಡು ದಮ್ಮು ಎಳೆದಾಗ ಅವನಿಗೆ ತುಂಬಾ ಹುರುಪೆನಿಸಿತು. ಆದರೆ ಬಾದಶಾಹ ಬಾಯಿಯಿಂದ ಹೊಗೆ ಬಿಡುವುದನ್ನು ಕಂಡ ದರಬಾರಿನವರ

ಮುಖದ ಮೇಲೆ ಅಸಂತೋಷ ಮತ್ತು ತಿರಸ್ಕಾರಗಳ ಭಾವ ಮೂಡಿತು. ಅವರು ತಮ್ಮತಮ್ಮಲ್ಲೇ ಪಿಸುಮಾತುಗಳನ್ನಾಡಿಕೊಳ್ಳಹತ್ತಿದರು.

ಆಗ ಅಸದ ಬೇಗ ಅವರನ್ನು ಸಮಾಧಾನಪಡಿಸಲೆತ್ನಿಸಿದ: "ಇದೇನೂ ಕೆಟ್ಟ ವಸ್ತುವಲ್ಲ, ನೀವೂ ಒಂದು ಸಲ ಎಳೆದು ನೋಡಿ; ಅರಬಸ್ತಾನ, ಇರಾಣ ಮುಂತಾದೆಡೆಗಳಲ್ಲಿ ಜನ ಇದನ್ನು ಸೇದಿಯೇ ಚುರುಕಾಗಿರುತ್ತಾರೆ."

ಆದರೆ ದರಬಾರಿನವರಿಗೆ ಸಮಾಧಾನವಾಗಲಿಲ್ಲ. ಒಬ್ಬ ಶಾಹೀ ಹಕೀಮ ಎದ್ದು, "ವಿಲಾಯತಿಯಲ್ಲಿ ಇದನ್ನು ಉಪಯೋಗಿಸುತ್ತಿರಬಹುದು. ಆದರೆ ನಾವಿದನ್ನು ಮುಟ್ಟಲೂಕೂಡದು. ನಮ್ಮ ಪವಿತ್ರ ಕುರಾನಿನಲ್ಲಿ ಇದರ ಪ್ರಸ್ತಾಪ ಕೂಡ ಇಲ್ಲ" ಎಂದ.

"ಕುರಾನಿನಲ್ಲಿ ಉಲ್ಲೇಖಿಸಿರದ ವಸ್ತು ಎಂದ ಮಾತ್ರಕ್ಕೆ ನಾವದನ್ನು ತ್ಯಜಿಸಬಾರದು. ಈ ರೀತಿಯಿಂದ ನಮ್ಮ ಪ್ರಗತಿಯಾಗದು. ಕುರಾನಿನಲ್ಲಿ ಹೇಳಿರದಿದ್ದರೂ ಯಾವುದಾದರೂ ಒಳ್ಳೆಯ ವಸ್ತು ಕಂಡಲ್ಲಿ ಅದನ್ನು ಮೆಚ್ಚಿ ನಮ್ಮದನ್ನಾಗಿಸಿಕೊಳ್ಳಬೇಕು" ಬಾದಶಾಹ ತೀರ್ಪು ಹೇಳಿದ.

ಅಕಬರನ ಈ ಶಬ್ದಗಳಿಂದಲೇ ಇಡೀ ಭಾರತದಲ್ಲಿ ತಂಬಾಕಿನ ಅಸ್ತಿತ್ವ ಬೇರೂರಿತು. ಧಾನ್ಯಾದಿಗಳನ್ನು ಬೆಳೆಯುತ್ತಿದ್ದ ಹೊಲಗಳಲ್ಲಿ ತಂಬಾಕನ್ನು ಬೆಳೆಯತೊಡಗಿದರು. ತಂಬಾಕಿನ ವ್ಯಾಪಾರ ಹೆಚ್ಚಿತು. ಹಡಗುಗಟ್ಟಲೆಯಾಗಿ ತಂಬಾಕು ಭಾರತಕ್ಕೆ ಬರತೊಡಗಿತು. ಧೂಮಪಾನದ ಚಟ ದಿನದಿನಕ್ಕೆ ಬೆಳೆಯತೊಡಗಿತು. ಜೊತೆಗೆ ಕುಂಬಾರರಿಗೆ ಚಿಲುಮೆ ತಯಾರಿಸುವ ಹೊಸ ಉದ್ಯೋಗವೊಂದು ಪ್ರಾಪ್ತವಾಯಿತು. ಕುಶಲ ಕುಂಬಾರರು ಕಲಾತ್ಮಕ ಚಿಲುಮೆಗಳನ್ನು ತಯಾರಿಸಿ ರಾಜಾಶ್ರಯವನ್ನೂ ಪಡೆದರು.

ಮೊಗಲ ಆಡಳಿತದ ಮತ್ತು ಈಸ್ಟ್ ಇಂಡಿಯ ಕಂಪನಿಯ ಕಾಗದ ಪತ್ರಗಳಿಂದ ಭಾರತದಲ್ಲಿ ೧೬೦೦ ರಿಂದ ೧೭೪೦ ರ ನಡುವಿನ ಅವಧಿಯಲ್ಲಿ ತಂಬಾಕನ್ನು ಬೆಳೆಯತೊಡಗಿದರು ಎಂದು ತಿಳಿಯುತ್ತದೆ. ತಂಬಾಕು "ರೊಕ್ಕದ ಬೆಳೆ"ಯಾಗಿತ್ತು. ಇಂಗ್ಲಿಷರು ತಂಬಾಕಿನ ಮೇಲೆ ಕರ ಹೇರಿ ದೊಡ್ಡ ಉತ್ಪನ್ನ ಪಡೆಯುತ್ತಿದ್ದರು.

ಚಿಲುಮೆಗೆ ಒದ್ದೆ ಅರಿವೆ ಸುತ್ತಿ ಸೇದುವುದರಿಂದ ಹೊಲಸು ಬಾಯಿಗೆ ಸೇರದೆ ಕೇವಲ ಶುದ್ಧ ಹೊಗೆಯಷ್ಟೇ ಬರುವುದೆಂದು ಜನ ಅರಿತುಕೊಂಡರು. ಕಟ್ಟಿಗೆಯ ಬೆಂಕಿಯಲ್ಲಿ ತಂಬಾಕನ್ನು ಒಣಗಿಸುವುದಕ್ಕಿಂತ ಕೆಂಡದ ಮೇಲೆ ಒಣಗಿಸಿದರೆ ತಂಬಾಕಿನ ಮೂಲ ಸ್ವಾದ ಕೆಡುವುದಿಲ್ಲವೆಂದೂ ಕಂಡುಹಿಡಿದರು. ತಂಬಾಕಿನಲ್ಲಿ ಬೇರೆ ಸುಗಂಧ ದ್ರವ್ಯಗಳನ್ನು ಸೇರಿಸಲು ತೊಡಗಿದರು. ಧೂಮಪಾನದ ಹೊಸ ಹೊಸ ವಿಧಾನಗಳನ್ನು ಹುಡುಕುತ್ತ ಹುಡುಕುತ್ತ 'ಹುಕ್ಕಾ' ಜನ್ಮ ತಾಳಿತು.

ಬಾದಶಾಹ ಜಹಾಂಗೀರನ ಕಾಲದಲ್ಲಿ ಹುಕ್ಕಾ ಪ್ರಥಮತಃ ಬಳಕೆಗೆ ಬಂತೆನ್ನುತ್ತಾರೆ. ರತ್ನಖಚಿತವಾದ ಬೆಳ್ಳಿಯ ಹುಕ್ಕಾ ಒಂದನ್ನು ತನಗೆ ಕಾಣಿಕೆ ಕೊಟ್ಟ ದಿಲ್ಲಿಯ ಅಕ್ಕಸಾಲಿಗನೊಬ್ಬನಿಗೆ ಜಾಹಂಗೀರ ಏಳು ಊರುಗಳನು ಇನಾಮಾಗಿ ಕೊಟ್ಟ.

ಆದರೆ ಕೆಲವರು ಹುಕ್ಕಾ ಇರಾನಿನಲ್ಲಿ ಹುಟ್ಟಿತೆನ್ನುತ್ತಾರೆ. ೧೭ನೆಯ ಶತಮಾನದಲ್ಲಿ ದಕ್ಷಿಣ ಇರಾನಿನಲ್ಲಿ ಆಳುತ್ತಿದ್ದ ಬಾದಶಾಹನೊಬ್ಬ ಹುಕ್ಕಾದ ನಿರ್ಮಾಣಕ್ಕೆ ಕಾರಣನಾದನಂತೆ. ಆ ಕಾಲದಲ್ಲಿ ಮುಂಬೈ ಪ್ರದೇಶದ ಜನರು ಹುಕ್ಕಾಕ್ಕೆ "ಕ್ರೀಮುಕಾನ" ಎನ್ನುತ್ತಿದ್ದರು. ಕ್ರೀಮುಕಾನ್ ಎಂಬುದು ಮೇಲೆಹೇಳಿದ ಇರಾನಿ ಬಾದಶಾಹ ಕರೀಮುಖಾನನ ಹೆಸರಿನದೇ ಅಪಭ್ರಂಶ ಎಂದು ಇವರ ವಾದವಿದೆ.

೧೭ ನೆಯ ಶತಮಾನದ ಸುಮಾರಿಗೆ ಭಾರತದಲ್ಲಿ ನೆಲೆಸಿದ ಇಂಗ್ಲಿಷರೂ ಹುಕ್ಕಾವನ್ನು ಉಪಯೋಗಿಸತೊಡಗಿದರು. ಆ ದಿನಗಳಲ್ಲಿ ಹುಕ್ಕಾ ಸೇದುವುದು ಶಿಷ್ಟರ ಲಕ್ಷಣವೆಂದು ಭಾವಿಸುತ್ತಿದ್ದರು. ೧೭೫೫ ರ ಹೊತ್ತಿಗೆ ಗುಡಿಸಲಿನಿಂದ ಹಿಡಿದು ಅರಮನೆಯವರೆ ಹುಕ್ಕಾಗೆ ತನ್ನ ಪ್ರಸ

ವನ್ನು ಬೆಳೆಸಿತ್ತು. ದೇಶದ ಬೇರೆ ಬೇರೆ ಭಾಗಗಳಲ್ಲಿ ಇದಕ್ಕೆ ಗುಡಗುಡಿ, ನಾರದಾಯಿಲ್ಸ್, ಕಲ್ಯಾಣ, ಹಬಲಬಬಲ ಇತ್ಯಾದಿ ಬೇರೆ ಬೇರೆ ಹೆಸರುಗಳು ಬಂದವು. ಗುಡಗುಡಿ ಚಿಕ್ಕ ಆಕಾರದ ಹುಕ್ಕಾ. ಅದು ಸಂಚಾರ ಸಮಯದಲ್ಲಿ ಬಲು ಉಪಯುಕ್ತವಾಗಿತ್ತು.

ಮೊಗಲರ ನಂತರ ವಿಲಾಸಪ್ರಿಯತೆಯಲ್ಲಿ ಬ್ರಿಟಿಶರ ಹೆಸರನ್ನೆ ಹೇಳಬೇಕು. ೧೭೬೦ ರ ಸುಮಾರಿಗೆ ಭಾರತದಲ್ಲಿರುವ ಇಂಗ್ಲಿಷ್ ಸ್ತ್ರೀ-ಪುರುಷರೆಲ್ಲ ಹುಕ್ಕಾಭಕ್ತರಾಗಿಬಿಟ್ಟಿದ್ದರು. ಇದು ವಿಸ್ತರಿಸುತ್ತಿದ್ದ ಬ್ರಿಟಿಶ್ ಸಾಮ್ರಾಜ್ಯ ಮತ್ತು ವೈಭವಗಳ ಮಹತ್ವಪೂರ್ಣ ದ್ಯೋತಕವೆಂದು ಅವರು ಭಾವಿಸಿದ್ದರು. ಹುಕ್ಕಾ ತರಲು, ಸಜ್ಜುಗೊಳಿಸಲು ಒಬ್ಬ ನೌಕರನನ್ನಿಟ್ಟುಕೊಳ್ಳುವ ಪರಿಪಾಠ ಬಿದ್ದಿತು. ಈ ನೌಕರನಿಗೆ 'ಹುಕ್ಕಾ ಬರದಾರ' ಎನ್ನುತ್ತಿದ್ದರು. ಓರ್ವ ಇಂಗ್ಲಿಷ್ ಅಧಿಕಾರಿಯ ಆಮಂತ್ರಣ ಪತ್ರಿಕೆಯಲ್ಲಿ ಬಂದಿರುವ ಹುಕ್ಕಾ ಬರದಾರನ ಪ್ರಸ್ತಾಪವನ್ನು ನೋಡಿ:

"ಮಿ. ಮತ್ತು ಮಿಸೆಸ್ ಹೇಸ್ಟಿಂಗರ ನಮಸ್ಕಾರಗಳು. ಬರುವ ಗುರುವಾರ ನಮ್ಮಲ್ಲಿ ಭೋಜನ ಸಮಾರಂಭವಿದೆ. ಬರುವಾಗ 'ಹುಕ್ಕಾ ಬರಾದರ' ನನ್ನುಳಿದು ಮಿತ್ರರನ್ನು ಜೊತೆಗೆ ಕರೆತರಬಾರದೆಂದು ನಮ್ರ ವಿನಂತಿ."

ಶಿಷ್ಟಾಚಾರವೆಂದು, ಪ್ರೇಮ ಪ್ರದರ್ಶನ ಸಾಧನವೆಂದು ಹುಕ್ಕಾದ ಕಾಣಿಕೆ ಕೊಡುವ ಪದ್ಧತಿಯನ್ನು ಬ್ರಿಟಿಶರೂ ಅನುಸರಿಸಿದರು. ಮುಸಲ್ಮಾನರಲ್ಲಿಯಂತೂ ಹುಕ್ಕಾ ಐಕ್ಯ ಮತ್ತು ಬಂಧುಭಾವದ ಪ್ರತೀಕವಾಗಿಬಿಟ್ಟಿತು. ನಾಲ್ಕೈದು ಜನ ಕೂಡಿದರೂ ಸರಿ, ಹುಕ್ಕಾ ಸೇವನೆ ಅನಿವಾರ್ಯವಾಯಿತು. 'ಹುಕ್ಕಾಪಾನಿ' ಉಚ್ಚ ನೀಚ ಭೇದ ಭಾವವನ್ನು ಅಳಿಸುವ ಸಾಧನವಾಯಿತು. ಮುಸಲ್ಮಾನ ಸರದಾರರು ಹುಕ್ಕಾದ ನಳಿಗೆಗಳನ್ನು ಉದ್ದ ಮಾಡಿಸಿದರು. ದೂರ ದೂರ ಕುಳಿತವರಿಗೆ ಕುಳಿತಲ್ಲಿಂದಲೇ ಹುಕ್ಕಾ ಎಳೆಯಲು ಅನುಕೂಲವಾಗಬೇಕು, ಹುಕ್ಕಾವನ್ನು ಎತ್ತಿ ಅವರಿದ್ದಲ್ಲಿಗೆ ಒಯ್ಯುವ ಕಷ್ಟ ತಪ್ಪಬೇಕು ಎಂದೇ ಅವರು ಹುಕ್ಕಾಕ್ಕೆ ಉದ್ದ ನಳಿಗೆ ಜೋಡಿಸಿಕೊಳ್ಳುತ್ತಿದ್ದರು.

ಜಾತಿಭೇದ ಹಾಗೂ ಸ್ಪೃಶ್ಯಾಸ್ಪೃಶ್ಯತೆಗಳ ಮೂಲಕ ಹಿಂದು ಕುಟುಂಬಗಳಲ್ಲಿ ಚಿಕ್ಕ ಚಿಕ್ಕ ಹುಕ್ಕಾಗಳು ಬಳಕೆಗೆ ಬಂದವು. ಕುಟುಂಬದ ಪ್ರತಿಯೊಬ್ಬನ ಬಳಿಯಲ್ಲೂ ಅವನದೇ ಆದ ಒಂದು ಹುಕ್ಕಾ ಇರುತ್ತಿತ್ತು.

ಆದರೆ ಈಗ ಹುಕ್ಕಾದ ದಿನಗಳು ಮುಗಿಯುತ್ತ ಬಂದಿವೆ. ಅದರ ಉಪಯೋಗ ತೀರ ಕಡಿಮೆಯಾಗಿದೆ. 'ಹುಕ್ಕಾ ಬರದಾರ' ನಂತೆ ಹುಕ್ಕಾ ಕೂಡ ಒಂದು ಗತಕಾಲದ ವಸ್ತುವಾದೀತು. ಆದರೆ ಎಲ್ಲಿಯವರೆಗೆ ಮೊಗಲರು ಮತ್ತು ಬ್ರಿಟಿಶರ ಇತಿಹಾಸವಿರುವುದೊ, ಅವರ ನಾಗರಿಕತೆಯ ಕಥೆ ಜೀವಂತವಿರುವುದೊ ಅಲ್ಲಿಯವರೆಗೆ ಕಲಾತ್ಮಕವಾದ ಚಿಲುಮೆಗಳು, ರತ್ನಖಚಿತ ಹುಕ್ಕಾಗಳ ಚಿತ್ರಗಳು ನಮ್ಮ ಕಣ್ಣೆದುರು ಸುಳಿಯುತ್ತಲೇ ಇರುವವು. *



ಗಾಳಿಯಲ್ಲಿ ಗೋಪುರ ಕಟ್ಟಿದೆವಲ್ಲ ಎಂದು ಯೋಚಿಸಬೇಡಿ. ಇನ್ನು ಮೇಲೆ ಅದರ ಕೆಳಗೆ ಪಾಯ ಹಾಕಿರಿ.

— ಥೋರು

ಜನತೆಗೆ ಯಾವುದು ಗೊತ್ತಿಲ್ಲವೊ ಅದನ್ನು ತಿಳಿಸುವುದು ವಿದ್ಯಾಭ್ಯಾಸದ ಉದ್ದೇಶವಲ್ಲ; ಹೇಗೆ ವರ್ತಿಸಬೇಕೆಂಬುದನ್ನು ತಿಳಿಸುವುದೇ ಅದರ ಗುರಿ.

— ಜಾನ್ ರಸ್ಕಿನ್



ಒಂದು ಸ್ಫೂರ್ತಿದಾಯಕ ಜೀವನವೃತ್ತ

# ಭೂಪ್ರದಕ್ಷಿಣೆ ಮಾಡಿದ ಜೇಮ್ಸ್ ಕುಕ್

ರಾಧಾಕೃಷ್ಣ

ಆತ ಹುಟ್ಟಿದ್ದು ಕಡಲಕರೆಯಲ್ಲಲ್ಲ, ಒಳನಾಡಿನಲ್ಲಿ; ಅವನ ತಂದೆ ಸಾಗರಸಂಚಾರಿಯಲ್ಲ, ಬರಿ ದಿನಗೂಲಿಯ ಆಳು; ಅವನು ಶಾಲೆಗೇ ಹೋಗಲಿಲ್ಲ. ಆದರೂ ಅವನು ಜಗತ್ತಿನ ಸಾಗರಸಂಚಾರಿಗಳಲ್ಲಿ ಇಂದಿಗೂ ಅಪ್ರತಿಮನೆನಿಸಿದ್ದಾನೆ; ಸ್ಟೀಂ ಎಂಜಿನ್ ಇನ್ನೂ ಹುಟ್ಟಿರದ ಕಾಲದಲ್ಲಿ ಸಾಗರದಿಂದ ಸಾಗರಕ್ಕೆ ಸಾಗುತ್ತ ಅವನು ಭೂಮಿಗೆ ಪೂರ್ತಿ ಸುತ್ತು ಹಾಕಿದ ಪ್ರಪ್ರಥಮ ಮನುಷ್ಯನಾದ; ಸ್ವಂತ ಪ್ರಯತ್ನದಿಂದ ಓದಿ ಕಲಿತು ಗಣಿತಾದಿ ಶಾಸ್ತ್ರಗಳಲ್ಲಿ ಪಾರಂಗತನಾಗಿ ಖಗೋಲ ವಿಜ್ಞಾನಿಗಳ ಕೂಟದಲ್ಲಿ ಗೌರವಾನ್ವಿತನಾದ; ಆಸ್ಟ್ರೇಲಿಯ, ನ್ಯೂಜೀಲಂಡುಗಳನ್ನೂ ಇತರ ಅನೇಕ ದ್ವೀಪಗಳನ್ನೂ ಸಂಶೋಧಿಸಿ ಬ್ರಿಟಿಶ್ ಸಾಮ್ರಾಜ್ಯಕ್ಕೆ ಸೇರಿಸಿದ; ಹಿಂದೆ ಯಾರೂ ಶೋಧಿಸಿ ನಕ್ಷೆ ಹಾಕದಿದ್ದ ಕರಾವಳಿಗಳನ್ನು ಪರೀಕ್ಷಿಸಿ ಸರಿಯಾದ ನಕಾಶೆಗಳನ್ನು ರಚಿಸಿ ಭೂಗೋಲಜ್ಞರಲ್ಲಿ ಹೆಸರಾಂತವನಾದ; ಸುಂದರ ಶೈಲಿಯಲ್ಲಿ ಆತ ಬರೆದ ಪ್ರವಾಸ ವರದಿಗಳನ್ನೋದುವ ಸಲುವಾಗಿಯೆ ಅವನಪ್ಪ ಎಂಭತ್ತನೇ ವಯಸ್ಸಿನಲ್ಲಿ ಓದು ಬರಹ ಕಲಿತನಂತೆ !

ಆತನೇ ಕ್ಯಾಪ್ಟನ್ ಜೇಮ್ಸ್ ಕುಕ್. ಅವನು ೧೭೨೮ರಲ್ಲಿ ಯಾರ್ಕ್‌ಶೈರಿನ ಒಂದು ಹಳ್ಳಿಯಲ್ಲಿ ಹುಟ್ಟಿದ. ಚಿಕ್ಕಂದಿನಿಂದಲೇ ಹೇಗೋ ಸಮುದ್ರಯಾನದ ಹುಚ್ಚು ಅಂಟಿಕೊಂಡಿತು. ಸಮುದ್ರಕ್ಕೆ ಹತ್ತಿರವಾಗಿರುವ ಹಂಬಲದಿಂದ ವ್ಹಿಟ್‌ಬಿ ಬಂದರದ ಬಳಿ ಇರುವ ಸ್ಟೈತ್ಸ್ ಪಟ್ಟಣದ ಒಂದು ಅಂಗಡಿಯಲ್ಲಿ ತನ್ನ ಹದಿಮೂರನೇ ವಯಸ್ಸಿನಲ್ಲೆ ಮಾರಾಟಗಾರನಾಗಿ ಸೇರಿದ ಬಾಲಕ ಕುಕ್, ಅದರ ಕುಡುಕ ಯಜಮಾನನ ಹೊಡೆತ ಬಡಿತಗಳನ್ನು ಸೈರಿಸಿಕೊಳ್ಳುತ್ತಿದ್ದ. ಸಮಯ ಸಿಕ್ಕಿದಾಗೆಲ್ಲ ವ್ಹಿಟ್‌ಬಿಗೆ ಹೋಗಿ ಕಲ್ಲಿದ್ದಲಿ ಸಾಗಿಸುವ ಅಲ್ಲಿನ ಹಡಗುಗಳನ್ನು ಸೂಕ್ಷ್ಮವಾಗಿ ಅವಲೋಕಿಸುವುದೇ ಅವನ ಉದ್ಯೋಗವಾಯಿತು.

ಹದಿನೆಂಟು ತುಂಬುತ್ತಲೇ ಜೇಮ್ಸ್ ಕುಕ್ ಇಂಥ ಹಡಗೊಂದರಲ್ಲಿ ಖಲಾಸಿಯಾಗಿ ಸೇರಿದ. ಕರಾವಳಿ ಪಟ್ಟಣಗಳಲ್ಲಿ ವ್ಯಾಪಾರ ಮಾಡುತ್ತ ಸಾಗುತ್ತಿದ್ದ ಈ ಹಡಗಿನ ಹೆಸರೇನೋ "ಫ್ರೀಲವ್" ಎಂದಿದ್ದರೂ ಅದರೊಳಗಿನ ಜೀವನದಲ್ಲಿ ಒದಿಕೆಗಳು, ಅರೆಹೊಟ್ಟೆ ಊಟ ನಿತ್ಯ ಕ್ರಮವಾಗಿದ್ದವು. ಇದರಿಂದ ಕುಕ್ಕನ ಸಾಗರ ಪ್ರೇಮವೇನೂ ಕುಗ್ಗಲಿಲ್ಲ; ಕಷ್ಟಗಳನ್ನು ಸಹಿಸಲು, ಸಿಕ್ಕಿದ್ದನ್ನು ತಿಂದು ಬದುಕಲು ಅವನ ಶರೀರ ಗಟ್ಟಿಗೊಂಡಿತಷ್ಟೇ. ಇನ್ನೂ ವಿಶೇಷ

ವೆಂದರೆ, ಅವನ ಶರೀರ ಕಠಿಣವಾದಂತೆ ಅವನ ಮನಸ್ಸು ಉದಾತ್ತವಾಯಿತು, ಅವನ ಬುದ್ಧಿ ಚುರುಕಾಯಿತು. ಅವನು ಪುಸ್ತಕಗಳ ಸಹಾಯದಿಂದ ಬುದ್ಧಿಯ ಆಳ ಅಗಲಗಳನ್ನು ಹೆಚ್ಚಿಸಿಕೊಂಡ. ಹತ್ತು ವರ್ಷಗಳಲ್ಲಿ ಆತ ಕ್ಯಾಪ್ಟನ್ನನ ಸಹಾಯಕ (ಮೇಟ್)ನ ಸ್ಥಾನಕ್ಕೇರಿದ.

೧೭೫೫ ರಲ್ಲಿ ಬ್ರಿಟನ್ನಿಗೂ ಫ್ರಾನ್ಸಿಗೂ ಯುದ್ಧ ಪ್ರಾರಂಭವಾದಾಗ, ವ್ಯಾಪಾರಿ ಹಡಗುಗಳಲ್ಲಿ ಕೆಲಸ ಮಾಡುವವರು ಯುದ್ಧನೌಕೆಗಳಲ್ಲಿನ ಸೇವೆಯಿಂದ ಮುಕ್ತರಾಗಿದ್ದರೂ ಕುಕ್ ಕೇವಲ ದೇಶಾಭಿಮಾನದಿಂದ ಪ್ರೇರಿತನಾಗಿ ನೌಕಾಪಡೆಯಲ್ಲಿ ಸೇರಿದ. ನೌಕಾಪಡೆಯ ಜೀವನ ಆಗ ನರಕಪ್ರಾಯವಾಗಿದ್ದರೂ ಕುಕ್ ಹಿಂದೆಗೆಯಲಿಲ್ಲ. ಅವನು ನೌಕಾಪಡೆಯಲ್ಲಿ ಮತ್ತೆ ಸಾದಾ ಖಲಾಸಿಯಾಗಿ ಪ್ರಾರಂಭ ಮಾಡಬೇಕಾಯಿತು. ಆದರೆ "ಏಳು ವರ್ಷಗಳ ಯುದ್ಧ" ದಲ್ಲಿ ಅವನ ಹಿರಿಮೆ ಎಷ್ಟು ಘನತೆಗೇರಿತೆಂದರೆ, ಅವನನ್ನು "ಗ್ರೆನ್‌ವಿಲ್" ಹಡಗಿನ ಮುಖ್ಯಾಧಿಕಾರಿಯಾಗಿ ಮಾಡಿ ಕೆನಡಾದ ಸೆಂಟ್‌ಲಾರೆನ್ಸ್ ನದೀಪಥವನ್ನು ನಕಾಶೆ ತೆಗೆಯಲು ನೇಮಿಸಲಾಯಿತು. ಫ್ರೆಂಚರ ತೋಪುಗಳ ಅಳವಿನಲ್ಲಿ, ಮೂಲನಿವಾಸಿ ಕೆಂಪು ಜನರಿಂದ ಬೆನ್ನಟ್ಟಲ್ಪಟ್ಟವನಾಗಿ, ಕುಕ್ ಸೆಂಟ್ ಲಾರೆನ್ಸ್ ನದೀ ಪಥವನ್ನು ರೇಖಿಸಿ ಭೂಗೋಲಶಾಸ್ತ್ರಿಗಳಲ್ಲಿ ಶ್ರೇಷ್ಠ ಸ್ಥಾನ ಪಡೆದನು.

೩೪ ನೇ ವಯಸ್ಸಿನಲ್ಲಿ ಕುಕ್ ಮದುವೆಯಾದ. ಆದರೆ ನೆಲದ ಮೇಲೆ ಬಹು ಕಾಲ ಕಳೆಯುವುದು ಈ ಸಾಗರಭಕ್ತನಿಗೆ ಸಾಧ್ಯವಿದ್ದಿಲ್ಲ. ಅವನ ಹೆಂಡತಿಯ ಜೀವನ ಬಹುಮಟ್ಟಿಗೆ ವಿರಹದಲ್ಲೇ ಕಳೆಯಲಿತ್ತು. ವರ್ಷಗಳಲ್ಲೊಮ್ಮೆ ಮರಳಿದಾಗ ಮಕ್ಕಳೇನೋ ಹುಟ್ಟುತ್ತಿದ್ದವು. ಅದರಿಂದ ಅವಳ ಚಿಂತೆಗಳು ಹೆಚ್ಚುತ್ತಿದ್ದವಲ್ಲದೆ ಬೇರೆ ಅಲ್ಲ.

೧೭೬೯ ಜೂನ್ ೩ ರಂದು ರವಿ-ಶುಕ್ರ ಯುತಿಯಾಗುತ್ತದೆಂದು ಖಗೋಲ ಶಾಸ್ತ್ರಿಗಳು ಲೆಕ್ಕ ಹಾಕಿದ್ದರು. ಈ ಯುತಿಯಲ್ಲಿ ಶುಕ್ರನು ಸೂರ್ಯನ ಮುಖದ ಮೇಲಿಂದಲೇ ಹಾಯ್ದು ಹೋಗುವವನಿದ್ದನು. ಆಗ ಭೂಮಿಯ ಬೇರೆಬೇರೆ ಸ್ಥಳಗಳಿಂದ ಈ ಘಟನೆಯನ್ನು ನಿರೀಕ್ಷಿಸಿದರೆ ಭೂಮಿಯಿಂದ ಸೂರ್ಯನ ದೂರವನ್ನು ನಿಷ್ಕರ್ಷೆಯಾಗಿ ಅಳೆಯಬಹುದೆಂದು ಖಗೋಲಶಾಸ್ತ್ರಿಗಳು ಅಭಿಪ್ರಾಯಪಟ್ಟರು. ಇದನ್ನು ನಿರೀಕ್ಷಿಸಲು ದಕ್ಷಿಣ ಶಾಂತಸಾಗರದ ತಾಹಿತಿ ದ್ವೀಪ ಒಂದು ಉತ್ತಮ ಸ್ಥಾನವೆಂದು ಭಾವಿಸಲಾಯಿತು.

ಮೇಲಾಗಿ, ಆ ಕಾಲದಲ್ಲಿ ಶಾಂತಸಾಗರವೊಂದು ಅಜ್ಞಾತ ವಿಶ್ವವೇ ಆಗಿತ್ತು. ಆಸ್ಟ್ರೇಲಿಯಾ, ನ್ಯೂಜೀಲಂಡ್, ನ್ಯೂಗಿನಿಗಳನ್ನು ನಾವಿಕರು ದೂರದಿಂದ ನೋಡಿದ್ದರಾಗಲಿ, ಅವುಗಳ ಬಗ್ಗೆ ಏನೂ ಗೊತ್ತಿದ್ದಿಲ್ಲ. ಭೂಮಿಯ ಅರ್ಧಭಾಗವನ್ನಾಕ್ರಮಿಸಿದ್ದ ಈ ಸಾಗರದಲ್ಲಿ ಚದರಿಬಿದ್ದಿದ್ದ ದ್ವೀಪಗಳಲ್ಲಿ ಹೆಚ್ಚಿನವು ಹೇಗೋ ನಾವಿಕರ ಗಮನದಿಂದ ತಪ್ಪಿಹೋಗಿದ್ದವು. ಆದರೆ ಕೆಲ ವಿಜ್ಞಾನಿಗಳು ದಕ್ಷಿಣ ಗೋಲಾರ್ಧದಲ್ಲಿ ಒಂದು ಮಹಾ ಭೂಖಂಡವಿರಲೇಬೇಕೆಂದು ಸಾಧಿಸುತ್ತಿದ್ದರು. ಆಗ ಗೊತ್ತಿದ್ದ ಭೂಖಂಡಗಳೆಲ್ಲ ದಕ್ಷಿಣ ಅಮೇರಿಕ ಬಿಟ್ಟರೆ ಉತ್ತರ ಗೋಲಾರ್ಧದಲ್ಲೇ ಇದ್ದವು. ಇದನ್ನು ಸರಿದೂಗಲು ದಕ್ಷಿಣ ಗೋಲಾರ್ಧದಲ್ಲಿ ಭೂಖಂಡವೊಂದಿಲ್ಲದಿದ್ದರೆ ಭೂಮಿ ತೂಕತಪ್ಪಿ ಬಿದ್ದುಬಿಡಬೇಕಿತ್ತು. ಎಂದವರ ಹೇಳಿಕೆಯಾಗಿತ್ತು. ಅಂಥ ಖಂಡವಾವುದೂ ತಮಗೆ ಕಂಡುಬಂದಿಲ್ಲೆಂದು ನಾವಿಕರು ಹೇಳಿದರೆ, ಈ ವಿಜ್ಞಾನಿಗಳು, ಅದು ಇರಲೇಬೇಕು, ನಿಮಗೆ ಸಿಕ್ಕಿಲ್ಲ ಅಷ್ಟೇ ಎನ್ನುತ್ತಿದ್ದರು!

ರವಿ-ಶುಕ್ರ ಯುತಿಯ ನಿರೀಕ್ಷೆ ಮತ್ತು ದಕ್ಷಿಣ ಸಾಗರದ ಶೋಧನೆಗಾಗಿ ಒಂದು ತಂಡವನ್ನು ಕಳಿಸಲು ಬ್ರಿಟಿಶ್ ವಿಜ್ಞಾನಿ ಸಂಘವಾದ ರಾಯಲ್ ಸೊಯಾನಸ್ಯಟಿ ನಿರ್ಧರಿಸಿತು. ನೌಕಾ ಯಾನ, ಗಣಿತ ಶಾಸ್ತ್ರ, ಭೂಗೋಲ ಇವೆಲ್ಲವುಗಳಲ್ಲಿ ತಜ್ಞನೆನಿಸಿದ ಜೇಮ್ಸ್ ಕುಕ್‌ಗೆ

ಈ ತಂಡದ ನಾಯಕತ್ವ ವಹಿಸಿ ಕೊಟ್ಟರು.

ಕುಕ್ಕನೇ ಆರಿಸಿದ ೯೭ ಅಡಿ ಉದ್ದದ ಹಳೆ ಮಾದರಿಯ ದುರಸ್ತಿಯಾದ "ಎಂಡೆವರ್" ಹಡಗಿನಲ್ಲಿ ಹದಿನೆಂಟು ತಿಂಗಳ ಆಹಾರಾದಿ ಸಾಮಗ್ರಿಗಳ ಸಂಗಡ ೮೪ ಜನರುಳ್ಳ ತಂಡ ತನ್ನ ಇತಿಹಾಸಪ್ರಸಿದ್ಧವಾಗಲಿದ್ದ ಸಾಗರ ಪರ್ಯಟನಕ್ಕೆ ಹೊರಟಿತು. ಅದರಲ್ಲಿ ಖ್ಯಾತ ಸಸ್ಯಶಾಸ್ತ್ರ ಡಾ. ಸೋಲಂಡರ್, ರಾಯಲ್ ಸೊಸೈಟಿಯ ಖಗೋಲ ಶಾಸ್ತ್ರಿ ಗ್ರೀನ್, ರಾಯಲ್ ಸೊಸೈಟಿಯ ಅಧ್ಯಕ್ಷನಾಗಲಿದ್ದ ಸಸ್ಯ ಸಂಗ್ರಾಹಕ ಸರ್ ಜಾಸೆಫ್ ಬ್ಯಾಂಕ್ಸ್ ಮೊದಲಾದ ವಿಜ್ಞಾನಿಗಳೂ ತರಬೇತಾದ ಖಲಾಸಿಗಳೂ ಸೇರಿದ್ದರು. ೧೭೬೮ರ ಜುಲೈ ೩೦ ರಂದು ಡೆಫ್ಟ್‌ಫೋರ್ಡ್‌ನಿಂದ ಹೊರಟ ಕ್ಯಾಪ್ಟನ್ ಕುಕ್ಕನ ಹಡಗು ಅಟ್ಲಾಂಟಿಕ್ ಸಾಗರವನ್ನು ಉತ್ತರ ದಕ್ಷಿಣವಾಗಿ ಛೇದಿಸಿ ಆರು ತಿಂಗಳಲ್ಲಿ ದಕ್ಷಿಣ ಅಮೇರಿಕದ ತುತ್ತ ತುದಿಯಾದ ಹಾರ್ನ್ ಭೂಶಿರವನ್ನು ದಾಟಿತು. ಅಲ್ಲಿಂದ ಅದು ಶಾಂತ ಸಾಗರವನ್ನು ಪ್ರವೇಶಿಸಿತು. ಮತ್ತೆ ಮೂರು ತಿಂಗಳಲ್ಲಿ ಆತ ಶಾಂತಸಾಗರದ ಮಧ್ಯದಲ್ಲಿರುವ ತಾಹಿತಿ ದ್ವೀಪದ ಮತಾವಿಯಾ ಅಖಾತದಲ್ಲಿ ಲಂಗರು ಹಾಕಿದ್ದನು.

ಈ ಪ್ರವಾಸದಲ್ಲೆ ಕ್ಯಾಪ್ಟನ್ ಕುಕ್ಕನ ಧೀರ ಗಂಭೀರ ಉದಾತ್ತ ಪ್ರಕೃತಿ ಪ್ರಕಟಕ್ಕೆ ಬಂದದ್ದು. ಎತ್ತರವೂ ದೃಢವೂ ಆದ ಅವನ ಮೈಕಟ್ಟೇ ಯಾರಲ್ಲಿಯೂ ಭಯ ಗೌರವಗಳನ್ನು ಹುಟ್ಟಿಸುವಂತಿತ್ತು. ತನ್ನ ವ್ಯಕ್ತಿತ್ವದ ಬಲದಿಂದಲೇ ಆತ ನಾವಿಕರ ವಿಧೇಯತೆಯನ್ನು ಪಡೆದಿದ್ದ. ನೌಕಾ ಜೀವನದಲ್ಲಿ ಅಂದು ಸಾಮಾನ್ಯವಾಗಿದ್ದ ಕೊರಡೆಯೇಟಿನ ಶಿಕ್ಷೆಯನ್ನಾತ ಅತ್ಯಪರೂಪವಾಗಿಯೆ ಉಪಯೋಗಿಸುತ್ತಿದ್ದ. ಆದರೆ ಶಿಸ್ತನ್ನು ಕೆಡಿಸಲು ಅವನೆಂದೂ ಅವಕಾಶ ಕೊಡುತ್ತಿರಲಿಲ್ಲ. ತಾಹಿತಿ ಇಂದಿನಂತೆ ಅಂದೂ ಅಪ್ಸರಃಸದೃಶರಾದ ಸುಂದರಿಯರ— ಅವರ ಲೈಂಗಿಕ ಜೀವನವೂ ಅಪ್ಸರೆಯರಂತೆಯೆ ಇದೆ— ಬೀಡಾಗಿತ್ತು. ಅವರ ಸಹವಾಸದ ಹುಚ್ಚಿನಲ್ಲಿ ನಾವಿಕರು ಕರ್ತವ್ಯಭ್ರಷ್ಟರಾಗದಂತೆ ಆತ ಎಚ್ಚರ ವಹಿಸಿದ್ದ. ಇಬ್ಬರು ನಾವಿಕರು ತಾಹಿತಿಯಲ್ಲೇ ಉಳಿದು ತಾಹಿತಿ ರಮಣಿಯರನ್ನು ಮದುವೆಯಾಗುವೆನೆಂದಾಗ ಕುಕ್ ಅವರನ್ನು ಹೆಡಮುರಿಗೆ ಬಿಗಿದು ಹಡಗಿಗೆ ತರಿಸಿದ.

ತನ್ನ ನಾವಿಕರ ಆರೋಗ್ಯದ ಬಗ್ಗೆ ಆತ ಸದಾ ಚಿಂತನಾಗಿರುತ್ತಿದ್ದ. ಲಿಂಬೆ ರಸ, ಹಳೇ ಬೆಣ್ಣೆ, ಕಾಕಂಬಿ ಮೊದಲಾದವನ್ನು ಆತ ನಿಶ್ಚಿತ ಪ್ರಮಾಣದಲ್ಲಿ ಒತ್ತಾಯದಿಂದ ತಿನ್ನಿಸುತ್ತಿದ್ದ. ಈ ಆಹಾರ ಶಿಸ್ತು ಎಷ್ಟು ಕಠೋರವಾಗಿತ್ತೆಂದರೆ ನಾವಿಕರು ಅವರ ವಿರುದ್ಧ ದಂಗೆಯೇಳುವವರೆಗೂ ಆಯಿತು. ಆದರೆ ಆಗಿನ ಕಾಲದಲ್ಲಿ ನಾವಿಕರಲ್ಲಿ ಸೇಕಡಾ ೯೦ ಜನರನ್ನು ನಿರಂತರವಾಗಿ ಬಾಧಿಸುತ್ತಿದ್ದ ಸ್ಕರ್ವಿ ಕುಕ್ಕನ ನಾವಿಕರಲ್ಲಿ ಒಮ್ಮೆಯೂ ತಲೆದೋರಲಿಲ್ಲ. ವಿಟಾಮಿನ್‌ಗಳ ವಿಚಾರದಲ್ಲಿ ವೈದ್ಯಶಾಸ್ತ್ರ ಏನನ್ನೂ ಅರಿತಿರದಿದ್ದ ಆ ಕಾಲದಲ್ಲಿ ಕುಕ್ಕನು ಕೇವಲ ಅಂತರಿಕ ಸ್ಫೂರ್ತಿಯಿಂದ ನಾವಿಕರಿಗಾಗಿ ಗೊತ್ತುಪಡಿಸಿದ ಆಹಾರ ನಿಯಮಗಳನ್ನು ನೋಡಿ ಇಂದಿನ ವೈದ್ಯರೂ ಬೆರಟ್ಟು ಕಚ್ಚುತ್ತಾರೆ.

ತಾಹಿತಿಯಲ್ಲಿ ಖಗೋಲ ಶಾಸ್ತ್ರಿಗಳು ತಮ್ಮ ನಿರೀಕ್ಷಣೆಗಳಲ್ಲಿ, ಸಸ್ಯ, ಪ್ರಾಣಿಶಾಸ್ತ್ರಿಗಳು ತಮ್ಮ ಸಂಗ್ರಹದಲ್ಲಿ ತೊಡಗಿದ್ದಾಗ ಕ್ಯಾಪ್ಟನ್ ಕುಕ್ ದಕ್ಷಿಣ ಸಮುದ್ರ ದ್ವೀಪಗಳ ಜನರ ವಿಚಾರವಾಗಿ ಮನೋಹರವಾಗಿ ದಿನಚರಿಯನ್ನು ಬರೆಯುತ್ತಿದ್ದ. ಇವುಗಳನ್ನೂ ಅನಂತರ ಅವನು ಭೌಗೋಲಿಕ ದಿನಚರಿಗಳನ್ನೂ ಓದುವುದಕ್ಕೆಂದೇ ಅವನ ಅಪ್ಪ ಮುಪ್ಪಿನಲ್ಲಿ ಅಕ್ಷರಾಭ್ಯಾಸ ಮಾಡಿದ್ದು. "ಸಾಮಾಜಿಕವಾಗಿ ತಾಹಿತಿಯ ಜನ ನಿಸ್ಸಂಕೋಚವಾಗಿ ಬೆರೆಯುತ್ತಾರೆ; ಆದರೆ ಊಟದ ವೇಳೆಗೆ ಮಾತ್ರ ಒಬ್ಬರೊಬ್ಬರು ಹದಿನೈದು ಗಜ ದೂರ ಕುಳಿತು, ಒಬ್ಬರನ್ನೊಬ್ಬರು ನೋಡದೆ, ಮಾತಾಡದೆ ಊಟ ಮಾಡುತ್ತಾರೆ" ಎಂದಾತ

ಬರೆದಿದ್ದಾನೆ. "ಶ್ರೀಮಂತರು ಸ್ವಹಸ್ತದಿಂದ ಉಣ್ಣದೆ ಕೆಲಸದವರ ಕೈಯಿಂದ ತಮ್ಮ ಬಾಯಿಗೆ ತುತ್ತು ಹಾಕಿಸಿಕೊಳ್ಳುತ್ತಾರೆ. ತುಂಬ ದಯಾಳುಗಳಾಗಿದ್ದರೂ ಈ ಜನ ತಮಗೆ ಬೇಕಾದ ಒಡವೆಗಳನ್ನು ನಿಸ್ಸಂಕೋಚವಾಗಿ ಕದ್ದು ಬಿಡುತ್ತಾರೆ."

ಕುಕ್ ಈ ಜನರನ್ನು ದಯೆಯಿಂದ ಆದರೆ ದೃಢತೆಯಿಂದಲೇ ನಡೆಸಿಕೊಂಡ. ಅವರಿಗೆ ಅವನಲ್ಲಿ ಅಪಾರ ಗೌರವವುಂಟಾಯಿತು. ಯಾರಾದರೂ ಕದ್ದು ಸಿಕ್ಕಿಬಿದ್ದರೆ ಅವನು ಅವರ ತಲೆ ಬೋಳಿಸಿ ಕಳಿಸಿಬಿಡುತ್ತಿದ್ದನಷ್ಟೇ. ಅದರಿಂದ ಅವರು ತಮ್ಮ ಜನರಲ್ಲೇ ನಗೆಗೀಡಾಗುತ್ತಿದ್ದರು. ದ್ವೀಪದ ಗೌಡರು ಕೆಲವೊಮ್ಮೆ ಸುಂದರಿಯರನ್ನವನಿಗೆ ಕಾಣಿಕೆಯಾಗಿ ಒಪ್ಪಿಸಿದರೆ ಕುಕ್ ಅದನ್ನು ಸೌಮ್ಯವಾಗಿ ನಿರಾಕರಿಸುತ್ತಿದ್ದ. ತನ್ನ ಗುಣಗಳಿಂದ ಅವನು ದ್ವೀಪವಾಸಿಗಳಿಗೆ ಪ್ರಿಯನಾದ; ಅವನಿಗೆ ಬೇಕಾದ ಆಹಾರಾದಿ ಸಾಮಗ್ರಿಗಳು ಅಲ್ಲಿ ನಿರಾಂತಕವಾಗಿ ಲಭಿಸುವಂತಾಯಿತು.

ಖಗೋಲ ಶಾಸ್ತ್ರಿಗಳು ರವಿ-ಶುಕ್ರ ಯುತಿಯನ್ನೇನೋ ನಿರೀಕ್ಷಿಸಿದರು. ಆದರೆ ಇತರ ಸ್ಥಳಗಳಲ್ಲಿ ಇತರ ವಿಜ್ಞಾನಿಗಳಿಗೆ ಯುತಿಯನ್ನು ಸರಿಯಾಗಿ ನಿರೀಕ್ಷಿಸಲಾಗದ್ದರಿಂದ ಅದು ಪ್ರಯೋಜನಕಾರಿಯಾಗಲಿಲ್ಲ. ಕುಕ್ ತನ್ನ ಹಡಗನ್ನು ದುರಸ್ತಿಗೊಳಿಸಿ ಅಜ್ಞಾತ ಭೂಖಂಡದ ಶೋಧಕ್ಕಾಗಿ ದಕ್ಷಿಣ ದಿಕ್ಕಿಗೆ ಹೊರಟ. ೧,೨೦೦ ಮೈಲು ಸಾಗಿ ೪೦ ನೇ ದಕ್ಷಿಣ ಅಕ್ಷಾಂಶದ ವರೆಗೆ ಬಂದರೂ ಭೂಮಿ ಸಿಗಲಿಲ್ಲ. ಆತ ಪಶ್ಚಿಮಕ್ಕೆ ಹೊರಳಿದ. ಆ ವರೆಗೆ ಯಾರೂ ನೋಡಿರದಿದ್ದ ಸಾಗರದಲ್ಲಿ ಸಾಗುತ್ತ ಆತ ನ್ಯೂಜೀಲಂಡನ್ನು ಮುಟ್ಟಿದ. ೧೩೦ ವರ್ಷ ಹಿಂದೆ ಡಚ್ ನಾವಿಕ ಒಬ್ಬನು ಕಂಡಿದ್ದ ಈ ದ್ವೀಪ ನಿಜವಾಗಿ ಒಂದಲ್ಲ, ಎರಡು ಎಂದು ಕುಕ್ ಮನಗಂಡ. ಆ ದ್ವೀಪಗಳ ನಡುವಿನ ಅತಿ ಅಪಾಯಕರವಾದ ಸಮುದ್ರವನ್ನು ಹಾಯ್ದು ಉಭಯ ದ್ವೀಪಗಳ ಸುತ್ತ 8 ಆಕಾರದಲ್ಲಿ ಸುತ್ತುಹಾಕಿ ಅವುಗಳ ೨,೪೦೦ ಮೈಲುದ್ದದ ಕರಾವಳಿಯನ್ನು ಇಂದಿನವರೂ ಅಚ್ಚರಿಪಡುವಷ್ಟು ನಿಷ್ಕರ್ಷೆಯಾಗಿ ನಕ್ಷೆ ಹಾಕಿದ. ಇದು ಅದ್ಭುತವೇ ಆಗಿತ್ತು. ಏಕೆಂದರೆ ನ್ಯೂಜೀಲಂಡಿನ ಆದಿವಾಸಿಗಳು ತಾಹಿತಿಯುವರಂತೆ ಸೌಮ್ಯರಾಗಿರದೆ ನರಭಕ್ಷಕರಾಗಿದ್ದರು. ಕುಕ್ ನೀರು ಮತ್ತು ಇತರ ಪೂರೈಕೆಗಳಿಗಾಗಿ ಮೇಲಿಂದ ಮೇಲೆ ಕರಾವಳಿಗಿಳಿಯಬೇಕಾಗುತ್ತಿತ್ತು. ಆಗೆಲ್ಲ ನರಭಕ್ಷಕರು ಅವರ ಮೇಲೇರಿ ಬರುತ್ತಿದ್ದರು. ಅವರನ್ನು ಕೊಲ್ಲದೆ ತನ್ನ ಕಾರ್ಯ ಸಾಧಿಸಿಕೊಂಡು ಕುಕ್ ಬ್ರಿಟಿಶ್ ಧ್ವಜವನ್ನು ಅಲ್ಲಿ ನಟ್ಟು ನ್ಯೂಜೀಲಂಡನ್ನು ಬ್ರಿಟಿಶ್ ಸಾಮ್ರಾಜ್ಯಕ್ಕೆ ಸೇರಿಸಿದ.

ಈಗ ಕುಕ್ ಹೊರಟು ಎರಡು ವರ್ಷವಾಗಿತ್ತು. ಆದರೆ ಅವನ ಉತ್ಸಾಹ ಕುಗ್ಗಿರಲಿಲ್ಲ. ಆತ ಮತ್ತೆ ನೈಋತ್ಯಾಭಿಮುಖವಾಗಿ ಸಾಗಿದ. ೧೬೦೬ ರಲ್ಲಿ ಅಲ್ಲೊಂದು ಭೂಮಿಯನ್ನು ಡಚ್ಚರು ಕಂಡಿದ್ದರು. ಅದನ್ನು ಸಂದರ್ಶಿಸಲು ಕುಕ್ ಉತ್ಸುಕನಾಗಿದ್ದ. ಕುಕ್ ಅದರ ಆಗ್ನೇಯ ಕರಾವಳಿಯನ್ನು ತಲಪಿದ. ನಿಸರ್ಗ ಶಾಸ್ತ್ರಿಗಳು ಇಳಿದು ಅಂದಿನ ವರೆಗೂ ಕಾಣದ ಸಸ್ಯಜಾತಿಗಳನ್ನೂ ವಿಚಿತ್ರ ಪ್ರಾಣಿಗಳ ಅವಶೇಷಗಳನ್ನೂ ಕಲೆ ಹಾಕಿದರು; ಆಗಲೇ ಕಂಗರೂವನ್ನು ಮೊಟ್ಟಮೊದಲು ಬಿಳಿ ಮನುಷ ಕಂಡದ್ದು.

ಈ ದ್ವೀಪ —ಈಗ ಆಸ್ಟ್ರೇಲಿಯ— ಎಷ್ಟು ದೊಡ್ಡದಿರಬಹುದೆಂದು ಕಂಡುಹಿಡಿಯಲು ಪೂರ್ವ ಕರಾವಳಿಯಲ್ಲಿ ಕುಕ್ ಉತ್ತರಾಭಿಮುಖವಾಗಿ ಸಾಗಿದ. ಹವಳದ ದಂಡೆಗಳಿಂದ ಕಿಕ್ಕಿರಿದುಹೋದ ಈ ಪೂರ್ವ ಕರಾವಳಿ ಎಷ್ಟು ಘೋರವಾದದ್ದೆಂದು ಕುಕ್ಕನಿಗೆ ಬೇಗನೇ ಅರಿವಾಯಿತು. ರಾಕ್ಷಸನ ಹಲ್ಲುಗಳಂತೆ ಸಮುದ್ರದಲ್ಲಿ ನೀಡಿದ ಈ ದಂಡೆಗಳ ಎಡೆಯಿಂದ ಹೇಗೋ ಸಾಗುತ್ತ ಐದು ತಿಂಗಳ ಕಾಲ ಕುಕ್ಕನ ಹಡಗು ಪೂರ್ವ ಕರಾವಳಿಯನ್ನು ಪರಿ

ಶೀಲಿಸಿತು. ೧೭೭೦ ಜೂನ್ ೧೧ ರಂದು ಹಡಗಿನ ತಳ ಹವಳದ ದಂಡೆಗೆ ಢಿಕ್ಕಿ ಹೊಡೆದು ನೀರು ಒಳನುಗ್ಗತೊಡಗಿತು. ಯಾವಾಗಲೂ ಇವರ ಮೇಲೇರಿ ಬರಲು ಬಿಲ್ಲು ಬಾಣ ಭರ್ಜಿಗಳಿಂದ ಅಣಿಯಾಗಿಯೆ ಇದ್ದ ಮೂಲ ನಿವಾಸಿಗಳಿಂದ ತಪ್ಪಿಸಿಕೊಂಡು, ಒಡೆದ ಹಡಗನ್ನು ಹಳೆಯ ಹಾಯಿಗಳಿಂದ ತೇಪೆ ಹಾಕಿ, ಬದುಕಿ ಬರಲು ಕುಕ್ಕನಂಥ ಧೀರನಿಗೆ ಮಾತ್ರವೇ ಸಾಧ್ಯವಿತ್ತು.

ಆಗಸ್ಟ್ ೧೯, ೧೭೭೦ ರಂದು ಆಸ್ಟ್ರೇಲಿಯದ ಈಶಾನ್ಯ ಮೂಲೆಯನ್ನು ದಾಟಿ ಕುಕ್ ಕರಾವಳಿಯಲ್ಲಿಳಿದು ಬ್ರಿಟಿಶ್ ಧ್ವಜವನ್ನು ನೆಟ್ಟು ಈ ನವಖಂಡವನ್ನು ಇದು ಬ್ರಿಟಿಶ್ ರಾಜನದೆಂದು ಸಾರಿದನು. ಜಗತ್ತಿನ ಅತಿ ದೊಡ್ಡ ದ್ವೀಪವೆಂದು ಹೆಸರಾಂತ ಆಸ್ಟ್ರೇಲಿಯ ಖಂಡದ ಇತಿಹಾಸಕ್ಕೆ ಹೀಗೆ ಮುನ್ನುಡಿಯಾಯಿತು. ಕೆಲ ವರ್ಷಗಳಲ್ಲಿ ಬ್ರಿಟಿಶ್ ರಾಜನ ರಾಜ್ಯದಲ್ಲಿ "ಕಾಳಾಪಾಣಿ" ಶಿಕ್ಷೆಯಾದ ೭೦೦ ಕೈದಿಗಳನ್ನು ಇಲ್ಲಿ ತಂದಿಳಿಸಲಾಯಿತು. ಇಂದಿನ ಸುಸಮೃದ್ಧ ಆಸ್ಟ್ರೇಲಿಯದ ಚರಿತ್ರೆ ಅಲ್ಲಿಂದಲೇ ಮೊದಲಾದದ್ದು.

ಕುಕ್ ಪುನಃ ಪಶ್ಚಿಮಾಭಿಮುಖವಾಗಿ ಸಾಗಿ ಜಾವಾ ತಲುಪಿದ. ಅಲ್ಲಿ ತನ್ನ ಜೀರ್ಣವಾದ ನೌಕೆಯನ್ನು ದುರಸ್ತಿಪಡಿಸಿಕೊಂಡು ಹಿಂದೂ ಸಾಗರವನ್ನು ದಾಟಿ ಗುಡ್‌ಹೋಪ್ ಭೂಶಿರವನ್ನು ಸುತ್ತಿ ೧೨ ಜುಲೈ ೧೭೭೧ ಇಂಗ್ಲಂಡ್ ತಲುಪಿದ. ಆತ ಹೊರಟು ೧೦೦೦ಕ್ಕೂ ಹೆಚ್ಚು ದಿನಗಳಾಗಿದ್ದವು. ಅವನ ಮೇಲೆ ಇಂಗ್ಲಂಡಿನಲ್ಲಿ ಗೌರವ ವರ್ಷಣವೇ ಆಯಿತು. ಮೂರನೇ ಜಾರ್ಜ್ ಅವನಿಗೆ ದರ್ಶನವಿತ್ತ. ವಿಜ್ಞಾನಿಗಳು ಅವನ ಗೆಳೆತನಕ್ಕೆ ಹಂಬಲಿಸಿದರು. ಎಲ್ಲರಿಗೂ ಆನಂದವೇ ಆನಂದ. ಆದರೆ ದಕ್ಷಿಣ ಗೋಲಾರ್ಧದಲ್ಲಿ ಒಂದು ಮಹಾ ಭೂಖಂಡವಿರಲೇಬೇಕೆಂದು ಪುಸ್ತಕ ಬರೆದಿದ್ದ ವಿಜ್ಞಾನಿ ಡಾಲ್ರಿಂಪ್ಲ್ ಮಾತ್ರ ಸಿಟ್ಟು ಬೆಂಕಿಯಾದ. ಇರಲೇಬೇಕಾದ ಖಂಡ ಇಲ್ಲವೆಂದು ಕುಕ್ ವರದಿ ಮಾಡಿದ್ದನಲ್ಲ. "ಇದೆ, ನಿನಗೆ ಸಿಕ್ಕಿಲ್ಲ, ಅಷ್ಟೆ," ಎಂದೇ ಮತ್ತೂ ಅವನ ಹಟವಾಗಿತ್ತು.

ಆದ್ದರಿಂದ ಮನೆಗೆ ಮರಳಿ ಒಂದು ವರ್ಷ ಒಂದು ದಿವಸದ ನಂತರ ಪುನಃ "ರಿಸೊಲ್ಯುಶನ್" ಮತ್ತು "ಅಡ್ವೆಂಚರ್" ಎಂಬ ಎರಡು ಹಡಗುಗಳ ನಾಯಕತ್ವ ವಹಿಸಿ ಕುಕ್ ಅಜ್ಞಾತ ಭೂಖಂಡವನ್ನರಸುತ್ತ ಹೊರಟ. ಈ ಸಲ ಆತ ಗುಡ್‌ಹೋಪ್ ಭೂಶಿರವನ್ನು ತಲುಪಿ ಸಾಮಗ್ರಿಗಳನ್ನು ಹೇರಿಕೊಂಡು ನೇರವಾಗಿ ದಕ್ಷಿಣಕ್ಕೆ ಸಾಗಿದ. ೨,೦೦೦ ಮೈಲು ಸಾಗಿದರೂ ಭೂಮಿ ಸಿಗಲಿಲ್ಲ. ಕುಕ್ ಅಂದಿನ ವರೆಗೆ ಯಾರೂ ಹೋಗದಷ್ಟು ದಕ್ಷಿಣಕ್ಕೆ—ದಕ್ಷಿಣ ಅಕ್ಷಾಂಶ ೬೭° ಗಳ ವರೆಗೆ ಸಾಗಿದ. ಮಂಜು ಮತ್ತು ಬರ್ಫದ ಗಡ್ಡೆಗಳು ಅವನಿಗೆದುರಾದವು. ಅವನ ಜತೆಹಡಗು "ರಿಸೊಲ್ಯುಶನ್" ಅವನಿಂದ ಬೇರ್ಪಟ್ಟಿತ್ತು. ೧೦,೦೦೦ ಮೈಲು ಸುತ್ತು ಹಾಕಿ ಆತ ನ್ಯೂಜೀಲಂಡ್ ತಲುಪಿದ ಅಜ್ಞಾತ ಖಂಡ ಸಿಗಲಿಲ್ಲ.

ಬೇಸಗೆ ಬಂದೊಡನೆ ಆತ ಪುನಃ ದಕ್ಷಿಣಕ್ಕೆ ಸಾಗಿದ. ಈ ಸಾರಿ ಆತ ೭೧° ೧೦' ದಷ್ಟು ದಕ್ಷಿಣಕ್ಕೆ ಹೋದ. ದಕ್ಷಿಣ ಧ್ರುವದ ಮಹಾ ಬರ್ಫರಾಶಿಯ ಅಂಚು ಅವನಿಗೆ ಸಿಕ್ಕಿತು. ಅನಂತರ ಆತ ಈ ಬರ್ಫಾಚ್ಛಾದಿತ ಪ್ರದೇಶಕ್ಕೆ ಸುತ್ತು ಹಾಕಿ ದಕ್ಷಿಣ ಅಮೇರಿಕದ ತುತ್ತ ತುದಿಯನ್ನು ಬಳಸಿ ಪುನಃ ಅಟ್ಲಾಂಟಿಕ್ ಸಾಗರಕ್ಕೆ ಬಂದು ಸೇರಿದ. ಹೀಗೆ ದಕ್ಷಿಣ ಧ್ರುವಕ್ಕೆ ಪೂರ್ತಿ ಒಂದು ಪ್ರದಕ್ಷಿಣೆ ಹಾಕಿದ ಮೊದಲ ಮನುಷ್ಯನೇ ಅವನಾದ. ಮಾನವ ವಸತಿಗೆ ಯೋಗ್ಯವಾದ ಮಹಾ ದಕ್ಷಿಣ ಖಂಡವೊಂದಿದೆಯೆಂಬ ಕಲ್ಪನೆ ಪೂರ್ತಿ ನಿರಸನ ಹೊಂದಿತೆಂದಾತ ಸಾರಿದ. (ಇದು ಪೂರ್ತಿ ಸರಿಯಾಗಿರಲಿಲ್ಲ. ಮೈಲುಗಟ್ಟಳೆ ಆಳವಾದ ಬರ್ಫದಲ್ಲಿ ಹುದುಗಿದ ಮಹಾ ದಕ್ಷಿಣಧ್ರುವಖಂಡವೊಂದಿದೆಯೆಂದಾತನಿಗೆ ಗೊತ್ತಿರಲಿಲ್ಲ. ಗೊತ್ತಾಗುವ ಹಾಗೂ ಇರಲಿಲ್ಲ.) ಆದರೆ ಈ ಶೋಧದಲ್ಲಿ ಶಾಂತ ಸಾಗರ

ದಲ್ಲಿ ಅನೇಕ ದ್ವೀಪಸ್ತೋಮಗಳನ್ನಾತ ಹೊಸದಾಗಿ ಕಂಡುಹಿಡಿದಿದ್ದ. ಆಸ್ಟ್ರೇಲಿಯದ ಈಶಾನ್ಯಕ್ಕಿದ್ದ ನ್ಯೂ ಕೆಲಡೋನಿಯ ಮತ್ತು ನಾರ್‌ಫೋಕ್ ಅವನ ಹೊಚ್ಚಹೊಸ ಶೋಧಗಳಾಗಿದ್ದವು. ದಕ್ಷಿಣ ಅಟ್ಲಾಂಟಿಕದ ನ್ಯೂಜಾರ್ಜಿಯ, ಸ್ಯಾಂಡ್‌ವಿಚ್ ದ್ವೀಪಗಳೂ ಅವನದೇ ಶೋಧವಾಗಿದ್ದವು.

೧,೦೦೦ ದಿನಗಳಲ್ಲಿ ಈ ಸಲ ಜೇಮ್ಸ್ ಕುಕ್ ೬೦,೦೦೦ ಮೈಲು ಯಾತ್ರೆ—ಭೂಮಿಯ ಸುತ್ತಳತೆಯ ಸುಮಾರು ಎರಡೂವರೆ ಪಟ್ಟು—ಮಾಡಿದ್ದ. ಹೋದಲ್ಲೆಲ್ಲ ಆತ ತನ್ನ ಧೀರೋದಾತ್ತತೆಯಿಂದ ಮೂಲನಿವಾಸಿಗಳ ಗೌರವಕ್ಕೆ ಪಾತ್ರನಾದ. ಎದುರುಬಿದ್ದ ದ್ವೀಪ ಗೌಡರು ಅವನ ದಿಟ್ಟತನಕ್ಕೆ ಬೆರಗಾಗಿಯೆ ಬ್ರಿಟಿಶ್ ಪ್ರಭುತ್ವಕ್ಕೆ ತಲೆವಾಗುತ್ತಿದ್ದರು. ಆತ ಈ ಮೂಲ ನಿವಾಸಿಗಳ ಆಚಾರಹೀನತೆಯನ್ನು ಮೆಚ್ಚುತ್ತಿರಲಿಲ್ಲ. ಅವರ ಕಳ್ಳತನವನ್ನೂ ಆತ ಖಂಡಿಸುತ್ತಿದ್ದ. ಅವರ ಸೌಖ್ಯವೃದ್ಧಿಗಾಗಿ ಹೋದಲ್ಲೆಲ್ಲ ಕುದುರೆಗಳನ್ನು, ಆಡುಗಳನ್ನು, ದನಗಳನ್ನು ಇಳಿಸುತ್ತಿದ್ದ; ಹೊಸ ಸಸ್ಯಗಳನ್ನು ನಡುತ್ತಿದ್ದ. ಆದರೆ ದುರ್ದೈವದಿಂದ ಅವರಿಗೆ ಈ ಪ್ರಾಣಿಗಳನ್ನು ಸಾಕುವುದಕ್ಕಿಂತ ಕೊಂದು ತಿನ್ನುವುದೇ ಸುಲಭವಾಗಿ ಕಂಡದ್ದರಿಂದ ಆಡುಗಳ ಹೊರತು ಬೇರಾವ ಸಾಕುಪ್ರಾಣಿಯೂ ಉಳಿದುಕೊಳ್ಳಲಿಲ್ಲ.

೧೭೭೫ ಜುಲೈ ೩೦ ರಂದು ಆತ ಇಂಗ್ಲೆಂಡಿಗೆ ಮರಳಿದಾಗ ವಿಶ್ವಪ್ರಸಿದ್ಧನಾಗಿದ್ದ. ಅವನನ್ನು ರಾಯಲ್ ಸೊಸೈಟಿಗೆ ಆರಿಸಿ ಪ್ರಮುಖ ವಿಜ್ಞಾನಿಗಳ ಸಾಲಿನಲ್ಲಿ ಸ್ಥಾನವೀಯಲಾಯಿತು.

ಮತ್ತೆ ಒಂದೇ ವರ್ಷ. ೧೭೭೬ ರಲ್ಲಿ ಪುನಃ "ರಿಸೊಲ್ಯುಶನ್" ಮತ್ತು "ಡಿಸ್ಕವರಿ" ಹಡಗುಗಳ ನೇತೃತ್ವ ವಹಿಸಿ, ಈ ಸಲ ಉತ್ತರ ಸಾಗರದ ಪರಿಶೀಲನೆಗೆ ಹೊರಟ. ಉತ್ತರಅಮೇರಿಕದ ಅಲಾಸ್ಕ ಮತ್ತು ರಶಿಯದ ಸೈಬೀರಿಯದ ನಡುವಿನ ಜಲಸಂಧಿಯನ್ನು ದಾಟಿ ನೇರ ಉತ್ತರಕ್ಕೆ ಸಾಗಿ ಉತ್ತರ ಧ್ರುವದಾಚೆ ಹೋಗಿ ಅಟ್ಲಾಂಟಿಕ ಸಾಗರ ಮತ್ತು ಅಮೇರಿಕವನ್ನು ತಲಪುವ ದಾರಿ ಕಂಡು ಹಿಡಿಯಲು ಅವನನ್ನು ಕಳಿಸಲಾಗಿತ್ತು. ಆದರೆ ಉತ್ತರಧ್ರುವ ಸಾಗರವನ್ನು ಮುಚ್ಚಿದ ಮಹಾ ಬರ್ಫ ರಾಶಿಯಿಂದ ಇದು ಅಸಾಧ್ಯವಾಗಿತ್ತು. ಆತ ೧೭೭೮ ರಲ್ಲಿ ಅಲಾಸ್ಕಾದ ಕುಂಟು ಕೋರೆ ಕರಾವಳಿಯನ್ನೆಲ್ಲ ಹೊಕ್ಕು ಹೊರಟು, ಬೇರಿಂಗ್ ಜಲಸಂಧಿಯನ್ನು ದಾಟಿದ. ಉತ್ತರ ೭೦°೪೧' ವರೆಗೂ ನುಗ್ಗಿದ. ಬಳಿಕ ಬರ್ಫ ರಾಶಿಯಿಂದ ತಡೆಯಲ್ಪಟ್ಟವನಾಗಿ ಉತ್ತರದ ದಾರಿ ಅಸಾಧ್ಯವೆಂದು ತೋರಿಸಿಕೊಟ್ಟ.

ಆತ ಶಾಂತಸಾಗರದಲ್ಲಿ ಕಂಡುಹಿಡಿದ ದ್ವೀಪಗಳಲ್ಲೆಲ್ಲ ಹವಾಯಿ ಅವನನ್ನು ಆಕರ್ಷಿಸಿತ್ತು. ಆ ದ್ವೀಪಗಳ ನೈಸರ್ಗಿಕ ಸೌಂದರ್ಯ, ಜನರ ಅಪೂರ್ವ ಸಜ್ಜನಿಕೆ ಅವನನ್ನು ಮೋಹಿಸಿದ್ದವು. ಆತ ಈ ದ್ವೀಪಗಳ ಭಾಷೆಯಲ್ಲಿ ತಜ್ಞನಾಗಿದ್ದ. ಅಲ್ಲಿಯ ಜನ ಆತನನ್ನು ದೇವತೆಯೆಂದೇ ಭ್ರಮಿಸಿದ್ದರು. ಅನೇಕ ಶತಮಾನಗಳ ಹಿಂದೆ ಶ್ವೇತವರ್ಣದ ದೇವನೊಬ್ಬನು ತನ್ನ ಸ್ವವರ್ಣೀಯ ಅನುಯಾಯಿಗಳೊಡನೆ ಆ ದ್ವೀಪ ಬಿಟ್ಟು ಹಡಗಿನಲ್ಲಿ ಹೋಗಿದ್ದನೆಂದೂ ಅವನು ಮರಳಿ ಬರುವುದಾಗಿ ಆಶ್ವಾಸನವಿತ್ತಿದ್ದನೆಂದೂ ಒಂದು ಜನಶ್ರುತಿಯಿತ್ತು. ಈ ಆಜಾನುಬಾಹು ವೀರನೇ ಆ ದೇವನೆಂದು ಹವಾಯಿ ಜನ ನಂಬಿದರು. ಅವರಿಗೆ ಸತ್ಯವನ್ನು ತಿಳಿಹೇಳಿದರೂ ಫಲವಾಗಿರಲಿಲ್ಲ.

ಈ ಜನರನ್ನು ನೆನೆದುಕೊಂಡು ಕುಕ್ ತನ್ನ ಉತ್ತರ ಧ್ರುವಸಾಗರ ಯಾನದಿಂದ ನೇರವಾಗಿ ದಕ್ಷಿಣಕ್ಕೆ ಹೊರಳಿ ಹವಾಯಿ ದ್ವೀಪಗಳಿಗೆ ಹೋದ. ೧೭೭೯ ರಲ್ಲಿ, ಮೊದಲ ಸಲ ಅವನು ಆ ದ್ವೀಪಕ್ಕೆ ಹೋಗಿದ್ದ. ಎರಡನೇ ಸಲ ೧೭೮೦ ಫೆಬ್ರುವರಿಯಲ್ಲಿ ಅವನು ಅಲ್ಲಿ ತಲುಪಿದ. ಜನರು ಹರ್ಷತುಂದಿಲರಾಗಿ ತಮ್ಮ "ದೇವತೆ"ಗಳನ್ನು ಸ್ವಾಗತಿಸಿದರು.

ಎಲ್ಲವೂ ಸುಖವಾಗಿ ಸಾಗುತ್ತಿದ್ದಾಗ ತೊಂದರೆಗಳು ಪ್ರಾರಂಭವಾದವು. ಕುಕ್ಕನ ತಂಡದಲ್ಲೊಬ್ಬ ಸತ್ತ. ಅವನನ್ನು ಹುಗಿದರು. ಹಾಗಾದರೆ ಈ ಜನರೂ ಸಾಯುತ್ತಾರೆಯೆ? ಇವರು ಠಕ್ಕ ದೇವತೆಗಳೇ? ಅನಂತರ ಒಂದು ಬಿರುಗಾಳಿ ಬೀಸಿತು. ಬಿಳಿಯರ ಹಡಗುಗಳು ಚಂಡಮಾರುತದಲ್ಲಿ ತಮ್ಮ ಹಡಗುಗಳಂತೆಯೆ ನಿಸ್ಸಹಾಯವಾಗಿ ತುಡಿದಾಡುವುದನ್ನು ಹವಾಯಿಗಳು ಕಂಡರು. ಇದು ಇವರು ಠಕ್ಕ ದೇವತೆಗಳೆಂಬುದಕ್ಕೆ ಇನ್ನೊಂದು ಪ್ರಮಾಣವಾಗಿತ್ತು.

ದೈವತ್ವದ ಭ್ರಮ ನಿವಾರಣೆಯಾದುದೇ ತಡ, ಹವಾಯಿ ಜನ ಕಳ್ಳತನಕ್ಕಾರಂಭಿಸಿದರು. ಕುಕ್ ಅವರನ್ನು ದಂಡಿಸಿದ. ಆ ಮೇಲೆ ಇವರ ಒಂದು ದೋಣಿಯ ಕಳುವಾಯಿತು. ಶಿಸ್ತುವಾದಿಯಾದ ಕುಕ್ ಈಗ ಒಂದು ತಪ್ಪು ಮಾಡಿದ. ಬುದ್ಧಿವಂತನಂತೆ ಹೊರಟುಹೋಗುವ ಬದಲು ಈ ಕಳ್ಳತನಕ್ಕೆ ಪ್ರತೀಕಾರ ಮಾಡಬೇಕೆಂದು ಆತ ತನ್ನ ನೌಕಾ ಸೈನಿಕರನ್ನು ಕರಾವಳಿಗಿಳಿಸಿ ಅಲ್ಲಿನ ಗೌಡನ ಮನೆಗೆ ನುಗ್ಗಿ ಅವನನ್ನು ಒತ್ತಾಯದಿಂದ ಹಡಗಿನತ್ತ ಕರೆತಂದ. ಆತ ಕರೆಯನ್ನು ಸೇರುವುದರೊಳಗೆ ಭಾರಿ ಜನಜಂಗುಳಿ ಸೇರಿತ್ತು. ಜನ ತಮ್ಮ "ದೇವತೆ"ಯ ರಕ್ತಕ್ಕಾಗಿ ಹಾತೊರೆಯುತ್ತಿದ್ದರು. ಈ ನಡುವೆ ಯಾರೋ ಒಬ್ಬ ಕುಕ್ ಸೈನಿಕ ಒಬ್ಬ ನಿರಪರಾಧಿ ಗೌಡನನ್ನು ಕೊಂದನೆಂದು ವಾರ್ತೆ ಬಂತು. ಜನ ಉರಿದೆದ್ದಿತು. ಕುಕ್ಕನನ್ನು ಒಬ್ಬ ಹಿಂದಿನಿಂದ ಗದೆಯಿಂದ ಬಡಿದ. ಇನ್ನೊಬ್ಬ ಚೂರಿಯಿಂದಿರಿದ. ಬಿಲ್ಲು ಬಾಣಗಳಿಗೂ ಬಂದೂಕುಗಳಿಗೂ ಘರ್ಷಣೆ ಆರಂಭವಾಯಿತು. ಹಡಗಿನ ತೋಫು ಹಾರಿಸಿದರೆ ಕರಾವಳಿಯಲ್ಲಿದ್ದ ತಮ್ಮವರಿಗೇ ಬಡಿಯುವುದೆಂದು ಹೆದರಿ ಅವು ಸುಮ್ಮನಿದ್ದವು. ಕೊನೆಗೊಂದು ಭರ್ಜಿಯ ಇರಿತಕ್ಕೆ ಕುಕ್ ನೀರಿಗೆ ಬಿದ್ದ. ಅವನೊಡನೆ ನಾಲ್ವರು ಅನುಯಾಯಿಗಳೂ ಉರುಳಿದರು. ಅಂತೂ ೧೭೭೯ ಫೆಬ್ರುವರಿ ೧೪ ಸೂರ್ಯಾಸ್ತ ಕಾಲದಲ್ಲಿ ಜಗತ್ತಿನ ಶ್ರೇಷ್ಠತಮ ಸಾಗರ ಶೋಧಕ ತನ್ನ ದೇವತ್ವಕ್ಕೆ ಬಲಿಯಾಗಿ ಪ್ರಾಣ ಬಿಟ್ಟ. ಕೆಲ ಕಾಲ ಅವನ ಹೆಣವೂ ಸಿಗಲಿಲ್ಲ. ಆದರೆ ಹವಾಯಿಗಳಿಗೆ ಆ ಮೇಲೆ ಬುದ್ಧಿ ಬಂತು. ಅವರು ಹೆಣವನ್ನು—ಕೈಕಾಲು ತಲೆ ಮತ್ತು ಕೆಲ ಎಲುಬುಗಳನ್ನು ಮರಳಿ ಕೊಟ್ಟರು. (ಉಳಿದದ್ದನ್ನವರು ತಿಂದಿರಬೇಕು.) ಅವನ್ನೇ ತೋಫಿನ ಗರ್ಜನೆಯೊಂದಿಗೆ ಹುಗಿಯಲಾಯಿತು.



## ಬಲ್ಲವರ ನುಡಿ

ಲೋಪದೋಷಗಳಿಲ್ಲದ ಮನುಷ್ಯರನ್ನು ಕಂಡರೆ ನನಗೆ ಭಯವಾಗುತ್ತದೆ.

— ಅನತೋಲ್ ಫ್ರಾನ್ಸ್

ಪ್ರಶಾಂತವಾದ ಸಮುದ್ರ ದಂಡೆಯಲ್ಲಿ ಕುಳಿತು, ಕೈಯಲ್ಲಿ ಹುಲ್ಲುಕಡ್ಡಿ ಹಿಡಿದು, ಅದರಿಂದ ಹನಿಹನಿಯಾಗಿ ನೀರನ್ನು ಎತ್ತಿ ಹಾಕಿ ಸಮುದ್ರವನ್ನು ಬರಿದು ಮಾಡುವ ಮನುಷ್ಯರಂತೆ ಮೋಕ್ಷದಾಸೆಯುಳ್ಳವರು ತಾಳ್ಮೆ ತೋರಿಸಬೇಕು.

— ಗಾಂಧೀಜಿ

ಮನುಷ್ಯನು ಹೆಚ್ಚು ಹೆಚ್ಚು ವಿಷಯಗಳ ಬಗ್ಗೆ ನಾಚಿಕೆಪಟ್ಟಂತೆಲ್ಲಾ ಹೆಚ್ಚು ಹೆಚ್ಚು ಗೌರವಶಾಲಿಯಾಗುತ್ತಾನೆ.

— ಬರ್ನಾರ್ಡ್‌ಷಾ

ಸಂಗ್ರಹ: ಸಿ. ಎಚ್. ಕೃಷ್ಣಶಾಸ್ತ್ರಿ

ಒಂದು ಅದ್ಭುತ
ಅನುಭವ

# ಭೂತ ಸಾಕ್ಷಿ ಹೇಳಿತು

ಆರ್. ನಾರಾಯಣ
ಅಯ್ಯರ್

ಪ್ರಾಕ್ಟಿಕಲ್ ಪರೀಕ್ಷೆಯನ್ನು ನಡೆಸಲು ಮಡಿಕೇರಿಗೆ ಆಗಮಿಸಿದ್ದ, ಗೆಳೆಯರಾದ ಪಾಲಿಟೆಕ್ನಿಕಲ್ ಪ್ರಿನ್ಸಿಪಾಲ್ ಶ್ರೀಯುತ "M"* ರವರ ಗೌರವಾರ್ಥವಾಗಿ, ಕಾಫಿ ಪ್ಲಾಂಟರ್ ಶ್ರೀಯುತ ಕಾವೇರಿಯಪ್ಪನವರು ತಮ್ಮ ಬಂಗಲೆಯಲ್ಲಿ ಡಿನ್ನರ್ ಪಾರ್ಟಿಯನ್ನು ಏರ್ಪಡಿಸಿದ್ದರು. ಆಹ್ವಾನಿತರಲ್ಲಿ ಅವರ ಇನ್ನಿಬ್ಬರು ಗೆಳೆಯರೂ ಇದ್ದರು. ಒಬ್ಬರು ಪೋಲೀಸ್ ಇನ್‌ಸ್ಪೆಕ್ಟರು, ಮತ್ತೊಬ್ಬರು ಪ್ರೌಢಶಾಲಾ ಅಧ್ಯಾಪಕರು. ಊಟವನ್ನು ಮುಗಿಸಿ ತಾಂಬೂಲವನ್ನು ಮೆಲ್ಲುತ್ತಾ ನಾಲ್ವರು ಗೆಳೆಯರೂ ಹರಟೆಗೆ ಕುಳಿತರು.

ಮಾತು ಹೇಗೋ ಭೂತ ಪ್ರೇತಗಳ ವಿಚಾರಕ್ಕೆ ತಿರುಗಿತು. ಪ್ರಿನ್ಸಿಪಾಲರು ನುಡಿದರು, "ಭೂತ ಪ್ರೇತಗಳು ಇರುವುದು ಶುದ್ಧ ಸುಳ್ಳು. ಕಾಲ್ಪನಿಕ ಅಂಜಿಕೆಗಳಿಂದ ತುಂಬಿದವನ ಕಣ್ಣಿಗೆ ಭೂತ ಪ್ರೇತಗಳು ಕಾಣುವುವೇ ಹೊರತು, ಅವು ಇವೆಯೆನ್ನುವುದಕ್ಕೆ ಯಾವ ವೈಜ್ಞಾನಿಕ ಆಧಾರವೂ ಇಲ್ಲ."

ಪ್ರಿನ್ಸಿಪಾಲರ ಮಾತಿಗೆ ಪ್ರತಿ ನುಡಿಯುವ ಸಾಹಸವನ್ನು ಯಾರೂ ಮಾಡಲಿಲ್ಲ. ಪೋಲೀಸ್ ಇನ್‌ಸ್ಪೆಕ್ಟರರು ಮಾತ್ರ ಅಧ್ಯಾಪಕರನ್ನು ಕುರಿತು, "ನಿಮ್ಮ ಅಮಾವಾಸ್ಯೆಯ ರಾತ್ರಿಯ ಅಪೂರ್ವ ಅನುಭವವನ್ನು ತಿಳಿಸುವಿರಾ?" ಎಂದು ಕೇಳಿದರು. ಆಗ ಅಧ್ಯಾಪಕರು ಹೇಳಿದ ಕಥೆಯು ಹೀಗಿದೆ.

### ಅಧ್ಯಾಪಕರು ಹೇಳಿದ ಕಥೆ—

ನಾನು ಶಾಲಾ ರೇಂಜ್ ಇನ್‌ಸ್ಪೆಕ್ಟರಾಗಿ ಇಲ್ಲಿಗೆ ವರ್ಗವಾಗಿ ಕೆಲವೇ ದಿನಗಳಾಗಿದ್ದವು. ನನಗೆ ಮಲೆನಾಡಿನ ಅನುಭವವು ತೀರ ಹೊಸದು. ಒಂದು ದಿನ ಸಂಜೆ, ಒಂದೆರಡು ಶಾಲೆಗಳ ಇನ್

* ಶ್ರೀಯುತ "M" ರವರ ಹೇಳಿಕೆಯ ಆಧಾರದ ಮೇಲೆ ಈ ಕಥೆಯನ್ನು ಬರೆಯಲಾಗಿದೆ. ಸ್ವತಸ್ಸಿದ್ಧ ಕಾರಣಗಳಿಗಾಗಿ ಈ ಲೇಖನದಲ್ಲಿ ನಿಜನಾಮಧೇಯಗಳಾವುವನ್ನೂ ಕೈಬಿಟ್ಟಿದೆ.

76-6

ಸ್ಪೆಕ್ಷನ್ ಮುಗಿಸಿಕೊಂಡು, ಪಿಟ್ಲಾಲಿ ಎಸ್ಟೇಟಿನಿಂದ ರಸ್ತೆಯ ವರೆಗೂ ಕಾಲುದಾರಿಯಲ್ಲಿಯೇ ಸೈಕಲನ್ನು ನೂಕಿಕೊಂಡು ಬರುತ್ತಿದ್ದೆನು. ನಿರ್ಜನ ಪ್ರದೇಶ. ಎರಡೂ ಕಡೆ ಕಣ್ಣಿಗೆ ಕಾಣಿಸುವಷ್ಟು ದೂರವೂ ಕಾಫಿ ತೋಟಗಳೇ ಇದ್ದುವು. ಕತ್ತಲಾಗುವ ಮೊದಲೇ ರಸ್ತೆಯನ್ನು ತಲುಪಬೇಕಾಗಿದ್ದಿತು. ಇದ್ದಕ್ಕಿದ್ದಂತೆಯೇ ಮಳೆ ಆರಂಭವಾಯಿತು.

ಮಲೆನಾಡಿನ ಮಳೆ ಎಂದರೆ ಕೇಳಬೇಕೆ? ಸಂಜೆಕತ್ತಲಿನಲ್ಲಿ ಅನತಿ ದೂರದಲ್ಲಿಯೇ ಕಾಣುತ್ತಿದ್ದ ಕಲ್ಲಿನ ಮಂಟಪವೊಂದರ ವರೆಗೂ ಓಡುವುದರೊಳಗಾಗಿ ಚೆನ್ನಾಗಿ ತೋಯ್ದು ಹೋಗಿದ್ದೆನು. ಅದು, ಕಾಫಿ ಕಾಯಿಗಳು ಮಾಗಿ ಹಣ್ಣಾಗುವ ಕಾಲದಲ್ಲಿ ತೋಟದ ಕಾವಲುಗಾರರು ಇರಲು ಕಟ್ಟಿಸಿದ್ದ ಮಂಟಪ. ಇರಿಚಲು ಬೀಳದಂತೆ ಬಾಗಿಲನ್ನು ಮುಚ್ಚಿ, ಟಾರ್ಚ್ ಲೈಟ್ ಹಾಕಿ ಒಳಗೆ ನೋಡಿದೆನು. ಎಂದೋ, ಯಾರೋ, ಮೂರು ಕಲ್ಲುಗಳನ್ನಿಟ್ಟು ಒಲೆಮಾಡಿ ಅಡಿಗೆ ಮಾಡಿಕೊಂಡಿದ್ದ ಸೂಚನೆಗಳು ಕಂಡವು. ಒಂದು ಮೂಲೆಯಲ್ಲಿ ಸೌದೆ ಪುಳ್ಳೆಯ ಸಣ್ಣದೊಂದು ರಾಶಿಯಿದ್ದಿತು.

ತುಂಬ ಚಳಿಯಾಗುತ್ತಿದ್ದಿತು. ಕತ್ತಲು ಬೇರೆ. ಹೇಗೋ ಕಷ್ಟಪಟ್ಟು ಬೆಂಕಿ ಕಡ್ಡಿ ಗೀರಿ ಪುಳ್ಳೆಗಳಿಗೆ ಬೆಂಕಿ ಹಚ್ಚಿದೆನು. ಬೆಂಕಿ ಕಾಯಿಸುತ್ತಾ ಸಿಗರೇಟ್ ಸೇದುತ್ತಾ ಆರಾಮವಾಗಿ ಕುಳಿತೆನು. ಒಂದು ಗಂಟೆಯಾದರೂ ಮಳೆಯು ನಿಲ್ಲಲೇ ಇಲ್ಲ. ಕುಳಿತಿದ್ದಂತೆಯೇ ನಿದ್ದೆಯ ಜೊಂಪು ಹತ್ತಿತು.

ಇದ್ದಕ್ಕಿದ್ದಂತೆಯೇ ಯಾರೋ ಕೆಮ್ಮಿದಂತಾಯಿತು. ಹೊರಗಡೆ ಹೆಜ್ಜೆಯ ಸಪ್ಪಳ ಕೇಳಿಬಂದಿತು. ಮುದುಕರೊಬ್ಬರು ಒಳಕ್ಕೆ ನಡೆದು ಬಂದು, ಬೆಂಕಿ ಕಾಯಿಸುತ್ತಾ ನನ್ನ ಎದುರಿಗೇ ಕುಳಿತರು. ಮುಚ್ಚಿದ ಬಾಗಿಲು ತೆಗೆದಿರಲಿಲ್ಲ. ಹಾಕಿದ ಚಿಲಕ ಹಾಗೆಯೇ ಇದ್ದಿತು. ಆದರೂ ಇವರು ಒಳಕ್ಕೆ ಹೇಗೆ ಬಂದಿರಬಹುದು, ಎಂದು ಒಂದು ಕ್ಷಣಕಾಲ ಚಕಿತಗೊಂಡೆನು. ಬಹುಶ
ಚಿಲಕವನ್ನು ಹಾಕಿರಲಿಲ್ಲವೋ ಏನೋ, ಅವರ
ಬಾಗಿಲನ್ನು ನೂಕಿಕೊಂಡು ಒಳಕ್ಕೆ ಬಂದ
ಬಾಗಿಲು ಮುಚ್ಚಿ ಚಿಲಕ ಹಾಕಿದುದನ್ನು ನಾನ
ನಿದ್ರೆಯ ಜೋಂಪಿನಲ್ಲಿ ಗಮನಿಸಲಿಲ್ಲವೋ ಏನೋ
ಎಂದುಕೊಂಡೆನು.

ಪಾಪ, ಅವರು ಉಟ್ಟಿದ್ದುದು ಹರಿದು ಚಿಂ
ಯಾಗಿದ್ದ ಬಟ್ಟೆಗಳು. ಅವೂ ತೊಯ್ದು ನೀ
ತೊಟ್ಟಿಕ್ಕುತ್ತಿದ್ದುವು. ಬೆಂಕಿ ಕಾಯಿಸುತ್ತಿದ್ದರು
ಅವರು ಚಳಿಯಿಂದ ಗಡಗಡನೆ ನಡುಗುತ್ತಿದ್ದರು

ಅವರ ಆಗಿನ ಸ್ಥಿತಿಯನ್ನು ನೋಡಿ ನಾನ
ಮರುಕದಿಂದ ಮಾತನಾಡಿಸಿದೆನು. "ಪಾಪ
ತಾವು ಮಳೆಯಲ್ಲಿ ತುಂಬಾ ನೆನೆದು ಬಿಟ್ಟಿದ್ದೀ
ಈ ಮಂಟಪಕ್ಕೆ ಬರದೇ ಹೋಗಿದ್ದರೆ ತಮ
ಇನ್ನೂ ತುಂಬಾ ಕಷ್ಟವಾಗುತ್ತಿದ್ದಿತು. ಈ ಮಂ
ಪವನ್ನು ಕಟ್ಟಿಸಿದಾತನು ಪುಣ್ಯಾತ್ಮನೇ ಸರಿ."

ಮುದುಕರು ನಿಟ್ಟುಸಿರು ಬಿಟ್ಟು ನುಡಿದರು
"ಏನು ಪುಣ್ಯಾತ್ಮನೋ. ಪಾಪ! ಆತನದ
ತುಂಬಾ ದುಃಖಮಯ ಜೀವನವಾಗಿದ್ದಿತ
ಆತನ ಹೆಸರು ಬೆಳ್ಳಿಯಪ್ಪ. ಆತನೇ ಇಲ್ಲಿ ನೀ
ಕಂಡ ಬೆಳ್ಳಿಯ ಹೊಂಡ ಎಸ್ಟೇಟಿನ ಮಾಲೀ
ನಾಗಿದ್ದನು. ಆತನಿಗೆ ಹೆಂಡತಿ ಮಕ್ಕಳು ಯಾರ
ಇರಲಿಲ್ಲ. ಎಲ್ಲರೂ ಪ್ಲೇಗ್ ಮಾರಿಗೆ ಆಹು
ಯಾಗಿ ಮಡಿದಿದ್ದರು. ಆ ಒಂಟಿ ಮುದುಕ
ತನ್ನ ಎಸ್ಟೇಟನ್ನು ೨೭ ಸಾವಿರ ರೂಪಾಯಿಗಳಿ
ಮಾರಿಬಿಟ್ಟು, ಮನೆಯಲ್ಲಿದ್ದುಕೊಂಡೇ ತನ್ನ ದಿ
ಗಳನ್ನು ಕಳೆಯುತ್ತಿದ್ದನು. ಆತನಲ್ಲಿದ್ದ ಹಣ
ಆಸೆಗಾಗಿ ಮನೆಯ ನೌಕರನಾಗಿದ್ದ ಅಪ್ಪಚ್ಚು
ಒಂದು ದಿನ ಆತನನ್ನು ಹೊಂಡದೊಳಕ್ಕೆ ತ
ಕೊಲೆ ಮಾಡಿಬಿಟ್ಟನು. ದೇಹವು ತೇಲಿ ಬಂದ
ಹೆಣವನ್ನು ಹೊರಕ್ಕೆ ತೆಗೆದಾಗ, ಮುದುಕ
ಜೀವನದಲ್ಲಿ ಜುಗುಪ್ಸೆಗೊಂಡು ಆತ್ಮಹತ್ಯೆ ಮಾ
ಕೊಂಡಿದ್ದಾನೆ, ಎಂದು ಎಲ್ಲರೂ ಹೇ
ಕೊಂಡರು. ಆತನ ಪ್ರೇತವು ಸೇಡಿಗಾಗಿ ಹಾತೊ
ರೆಯುತ್ತಾ, ಈ ಕಾಫಿ ತೋಟದಲ್ಲೆಲ್ಲಾ ಓಡ

ಡುವುದನ್ನೂ ಇದೇ ಮಂಟಪಕ್ಕೆ ಆಗಾಗ್ಗೆ ಬರುವುದನ್ನೂ ತೋಟದ ಕೆಲಸಗಾರರು ಕೆಲವರು ನೋಡಿದ್ದಾರೆ."

"ಭೂತ ಪ್ರೇತಗಳಲ್ಲಿ ನನಗೆ ಕೊಂಚವೂ ನಂಬಿಕೆಯಿಲ್ಲ. ಭೂತಗಳಿವೆಯೆನ್ನುವುದಕ್ಕೆ ವೈಜ್ಞಾನಿಕವಾಗಿ ಯಾವ ಆಧಾರವೂ ಇಲ್ಲ. ಇದೆಲ್ಲವೂ ಅಜ್ಞಾನಿಗಳ ಮೂಢ ನಂಬಿಕೆಯಷ್ಟೆ," ಎಂದೆನು ನಾನು.

"ನನಗೂ ಅಷ್ಟೆ, ನಂಬಿಕೆಯೇ ಇರಲಿಲ್ಲ, ನಾನೊಂದು... ಪ್ರೇತ... ವಾಗುವ... ವರೆಗೂ" ಮುದುಕರು ಒಂದೊಂದು ಪದವನ್ನೂ ಬಿಡಿಸಿ, ತಡೆದು ತಡೆದು, ನಿಧಾನವಾಗಿ ನುಡಿದರು.

ಮಳೆಯಲ್ಲಿ ನೆನೆದು, ಚಳಿಯಲ್ಲಿ ನಡುಗುತ್ತಾ, ಮರುಕವನ್ನು ಹುಟ್ಟಿಸುವಂತಹ ಪ್ರೇತಕಳೆಯಿಂದ ದೀನರಾಗಿ ಕಾಣುತ್ತಿದ್ದ ಮುದುಕರ ಈ ಮಾತುಗಳು ವಿಷಾದದಿಂದ ಆಡಿದ ಮಾತುಗಳು, ಎಂದೇ ನಾನು ಭಾವಿಸಿ, ಅನುಕಂಪದಿಂದ ಹೇಳಿದೆನು. "ಅಯ್ಯೋ ಪಾಪ! ಇಷ್ಟು ಬೆಂಕಿ ಕಾಯಿಸಿದರೂ ನಿಮ್ಮ ಕೈಕಾಲುಗಳಿಂದ ಇನ್ನೂ ನೀರು ತೊಟ್ಟಿಕ್ಕುತ್ತಲೇ ಇದೆಯಲ್ಲ. ಒದ್ದೆ ಆರಲು ಇನ್ನೂ ಎಷ್ಟು ಕಾಲ ಬೇಕೋ! ತೆಗೆದುಕೊಳ್ಳಿ. ಈ ಕರವಸ್ತ್ರದಿಂದ ಚೆನ್ನಾಗಿ ಒರೆಸಿಕೊಳ್ಳಿ."

ಮುದುಕರೆಂದರು, "ಭೌತಿಕ ವಸ್ತುವಾದ ಕರವಸ್ತ್ರವು ನನಗೆ ಯಾವ ಪ್ರಯೋಜನಕ್ಕೂ ಬಾರದು. ನನ್ನ ಈಗಿನ ಪರಿಸ್ಥಿತಿಯಲ್ಲಿ ನನ್ನ ಕೈಕಾಲುಗಳ ಒದ್ದೆಯು ಎಂದಿಗೂ ಆರಲಾರದು. ನೋಡಿ ಇಲ್ಲಿ!" ಹೀಗೆ ಹೇಳುತ್ತಾ ಅವರು ತಮ್ಮ ಎರಡು ಕೈಗಳನ್ನೂ ಎರಡು ಕಾಲುಗಳನ್ನೂ ಧಗಧಗನೆ ಉರಿಯುತ್ತಿದ್ದ ಬೆಂಕಿಯಲ್ಲಿ ಚಾಚಿದರು.

ನೋಡಿದೆನು. ಒಂದೇ ಒಂದು ಕ್ಷಣಕಾಲ ಮಾತ್ರವೇ ನೋಡಿದೆನು. ಮತ್ತೆ ಒಂದು ಕ್ಷಣವೂ ಅಲ್ಲಿ ನಿಲ್ಲದೆ, ಮಿಂಚಿನ ವೇಗದಿಂದ ಸೈಕಲ್ಲನ್ನು ತೆಗೆದುಕೊಂಡು ಹೊರಬಂದು ಕತ್ತಲಿನಲ್ಲಿಯೇ ಹುಚ್ಚನಂತೆ ಕೂಗುತ್ತಾ ವೇಗವಾಗಿ ಓಡಿದೆನು.

*

ಅಧ್ಯಾಪಕರ ಕಥೆಯನ್ನು ಕೇಳಿ, ವಿಜ್ಞಾನದಲ್ಲಿ ಪದವೀಧರರಾಗಿದ್ದ ಪ್ರಿನ್ಸಿಪಾಲರೆಂದರು, "ಎಂತಹ ಅಪ್ರತಿಮ ಧೈರ್ಯಶಾಲಿಗಳಾದರೂ ಕತ್ತಲಿನಲ್ಲಿ, ನಿರ್ಜನ ಪ್ರದೇಶದಲ್ಲಿ, ಒಂಟಿಯಾಗಿ ಇದ್ದ ನಿಮಗೆ, ನಿಮ್ಮ ಸುಪ್ತ ಮಾನಸಿಕ ಅಂಜಿಕೆಯೇ ಭೂತದ ಭ್ರಮೆಯನ್ನು ಬರುವಂತೆ ಮಾಡಿರುವುದು. ಇದರಲ್ಲಿ ಸಂದೇಹವೇ ಇಲ್ಲ. ಈ ನಿಮ್ಮ ಅನುಭವವು ಭೂತಪ್ರೇತಗಳ ಇರುವಿಕೆಯನ್ನು ರುಜುವಾತು ಪಡಿಸಿದಂತೇನೂ ಆಗಲಿಲ್ಲ."

ಆಗ ಪೋಲೀಸ್ ಇನ್‌ಸ್ಪೆಕ್ಟರರು ಹೇಳಿದರು: "ಈಗ ನೀವು ಕೇಳಿದುದು ಕಥೆಯ ಮೊದಲಿನ ಭಾಗವನ್ನು ಮಾತ್ರ. ಕಥೆಯ ಎರಡನೆಯ ಭಾಗವನ್ನೂ ಕೇಳಿ." ಹೀಗೆ ನುಡಿದು ಪೋಲೀಸ್ ಇನ್‌ಸ್ಪೆಕ್ಟರರು ತಮ್ಮ ಕಥೆಯನ್ನಾರಂಭಿಸಿದರು.

### ಪೋಲೀಸ್ ಇನ್‌ಸ್ಪೆಕ್ಟರರು ಹೇಳಿದ ಕಥೆ

ಬೆಳ್ಳಿಯಪ್ಪನ ಕೊಲೆಯು ನಡೆದುದು ೧೯೫೬ನೆಯ ಇಸವಿಯಲ್ಲಿ. ಕೊಲೆಯೇ ನಡೆಯಿತೆನ್ನಲು ಸಾಕಾದಷ್ಟು ರುಜುವಾತುಗಳಿರಲಿಲ್ಲವಾಗಿ, ಪೋಲೀಸಿನವರು ಕೇಸನ್ನು ಕೈಬಿಟ್ಟಿದ್ದರು.

ಅಧ್ಯಾಪಕರು ಹೇಳಿದ ಘಟನೆಯು ನಡೆದುದು, ಕೊಲೆಯಾದ ೫ ವರ್ಷಗಳ ನಂತರ. ಅವರಿಂದ ವಿವರಗಳನ್ನು ಕೇಳಿದ ದಿನವೇ ಸಂಶಯದ ಮೇಲೆ ಅಪ್ಪಚ್ಚುವನ್ನು ಅರೆಸ್ಟ್ ಮಾಡಿ, ಅವನ ಮೇಲೆ ಆರೋಪಣೆಯನ್ನು ಹೊರಿಸಿದೆವು. ಹಣಕ್ಕಾಗಿ ಕೊಲೆ ಮಾಡಿದುದು ನಿಜವೆಂದು ಅವನು ತಪ್ಪೊಪ್ಪಿಗೆಯ ಹೇಳಿಕೆಯನ್ನಿತ್ತನು. ಹಣದ ಅಧಿಕಾಂಶವನ್ನು ಅವನು ಬ್ಯಾಂಕಿನಲ್ಲಿ ಇಟ್ಟಿದ್ದುದು ಪತ್ತೆಯಾಯಿತು. ವಿಚಾರಣೆ ನಡೆದು ಸೆಷನ್ಸ್ ಕೋರ್ಟಿನಲ್ಲಿ ಅಪ್ಪಚ್ಚುವಿಗೆ ಮರಣದಂಡನೆಯು ವಿಧಿಸಲ್ಪಟ್ಟಿತು.

ಆದರೆ ಅವನು ಜೈಲಿನಲ್ಲಿದ್ದಾಗ ಹೇಗೋ ಬ್ಲೇಡೊಂದನ್ನು ಸಂಪಾದಿಸಿ ಕತ್ತಿನ ಜ್ಯೂಗುಲರ್ ರಕ್ತನಾಳವನ್ನು ಕತ್ತರಿಸಿ ಆತ್ಮಹತ್ಯೆ ಮಾಡಿಕೊಂಡು, ನೇಣಿನ ಹಗ್ಗದಿಂದ ತಪ್ಪಿಸಿಕೊಂಡುಬಿಟ್ಟನು. ಈ ಕೇಸು ಆಗ್ಗೆ ಎಷ್ಟೊಂದು ಕೋಲಾಹಲಕ್ಕೆ ಕಾರಣವಾಯಿತೆನ್ನುವುದನ್ನು ವೃತ್ತಪತ್ರಿಕೆಗಳಿಂದ ತಿಳಿದೇ ಇರುವಿರಿ.

ಕೊಲೆಯಾದವನ ಪ್ರೇತವು, ಐದು ವರ್ಷಗಳಷ್ಟು ಕಾಲವು ಗತಿಸಿದ್ದರೂ ತನ್ನ ಕೊಲೆಗಾರನ ಪತ್ತೆಯಲ್ಲಿ ನೆರವು ನೀಡಿ, ಕೊನೆ ಸೇಡನ್ನು ತೀರಿಸಿಕೊಂಡಿತೆನ್ನುವುದು ಆಶ್ಚರ್ಯ ವಲ್ಲವೆ?

*

ಪೋಲೀಸ್ ಇನ್‌ಸ್ಪೆಕ್ಟರವರ ಈ ಕಥೆಯ ಕೇಳಿ ಪ್ರಿನ್ಸಿಪಾಲರು, "ವಿಶ್ವದಲ್ಲಿ ವಿಜ್ಞಾನಕ್ಕೆ ಎಟುಕದ ಅನೇಕಾನೇಕ ಅಂಶಗಳಿವೆ ಎನ್ನು ದಕ್ಕೆ ಇದೂ ಒಂದು ಉದಾಹರಣೆ," ಎಂ ಹೇಳುತ್ತಾ ಮೇಲಕ್ಕೆ ಎದ್ದರು.



## ವಿಜ್ಞಾನದ ಪ್ರಗತಿ

ಟೆಕ್ಸಾಸ್‌ನಲ್ಲಿರುವ "ಡಲಾಸ್" ವರ್ತಕ ಮಂಡಲಿಯಲ್ಲಿ, ವೆರೋ ಕಂಪನಿಯ ಉಪಾಧ್ಯಕ್ಷರಾದ ಜೆ. ರೆಗ್ಲಿಮರ ಎಂಬವರು ಮಾನವ ಹಲ್ಲಿನ ಪರಿಣಾಮದಷ್ಟು ರೇಡಿಯೋ ಸಂದೇಶ ವಾಹಕವನ್ನು ತಯಾರಿಸಿದ್ದಾರೆ. ಅದನ್ನು ಸುಲಭವಾಗಿ ಹಲ್ಲಿನ ಸ್ಥಳದಲ್ಲಿ ಕೂಡಿಸಬಹುದಾಗಿದೆ.

ಕೆಳದವಡೆಯಲ್ಲಿ ರೇಡಿಯೋ ಹಲ್ಲನ್ನು ಕೂಡಿಸಿದರೆ ಅದೇ ಹಲ್ಲಿನ ಮೇಲೆ, ಮೇಲ್ದವಡೆಯಲ್ಲಿಯ ಹಲ್ಲಿನ ಮೇಲೆ ಸೆಲ್ಲಿನಂತೆ ಕೆಲಸ ಮಾಡುವ ಧಾತುವೊಂದರ ಮೇಲು ಹೊದಿಕೆ ಕೂಡಿಸಲಾಗುತ್ತಿದೆ. ಎರಡೂ ಹಲ್ಲುಗಳು ಕೂಡಿದಾಗ ರೇಡಿಯೋ ಗುಪ್ತ ಸಂದೇಶಗಳನ್ನು ಕಳಿಸುತ್ತದೆ.

ಈ ರೇಡಿಯೋವನ್ನು ಸ್ಯಾನ್ ಆಂಟೋನಿಯಾದ ಬ್ರೂಕ್ ವೈಮಾನಿಕ ನಿಲ್ದಾಣದಲ್ಲಿಯ ವೈದ್ಯಕೀಯ ಶಾಲೆಯೊಂದರಲ್ಲಿ ಸಂಶೋಧನೆಗೆ ಬಳಸಲಾಗುತ್ತಿದೆ. ರೋಗಿಯೊರ್ವನು ರೋಗದ ಕಷ್ಟದಿಂದಾಗಿ ನಿದ್ರೆಯಲ್ಲಿ ಎಷ್ಟು ಸಲ ಬಾಯನ್ನು ಮುಚ್ಚುವದು, ತೆಗೆಯುವದು ಮಾಡುತ್ತಾನೆಂಬುದು ಇದರಿಂದ ತಿಳಿಯಬಹುದಾಗಿದೆ.

— ಅರವಿಂದ ಪರ್ವತೀಕರ

## ರಕ್ತದಿಂದ ಬರೆದ ಲೇಖಕ

ಯಾರಿಗೂ ವಿಶ್ವಾಸವೆನಿಸದಿದ್ದರೂ, ರಕ್ತದಿಂದಲೇ ಬರೆದ ·ಒಬ್ಬ- ಲೇಖಕ ಬಾದಶಹ ಜಪಾನಿನಲ್ಲಿ ಆಗಿಹೋದದ್ದು ಖಂಡಿತ. "ಸುಟೋಕ" (೧೧೨೪-೬೪) ಎಂಬ ಜಪಾನಿನ ಬಾದಶಹ, ಅಕ್ಷರಶಃ ಒಂದು ಗ್ರಂಥವನ್ನು ತನ್ನ ದೇಹದ ರಕ್ತದಿಂದಲೇ ಬರೆದ. "ಲಂಕೆಯ - ಮೇಲಿನ ಸೂತ್ರ" ಎಂಬ ಆ ಗ್ರಂಥ ಬೌದ್ಧ ಧರ್ಮಗ್ರಂಥವೊಂದರ ಅನುವಾದವಾಗಿತ್ತು. ಬಾದಶಹನು ಮೂರು ವರ್ಷಗಳವರೆಗೆ ತನ್ನ ದೇಹದಲ್ಲಿಯ ರಕ್ತದಿಂದಲೇ ಆ ಅಶ್ಚರ್ಯಕರ ಗ್ರಂಥವನ್ನು ಬರೆದು ಮುಗಿಸಿದ. ಆ ಗ್ರಂಥದಲ್ಲಿ ೧೩೫ ಪುಟಗಳಿದ್ದು, ಸುಮಾರು ೧೦,೫೦೦ ಶಬ್ದಗಳ ೧,೨೧೫ ಶ್ಲೋಕಗಳಿವೆ.

— ವಿ. ಜೆ. ಸ್ವಾಟ

# ಮೃತ್ಯುದ್ವೀಪ!

ಬಳ್ಕೂರು ಸುಬ್ರಾಯ ಅಡಿಗ

ಅಟ್ಲಾಂಟಿಕ್ ಮಹಾಸಾಗರದಲ್ಲಿ ೨೪ ಮೈಲು ಉದ್ದವೂ ಒಂದು ಮೈಲು ಅಗಲವೂ ಆದ ದ್ವೀಪವೊಂದಿದೆ. ಅದನ್ನು 'ಮೃತ್ಯುದ್ವೀಪ' ವೆಂದು ಕರೆಯಲಾಗುತ್ತದೆ. ಇದು ಕೇವಲ ಉಸುಬಿನ ದ್ವೀಪವಾಗಿದ್ದು, ದಿನದಿನಕ್ಕೆ ಸಮತಳವಾಗುತ್ತಿದೆ. ಮರುಭೂಮಿಯಲ್ಲಿ ಬಿರುಗಾಳಿಗಳಿಂದಾಗಿ ಉಸುಬಿನ ದಿಣ್ಣೆಗಳು ಸ್ಥಾನಾಂತರ ಹೊಂದುವಂತೆಯೇ ಈ ದ್ವೀಪದಲ್ಲೂ ಸಮುದ್ರದ ಅಲೆಗಳು ಉಸುಬನ್ನು ಸರಿಸುತ್ತಿರುತ್ತವೆ. ಹೀಗಾಗಿ ಒಮ್ಮೆ ಇದರ ಉದ್ದ ಹೆಚ್ಚಾದರೆ ಇನ್ನೊಮ್ಮೆ ಅಗಲ ಹೆಚ್ಚುತ್ತದೆ. ಬಿರುಗಾಳಿಯ ಸಮಯದಲ್ಲಂತೂ ಇಡೀ ದ್ವೀಪವೇ ಅಲೆಗಳ ನಡುವೆ ಮುಳುಗಿ ಹೋಗುವುದುಂಟು. ಪರಿಣಾಮವಾಗಿ ಎಷ್ಟೋ ಹಡಗಗಳು ತರಂಗಗಳ ನಡುವೆ ಅಡಗಿರುವ ಈ ದ್ವೀಪಕ್ಕೆ ಢಿಕ್ಕಿ ಹೊಡೆದು ಚೂರು ಚೂರಾಗುತ್ತವೆ.

ಇದುವರೆಗೆ ಸುಮಾರು ೫೦೦ ಹಡಗುಗಳು ಈ ದ್ವೀಪಕ್ಕೆ ಢಿಕ್ಕಿ ಹೊಡೆದಿವೆ; ಮತ್ತು ೧೦,೦೦೦ ಕ್ಕೂ ಹೆಚ್ಚಿನ ಜನರು ಈ ದುರ್ಘಟನೆಗಳಲ್ಲಿ ಅಸು ನೀಗಿದ್ದಾರೆ. ಆದ್ದರಿಂದಲೇ ಇದನ್ನು 'ಹಡಗುಗಳ ಮಸಣ' ಎಂದು ಕರೆಯಲಾಗುತ್ತಿದೆ. ನಾವಿಕರು, ಇಲ್ಲಿ ನಾಶಹೊಂದಿದ ಹಡಗುಗಳೇ ಭೂತಪ್ರೇತಗಳಾಗಿ ಈ ಸಮುದ್ರದಲ್ಲೆಲ್ಲ ಅಲೆದಾಡುತ್ತಿವೆಯೆಂದು ನಂಬುತ್ತಾರೆ.

'ಎಸ್. ಎಸ್. ಮೀಲರ್ಸ್' ಎಂಬ ಹಡಗು ಈ ದ್ವೀಪಕ್ಕೆ ಢಿಕ್ಕಿ ಹೊಡೆದಂದಿನಿಂದ ಇದಕ್ಕೆ ಹಡಗುಗಳ ಭೂತಗಳ ದ್ವೀಪ ಎಂಬ ಹೆಸರು ಬಂದಿದೆ. ೧೮೪೦ ರಲ್ಲಿ ಮೂರು ಕೂವೆಮರಗಳುಳ್ಳ ಆ ಹಡಗು ಬಿರುಗಾಳಿಗೆ ಸಿಕ್ಕಿ ದಾರಿ ತಪ್ಪಿ, ನೋವಾಸ್ಕಾಶಿಯಾಕ್ಕೆ ತಲುಪುವ ಬದಲು ೨೫೦ ಮೈಲು ದೂರದ ಈ ಉಸುಬಿನ ದ್ವೀಪದತ್ತ ಸಾಗಿತು. ಉಸುಬಿನ ದ್ವೀಪವು ಅಲೆಗ



ಳೊಳಗೆ ಅಡಗಿ ಹಡಗಿನ ಹಾದಿಯನ್ನೇ ಕಾಯುತ್ತಿತ್ತು.

ಹಡಗು ಅಲೆಗಳ ನಡುವೆ ಹೊಯ್ದಾಡುತ್ತ ಒಮ್ಮೆ ನಡುಗಿ ದ್ವೀಪಕ್ಕೆ ಢಿಕ್ಕಿ ಹೊಡೆಯಿತು; ಇಡೀ ಹಡಗೇ ಅಡಿಮೇಲಾಯಿತು. ಒಳಗಿನ ಯಾತ್ರಿಕರು ಒಳಗೇ ಮಡಿದರೋ, ಹೊರ ಬಂದು ಸತ್ತರೊ—ಅಂತೂ ಯಾರೊಬ್ಬರೂ ಉಳಿಯಲಿಲ್ಲ. ಆದರೆ ಇತರ ಹಡಗುಗಳಂತೆ ಇದು ಚೂರುಚೂರಾಗಿ ಹೋಗಲಿಲ್ಲ. ಮುಳುಗಲಿಲ್ಲ. ಉಸುಬು ಇದನ್ನು ಬುಡಮೇಲು ಮಾಡಿತ್ತಷ್ಟೇ.

ಕೆಲವೇ ಗಂಟೆಗಳಲ್ಲಿ ಅಲೆಗಳ ಹೊಡೆತಗಳಿಂದ ಹಡಗು ಪುನಃ ಸರಿಯಾಯಿತು. ಹಡಗಿನ ಒಳಗಿದ್ದ ಸಾಮಗ್ರಿಗಳೆಲ್ಲ ಕೊಚ್ಚಿ ಹೋಗಿ ಹಡಗು ತುಂಬ ಹಗುರಾಗಿತ್ತು; ಈಗ ಬಿರುಗಾಳಿಯೂ ತರಂಗಗಳೂ ಇದರ ಚಾಲಕರೆನಿಸಿದವು. ಎರಡು ತಿಂಗಳ ತನಕ ಇದು ಸಮುದ್ರದಲ್ಲಿ ಸ್ವಚ್ಛಂದವಾಗಿ ಅಲೆದಾಡುತ್ತಿತ್ತು.

ಈ ನಡುವೆ ಅನೇಕ ನಾವಿಕರೂ ಯಾತ್ರಿಕರೂ ಗೊತ್ತುಗುರಿಯಿಲ್ಲದೆ ಅಲೆದಾಡುವ ಈ ಹಡಗನ್ನು ನೋಡಿದ್ದರು. ಮುಳುಗಿ ಹೋಗಿದ್ದ ಎಸ್. ಎಸ್. ಮಿಲ್ಲರ್ ಹಡಗಿನ ಆತ್ಮವೇ ಹೀಗೆ ಅಲೆದಾಡುತ್ತಿದೆಯೆಂದೂ ಪ್ರೇತಗಳೇ ಅದರ ಚಾಲಕರೆಂದೂ ಅವರಿಗೆ ನಂಬುಗೆಯಾಯಿತು. ಏಕೆಂದರೆ ಉಸುಬಿನ ದ್ವೀಪಕ್ಕೆ ಅದು ಢಿಕ್ಕಿ ಹೊಡೆದ ವದಂತಿ ಅವರಿಗೆ ಈ ಮೊದಲೇ ತಲುಪಿಬಿಟ್ಟಿತ್ತು. ಈ ದಂತಕಥೆ ಮೆಲ್ಲಮೆಲ್ಲನೆ ಯುರೋಪು ಹಾಗೂ ಅಮೇರಿಕದಲ್ಲಿ ಹಬ್ಬಿ ಹೋಯಿತು.

ಎರಡು ತಿಂಗಳ ಬಳಿಕ ಹಡಗು ಮತ್ತೊಂದು ಬಿರುಗಾಳಿಗೆ ಸಿಲುಕಿತು. ಬಿರುಗಾಳಿಯ ಅಲೆಗಳು ಹಡಗನ್ನು ಕೆನಡಾ ಸಮುದ್ರದಿಂದ ಅಟ್ಲಾಂಟಿಕ್ ಸಾಗರದ ಮಧ್ಯಕ್ಕೆ ತಂದವು; ಅನೇಕ ತಿಂಗಳ ವರೆಗೆ ಇದು ಅಲ್ಲೇ ಅಲೆದಾಡುತ್ತ ಇತರ ಹಡಗುಗಳ ನಾವಿಕರಿಗೆ ಭಯ ಹುಟ್ಟಿಸುತ್ತ ಇತ್ತು. ೧೮೮೦ ರ ಕೊನೆಯಲ್ಲಿ ನೌಕಾಪಡೆಯು ಈ ಭೂತ ಹಡಗನ್ನು ಹಿಡಿದಾಗಲೇ ಈ ದಂತ ಕಥೆ ಮುಕ್ತಾಯಹೊಂದಿತು.

ಉಸುಬಿನ ದ್ವೀಪಕ್ಕೆ ಢಿಕ್ಕಿ ಹೊಡೆದು ಚೂರುಚೂರಾದ ಹಡಗುಗಳಲ್ಲಿ ಅತಿ ಮಹತ್ವವುಳ್ಳ ಹಡಗೆಂದರೆ 'ಇಂಡಿಪೆಂಡೆನ್ಸ್ ಹಾಲ್.' 'ಫಿಲಿಪಾಯಿನ್ಸ್'ಗೆ ಸೇರಿದ ಈ ಹಡಗು ೧೯೪೩ ರಲ್ಲೊಂದು ಸಂಜೆ ಬಿರುಗಾಳಿಗೆ ಸಿಲುಕಿ ಈ ದ್ವೀಪಕ್ಕೆ ಢಿಕ್ಕಿ ಹೊಡೆಯಿತು. ಇಷ್ಟರೊಳಗೆ ಈ ದ್ವೀಪದ ಪೂರ್ವ ಪಶ್ಚಿಮ ತುದಿಗಳಲ್ಲಿ ಒಂದೊಂದು ದ್ವೀಪಸ್ತಂಭ ಮಾಡಿಸಲಾಗಿತ್ತು. ಆ ವೇಳೆ ಪೂರ್ವದ ದ್ವೀಪಸ್ತಂಭದಲ್ಲಿದ್ದ ಫ್ರಾಂಕ್ ಟರ್ನರನು ಹಡಗು ಢಿಕ್ಕಿ ಹೊಡೆಯುತ್ತಿರುವುದನ್ನು ನೋಡಿದರೂ ಏನೂ ಮಾಡಲಾಗಲಿಲ್ಲ. ಎರಡೇ ಗಂಟೆಯೊಳಗೆ ಇಡೀ ಹಡಗು ಮುಳುಗಿಹೋಯಿತು. ಆ ಬಳಿಕ ಅಪಘಾತಕ್ಕೀಡಾದ ಹಡಗಿನ ಮೂವರು ಯಾತ್ರಿಕರ ಶವಗಳಷ್ಟೇ ಫ್ರಾಂಕ್ ಟರ್ನರನಿಗೆ ದೊರೆತವು.

ಹಲವಾರು ಶತಮಾನಗಳ ವರೆಗೆ ಈ ನಿರ್ಜನ ದ್ವೀಪವು ಹಡಗುಗಳ್ಳರ ನಿವಾಸಸ್ಥಾನವಾಗಿತ್ತು; ಭಯಂಕರ ಅಪರಾಧಿಗಳಿಗೂ ಕೇಂದ್ರವೆನಿಸಿತ್ತು. ಕೆನಡಾ ಸರಕಾರವು ಈ ಅಪರಾಧಗಳನ್ನು ಕೊನೆಗಾಣಿಸಬೇಕೆಂದು ಇಲ್ಲಿಯ ಉಸುಬಿನ ನೆಲವನ್ನು ನಿವಾಸಯೋಗ್ಯವಾಗುವಂತೆ ಮಾಡಿತು. ಎರಡೂ ದ್ವೀಪಸ್ತಂಭಗಳ ಕೆಲಸಗಾರರು ಸ್ಥಾಯಿಯಾಗಿ ಇಲ್ಲೇ ನೆಲಸುವಂತೆ ವ್ಯವಸ್ಥೆ ಮಾಡಿತು.

ಫ್ರಾಂಕ್ ಟರ್ನರನೊಂದಿಗೆ ೨೦ ಇತರ ಜನರೂ ಈ ದ್ವೀಪದಲ್ಲಿ ವಾಸಿಸುತ್ತಿದ್ದರು. ಈ ಮನುಷ್ಯರೊಂದಿಗೇ ೪೦ ಕೋಳಿಗಳೂ ೩ ಬೆಕ್ಕುಗಳೂ ಒಂದು ನಾಯಿ ಹಾಗೂ ೩೦೦ ಕುದುರೆಗಳೂ ಇದ್ದವು.

ನಾಯಿ ಬೆಕ್ಕು ಹಾಗೂ ಕೋಳಿಗಳನ್ನು ಈ ಜನರೇ ತಮ್ಮೊಟ್ಟಿಗೆ ಒಯ್ದಿದ್ದರು; ಆದರೆ ೩೦೦ ಕುದುರೆಗಳು ಮಾತ್ರ ಅಲ್ಲಿ ಮೊದಲೇ ಇದ್ದವು. ಈ ದ್ವೀಪದಲ್ಲಿ ವನಸ್ಪತಿಗಳೇಕೆ ಹುಲ್ಲು ಕೂಡ

ಸಿಗುವುದಿಲ್ಲವೆಂದ ಬಳಿಕ ಅವೆಂತು ಅಲ್ಲಿ ಬದುಕಿ ಉಳಿದವು? ಸಮುದ್ರ ತೀರದಲ್ಲಿ ಮಾತ್ರ 'ಸಮುದ್ರದ ಕಳೆ' (ಸೇವಾರ) ಬೆಳೆಯುತ್ತದೆ; ಕುದುರೆಗಳು ತಮ್ಮ ಹಸಿವೆ ಹಿಂಗಿಸಿಕೊಳ್ಳಲು ಇದನ್ನೇ ತಿನ್ನತೊಡಗಿದವು. ದಿನಕಳೆದಂತೆ ಇದೇ ಅಭ್ಯಾಸವಾಗಿರಬೇಕು. ಬಿರುಗಾಳಿಗಳ ವೇಳೆ ಇಡೀ ದ್ವೀಪವೇ ಮುಳುಗಿದಾಗ ಇವೆಂತು ಬದುಕಿ ಉಳಿದವು- ಎಂಬುದು ಮಾತ್ರ ಇಂದಿಗೂ ರಹಸ್ಯವಾಗಿಯೇ ಉಳಿದಿದೆ.

೧೯ನೇ ಶತಮಾನದಲ್ಲಿ ಒಂದು ಫ್ರೆಂಚ್ ಹಡಗುಪಡೆ ಅಮೇರಿಕದ ಕಡೆ ಹೋಗಿತ್ತು; ಅದರಲ್ಲಿ ಅಶ್ವದಳವೂ ಇತ್ತೆಂದು ಹೇಳಲಾಗುತ್ತದೆ. ಕುದುರೆಗಳಿದ್ದ ಆ ಹಡಗುಗಳು ಉಸುಕಿನ ದ್ವೀಪಕ್ಕೆ ಢಿಕ್ಕಿ ಹೊಡೆದು ಪುಡಿಪುಡಿಯಾಗಿರಬೇಕು; ಆಗ ಕುದುರೆಗಳೆಲ್ಲ ಈಸಾಡಿ ದ್ವೀಪಕ್ಕೆ ಬಂದು ಮುಟ್ಟಿರಬಹುದು. ಆ ವೇಳೆ ಅವುಗಳ ಸಂಖ್ಯೆ ಹೆಚ್ಚಿದ್ದರೂ ಆಹಾರಾಭಾವದಿಂದಲೂ ಆಗಾಗ್ಗೆ ಬಿರುಗಾಳಿಯ ವೇಳೆಗೆ ದ್ವೀಪವೇ ಮುಳುಗುವುದರಿಂದಲೂ ದಿನ ಕಳೆದಂತೆ ಅವು ಕಡಮೆಯಾಗುತ್ತ ಹೋಗಿರಬೇಕು. ೧೯೪೨ ರಲ್ಲಿ ಅಲ್ಲಿ ದೊರೆತ ೩೦೦ ಕುದುರೆಗಳು ಆ ಕುದುರೆಗಳ ವಂಶಜರಿರಬಹುದು.

ಕೆನಡಾದಿಂದ ಥಾಮಸ್ ಹೆಂಕಾಕ್ ಎಂಬವನು ಅಶ್ವಸೈನ್ಯದೊಡನೆ ಈ ದ್ವೀಪಕ್ಕೆ ಇಲ್ಲಿಯ ದರೋಡೆಗಾರರ ನಿರ್ಮೂಲನಕ್ಕಾಗಿ ಬಂದನೆಂದೂ ಜನರೆಲ್ಲ ಅದೆಂತೋ ತೀರಿ ಹೋಗಿ ಕುದುರೆಗಳು ಮಾತ್ರ ಉಳಿದುಕೊಂಡವೆಂದೂ ಕೆಲವರ ಊಹೆ. ಆದರೆ ಇದಕ್ಕೆ ನಿಶ್ಚಿತ ಆಧಾರವೇನೂ ದೊರೆತಿಲ್ಲ.

೨೦ ನೇ ಶತಮಾನದಲ್ಲಿ ಇಲ್ಲಿ ದೀಪಸ್ತಂಭಗಳನ್ನು ಸ್ಥಾಪಿಸಿದಂದಿನಿಂದ ಹಡಗುಗಳ ಅಪಘಾತಗಳು ಬಹು ಕಡಿಮೆಯಾಗಿವೆ; ಆದರೂ ಕೆಲವೊಮ್ಮೆ ದುರ್ಘಟನೆಗಳು ಸಂಭವಿಸಿದ್ದುಂಟು.

ಕಳೆದ ೫೦ ವರ್ಷಗಳಲ್ಲಿ ಈ ದ್ವೀಪಕ್ಕೆ ಢಿಕ್ಕಿ ಹೊಡೆದು ನಷ್ಟ ಹೊಂದಿದ ಕೆಲವು ಪ್ರಸಿದ್ಧ ಹಡಗುಗಳು ಇಂತಿವೆ..... 'ಇಂಡಿಪೆಂಡೆನ್ಸ್ ಹಾಲ್', 'ಎಸ್. ಎಸ್. ಲೆಂಬರ್ಗ್', 'ಲಾಬ್ರೆದೋರ್', 'ಸಿಲ್ವಿಯಾ ಮೋಶೇರ್', 'ಸದೀ ನಿಕೇಲ್,' 'ಫಾಲ್‌ಮಾವುಥ್', 'ಪುರಿಟನ್', 'ಎಸ್ಟ್ರೆಂಟೋ', 'ಮಾರ್ಶಲ್ ಫಾಕ್', 'ಸೆಬಿಲ್ ಬೆಲ್ಗೇ', 'ಸ್ಟೇಟ್ ಆಫ್ ವರ್ಜೀನಿಯಾ', 'ಟ್ರಾಲರ್ ಗೇಲೇ', 'ಪ್ರಿನ್ಸೆಸ್ ಎಮೇಲಿಯಾ' ಇತ್ಯಾದಿ.

೧೮೫೮ ರಲ್ಲಿ ಈ ದ್ವೀಪದಲ್ಲಿ ಫ್ರೆಂಚ್ ಅಪರಾಧಿಗಳನ್ನಿರಿಸಬೇಕೆಂದು ನಿರ್ಧರಿಸಲಾಯಿತು. ಅಪರಾಧಿಗಳ ಮೊದಲ ತಂಡದಲ್ಲಿ ೪೮ ಜನರಿದ್ದರು. ಅವರೊಟ್ಟಿಗೆ ೫೦ ಕುರಿಗಳೂ ಇದ್ದವು. ಕೆಲ ಸಮಯದ ಬಳಿಕ ಇನ್ನೊಂದು ಫ್ರೆಂಚ್ ಹಡಗು ಇಲ್ಲಿಗೆ ಬಂದಾಗ ಆ ೪೮ ಜನರಲ್ಲಿ ೧೧ ಜನ ಮಾತ್ರ ಬದುಕಿ ಉಳಿದಿದ್ದರು. ಉಳಿದವರೆಲ್ಲ ಬಿರುಗಾಳಿಗೆ ಸಿಲುಕಿ ಕೊಚ್ಚಿಹೋಗಿದ್ದರು. ಆ ೧೧ ಜನರೂ ಅರೆಸತ್ತಂತಿದ್ದರು; ಅವರನ್ನು ಮರಳಿ ಫ್ರಾನ್ಸಿಗೆ ಕರೆದೊಯ್ಯಲಾಯಿತು.

ಈ ದ್ವೀಪದ ನಡುವೆ ಉಪ್ಪಿನ ಅಖಾತ (bay)ವೊಂದಿದೆ. ಇದು ಸಮುದ್ರದ ಅಗಲಕ್ಕೂ ಹಬ್ಬಿಕೊಂಡಿದೆ. ಉಸುಬಿನ ಸಣ್ಣ ಗೋಡೆಯೊಂದು ಇದನ್ನು ಸಮುದ್ರದಿಂದ ಬೇರ್ಪಡಿಸುತ್ತಿದೆ. 'ಪ್ರಿನ್ಸೆಸ್ ಎಮೇಲಿಯಾ' ಹಡಗು ಈ ದ್ವೀಪಕ್ಕೆ ಢಿಕ್ಕಿ ಹೊಡೆದಾಗ ಉಸುಕಿನ ಗೋಡೆಯನ್ನು ಕಡಿದು ಅಖಾತದೊಳಗೆ ನುಗ್ಗಿತ್ತು. ಆದರೆ ಬಿರುಗಾಳಿಗಳಿಂದ ಮರಳಿ ಆ ಗೋಡೆ ನಿರ್ಮಿಸಲ್ಪಟ್ಟಿತು. ಈ ಗೋಡೆ ಎಷ್ಟೋ ಬಾರಿ ಹಡಗುಗಳಿಗೆ ತಗಲಿ ಮುರಿದು ಹೋಗಿದ್ದರೂ ಅಲೆಗಳು ಮರಳಿ ಮರಳಿ ಅದನ್ನು ನಿರ್ಮಿಸುತ್ತಲೇ ಇವೆ.

ಈಗ ಈ ದ್ವೀಪದ ಉದ್ದವೂ ಹೆಚ್ಚುತ್ತಿದೆ. ಪೂರ್ವದ ಕಡೆ ಇದರ ಉದ್ದ ಪ್ರತಿವರ್ಷವೂ ಒಂದು ಫರ್ಲಾಂಗಿನಷ್ಟು ಹೆಚ್ಚುತ್ತಿದೆಯೆಂದು ಊಹಿಸಲಾಗಿದೆ.

ಅಟ್ಲಾಂಟಿಕದ ಕೆಳಗಡೆ ಅಮೇರಿಕೆಗೆ ಸಮಾನಾಂತರವಾಗಿ ನ್ಯೂಫೌಂಡ್‌ಲ್ಯಾಂಡಿನಿಂದ

ಕೇಪ್‌ಕೋಡಿನ ತನಕ ಇರುವ ಪರ್ವತಶ್ರೇಣಿಯ ಬಂಡೆಗಳೇ ಚೂರುಚೂರಾಗಿ ಇಲ್ಲಿ ಉಸುಬಿನ ರೂಪದಲ್ಲಿ ಒಟ್ಟಾಗಿರಬೇಕೆಂದೂ ಅದರ ದಿಣ್ಣೆಯೇ ಎತ್ತರವಾಗಿ ದ್ವೀಪದ ಸ್ವರೂಪ ತಳೆದಿರಬೇಕೆಂದೂ ಭೂಗರ್ಭ ಶಾಸ್ತ್ರಜ್ಞರ ಊಹೆ.

ಭೂಗರ್ಭ ಶಾಸ್ತ್ರಜ್ಞರ ಹಾಗೂ ಇತಿಹಾಸ ಸಂಶೋಧಕರ ಪಾಲಿಗೆ ಈ ದ್ವೀಪವು ಪ್ರಾಕೃತಿಕ ಸಂಗ್ರಹಾಲಯವಾಗಿದೆ. ಇಲ್ಲಿಯ ಉಸುಬಿನಲ್ಲಿ ೧೬ ರಿಂದ ೨೦ನೇ ಶತಮಾನದ ವರೆಗಿನ ಆಯುಧ, ಪಾತ್ರೆ, ನಾಣ್ಯ, ಹಡಗಿನ ಸಾಮಗ್ರಿ, ವಸ್ತ್ರ, ಆಭರಣ ಚಪ್ಪಲಿ, ಹ್ಯಾಟು ಮೊದಲಾದ ಅಸಂಖ್ಯ ವಸ್ತುಗಳು ದೊರೆತಿವೆ. ಅವೆಲ್ಲವೂ ಆಯಾ ಕಾಲಗಳ ಮನೋರಂಜಕ ಕಥೆಗಳನ್ನು ತಿಳಿಸುತ್ತವೆ. ಇತ್ತೀಚೆಗೆ ಇಲ್ಲಿ ಉಸುಬಿನ ಪದರುಗಳ ನಡುವೆ ೧೯ ನೇ ಶತಮಾನದ ೫,೦೦೦ ಪೌಂಡು ಬೆಲೆ ಬಾಳುವ ನಾಣ್ಯಗಳು ದೊರೆತಿವೆ. ಹಡಗುಗಳು ನಿರಂತರ ಢಿಕ್ಕಿ ಹೊಡೆಯುತ್ತಿದ್ದುದರಿಂದ ಈ ದ್ವೀಪವು ನಿಜಕ್ಕೂ ಸಂಸ್ಕೃತಿಗಳ ಸಂಗ್ರಹಾಲಯವೆನಿಸಿದೆ.

ಈ ದ್ವೀಪದಲ್ಲೀಗ ಕೆನಡಾ ಸರಕಾರದ ಕೆಲಸಗಾರರು ವಾಸಿಸುತ್ತಿದ್ದಾರೆ. ಕೆಲವು ಗಟ್ಟಿಮುಟ್ಟಾದ ಮನೆಗಳೂ ತಗಡಿನ ಗುಡಿಸಲುಗಳೂ ಹಡುಗುಗಳಿಗಾಗಿ ರಿಲೀಫ್ ಕ್ಯಾಂಪುಗಳೂ ಇವೆ. ಇವಲ್ಲದೆ ಪ್ರಾಣರಕ್ಷಕ ನೌಕಾಪಡೆ, ವಿದ್ಯುತ್ತಿನ ಜನರೇಟರ್, ರೇಡಿಯೋ ಮತ್ತು ವಾಯರ್‌ಲೆಸ್ ಕೂಡ ಇದೆ. ಇಲ್ಲಿಯ ನೆಲವನ್ನು ಫಲವತ್ತಾಗಿ ಮಾಡಬೇಕೆಂಬ ಪ್ರಯತ್ನವೂ ನಡೆದಿದೆ. ಆಗ ಬಗೆಬಗೆಯ ತರಕಾರಿಗಳನ್ನೂ ಮರಗಿಡಗಳನ್ನೂ ಬೆಳೆಸಲು ಅನುಕೂಲವಾಗುವುದು.

ಇದು ವರೆಗೆ ಹಡಗುಗಳ ಭಕ್ಷಕವೆನಿಸಿದ್ದ ಈ ದ್ವೀಪವು ಇನ್ನು ಮುಂದೆ ರಕ್ಷಕವೆನಿಸುವುದೆಂದು ನಾವು ನಂಬಬಹುದು. *

" ಮುಕ್ತಾ " ದಿಂದ.



## ಉಕ್ಕಿನ ಮನುಷ್ಯ

ದಿ. ಸರದಾರ ವಲ್ಲಭಭಾಯಿ ಪಟೇಲರು ಚಿಕ್ಕವರಿದ್ದಾಗ ನಡೆದ ಘಟನೆಯಿದು. ಒಮ್ಮೆ ಅವರ ತೋಳಿನ ಮೇಲೆ ಹುಣ್ಣಾಯಿತು. ಆ ಹುಣ್ಣು ಹಣ್ಣಾಯಿತು. ಹಾಗೂ ವಿಷಯುಕ್ತ(ಸೆಪ್ಟಿಕ್)ವಾಯಿತು.

ಕಾದ ಸಲಾಕೆಯಿಂದ ಇದನ್ನು ಸುಟ್ಟುಬಿಡಬೇಕೆಂದು ವೈದ್ಯರು ಸಲಹೆ ಕೊಟ್ಟರು. ಹುಡುಗನ ಸಣ್ಣ ವಯಸ್ಸನ್ನು ನೋಡಿ ಎಲ್ಲರ ಮನಸ್ಸೂ ಕರಗಿಬಿಡುತ್ತಿತ್ತು. ಅವನ ತೋಳಿನ ಮೇಲೆ ಕಾದ ಸಲಾಕೆಯನ್ನಿಡಲು ಯಾರೂ ಒಪ್ಪಲಿಲ್ಲ. ಕೊನೆಗೆ ಕಠೋರ ಹೃದಯದ ಮನುಷ್ಯನೊಬ್ಬನನ್ನು ಕರೆಯಿಸಲಾಯಿತು.

ಕಾದಂಥ ಆ ಸಲಾಕೆಯಿಂದ ತನ್ನ ಹುಣ್ಣನ್ನು ಸುಡಲು ವಲ್ಲಭಭಾಯಿ ಹೇಳಿದರು. ಆದರೆ ಅವನ ಮನವೂ ಹಿಂಜರಿಯತೊಡಗಿತು. ಆಗ ಪಟೇಲರು, "ನೋಡುತ್ತೀರೇನು? ನಿಮ್ಮಿಂದ ಆಗದೇ ಇದ್ದರೆ, ಅದನ್ನು ನನಗೆ ಕೊಡಿರಿ."

ಎಲ್ಲರೂ ನೋಡುತ್ತಿದ್ದಂತೆಯೇ ಬಾಲಕನು ತನ್ನ ಕೈಯಲ್ಲಿ ಸಲಾಕೆ ತೆಗೆದುಕೊಂಡು ಅದರಿಂದ ಹುಣ್ಣನ್ನು ಸುಟ್ಟುಕೊಂಡನು.

ಸಂಗ್ರಹ:— ಗಂಗಾಧರ ಚಂ. ದಲಭಂಜನ

ಹಿಂದೆ ಮುಖಮಾಡಿ ಕುಳಿತುಕೊಂಡಿದ್ದರು. ನಾನು ಹೆಚ್ಚು ಕಡಿಮೆ ನಿರ್ಭೀತನಾಗಿ ಸೃಷ್ಟಿ ಸೌಂದರ್ಯ ಪಾನವನ್ನು ಮಾಡುತ್ತಲಿದ್ದೆ.

ನಿಜವಾಗಿ ಇಂಥ ದಟ್ಟಡವಿಯನ್ನು ನಾನು ಈ ಮೊದಲೆಂದೂ ನೋಡಿರಲಿಲ್ಲ. ತುಸು ದೂರ ಹೋಗಿದ್ದಾಗ ಕರಡಿಯೊಂದು ಗಿಡಗಳ ಮರೆಯಿಂದ ಹೊರಬಂದು ಜೀಪನ್ನು ಬೆನ್ನಟ್ಟಿತು. ಆದರೆ ಜೀಪಿನ ಜೊತೆ ಓಡಲಾರದೆ ದಣಿದು ಅಡವಿಯಲ್ಲಿ ಮಾಯವಾಯಿತು.

ಮುಂದೆ ಎರಡು ಹಾದಿಗಳು ಒಡೆದವು. ನಾವು ಎಡರಸ್ತೆಗೆ ತಿರುಗಿದೆವೊ ಇಲ್ಲವೊ ಅಷ್ಟರಲ್ಲಿ ಕಾಡು ಕೋಳಿಯ "ಕ್ವಾಂಕ್, ಕ್ವಾಂಕ್" "ಚ್ಯಾಂ, ಚ್ಯಾಂ" ಎಂಬ ಕರ್ಕಶ ಕೂಗು ಕೇಳಿಸಿತು. ಬಲಬದಿಯ ರಸ್ತೆಯ ದಿಕ್ಕಿನಿಂದ ಕೂಗು ಬಂದಿತ್ತು. ವಿಶಾಲಕಾಯದ ಹೆಬ್ಬಾವೊಂದು ಕೋಳಿಯನ್ನು ಬಾಯಲ್ಲಿ ಹಿಡಿದುಕೊಂಡು ಗಿಡದ ಟೊಂಗೆಗೆ ತೂಗಾಡುತ್ತಿತ್ತು. ಎಂಥ ಭಯಾನಕ ದೃಶ್ಯ! ಗಿಡದ ದಪ್ಪನ್ನ ಟೊಂಗೆಗೆ ಸುತ್ತುಹಾಕಿಕೊಂಡು ತೂಗಾಡುತ್ತಿದ್ದ ಹೆಬ್ಬಾವು ನಿಮಿಷಾರ್ಧದಲ್ಲಿ ಕೋಳಿಯನ್ನು ನುಂಗಿ ಬಿಟ್ಟಿತು. ಇಲ್ಲಿಯ ಅಡವಿಗಳಲ್ಲಿ ಹೆಬ್ಬಾವುಗಳು ಹೇರಳವಾಗಿವೆ. ಇವು ನೆಲದ ಮೇಲೆ ಇರುವುದು ಕಡಿಮೆ. ಯಾಕೆಂದರೆ ಓಡಿ ಬೇಟೆಯಾಡುವುದು ಇವಕ್ಕೆ ಸಾಧ್ಯವಾಗುವುದಿಲ್ಲ. ಆದ್ದರಿಂದ ಇವು ಗಿಡದ ಮೇಲೆಯೆ ಠಾಣ್ಯ ಹೂಡಿರುತ್ತವೆ. ಗಿಡದ ಕೆಳಗೆ ಹೋಗುವ ಪ್ರಾಣಿ, ಮನುಷ್ಯರನ್ನು ಇವು ಬಹು ಸುಲಭದಲ್ಲಿ ಬೇಟೆಯಾಡಬಲ್ಲವು. ಹೆಬ್ಬಾವಿನ ಸುತ್ತು ಬಿತ್ತೆಂದರೆ ಹುಲಿ ಕೂಡ ತಪ್ಪಿಸಿಕೊಳ್ಳಲಾರದು. ನಾವು ಈ ಹೆಬ್ಬಾವನ್ನು ಹೊಡೆಯುವ ಗೋಜಿಗೆ ಹೋಗಲಿಲ್ಲ. ಏಕೆಂದರೆ ನಾವು ಆದಷ್ಟು ಬೇಗ ನಮಗಾಗಿ ಸಿದ್ಧವಾಗಿದ್ದ ಅಟ್ಟದ ಸ್ಥಳಕ್ಕೆ ಹೋಗಬೇಕಾಗಿತ್ತು. ಮತ್ತೆ ಹಾಗೆಯೆ ಅಡ್ಡಾಡಿ ಮೋಜು ನೋಡಲು ಬಂದಿದ್ದೆವೇ ಹೊರತು ಮೃಗ ಬೇಟೆಗಲ್ಲ.

ಹತ್ತು ಹದಿನೈದು ನಿಮಿಷಗಳ ಹಾದಿ ಕ್ರಮಿಸಿದ ಬಳಿಕ ಅಟ್ಟ ಬಂತು. ಟೊಂಗೆಗಳ ಮೇಲೆ ಮಂಚವನ್ನೆ ಇಟ್ಟಿರುವಂತೆ ಕಾಣಿಸುತ್ತಿತ್ತು. ೪-೫ ಜನ ಅದರ ಮೇಲೆ ಸುಖವಾಗಿ ಕುಳಿತುಕೊಳ್ಳಬಹುದಿತ್ತು. ಅಟ್ಟದ ನಾಲ್ಕೂ ಕಡೆಗೆ ಒಳಗಿದ್ದವರು ಹೊರಗಿನವರಿಗೆ ಕಾಣಿಸಬಾರದೆಂದು ಕಟ್ಟಿದ್ದ ಎಲೆಗಳ ಮಾಲೆ ಬಹು ಸುಂದರವಾಗಿತ್ತು. ಸುರಕ್ಷಿತತೆಯ ಈ ಏರ್ಪಾಡನ್ನು ಕಂಡು ನಾನು ಸಮಾಧಾನದ ಉಸಿರು ಬಿಟ್ಟೆ. ಅಟ್ಟ ಕಟ್ಟಿದ ಗಿಡದ ಅಡಿಯಲ್ಲಿ ಗಿಡಗಂಟಿಗಳನ್ನು ಸವರಿ ಜೀಪನ್ನಿಡಲು ಗ್ಯಾರೇಜನ್ನು ತಯಾರಿಸಿದ್ದರು. ಜೀಪನ್ನು ಅಲ್ಲಿಟ್ಟು ಎಲೆ ಟೊಂಗೆಗಳಿಂದ ಕಾಣದಂತೆ ಮುಚ್ಚಿ ನಾವೆಲ್ಲ ಅಟ್ಟವನ್ನೇರಿ ಕುಳಿತೆವು.

ಬರುವಾಗ ಸಂಗಡ ತಂದಿದ್ದ ಎಂಟು ಹತ್ತು ದೊಡ್ಡ ದೊಡ್ಡ ಪ್ಲಾಸ್ಟಿಕ್ ಚಂಡುಗಳಲ್ಲಿ ಎರಡನ್ನು ಶಿವಶಂಕರರು ಕೆಳಗೆ ಚೆಲ್ಲಿ "ನೋಡುವಿರಂತೆ ಈಗ, ಈ ಚಂಡುಗಳ ಚಮತ್ಕಾರವನ್ನು" ಎಂದರು. ನಿಜವಾಗಿಯೂ ಮುಂದೆ ನಡೆದ ಮೋಜು ವರ್ಣನಾತೀತವೇ ಆಗಿತ್ತು.

ಚಂಡುಗಳು ನೆಲವನ್ನು ಮುಟ್ಟುವಷ್ಟರಲ್ಲಿ ಎಲ್ಲಿಂದಲೊ ಎರಡು ಇಣಚಿಗಳೂ ಹಾಲು ಬಣ್ಣದ ಎರಡು ಮೊಲಗಳೂ ಜಿಗಿದು ಬಂದವು. ಅಂಜಂಜುತ್ತಲೇ ಅವು ಚಂಡುಗಳ ಬಳಿ ಬಂದು ಅವನ್ನು ಮೂಸಿ ನೋಡತೊಡಗಿದವು. ಮೂಸಿ ನೋಡುತ್ತಲೇ ಅವು ಆಗಾಗ ಕತ್ತು ಹೊರಳಿಸಿ ಅತ್ತಿತ್ತ ಯಾರಾದರೂ ಬರುತ್ತಿದ್ದಾರೆಯೆ ಎಂದು ನೋಡುತ್ತಲೇ ಇದ್ದವು. ಈ ಬಣ್ಣ ಬಣ್ಣದ ಆದರೆ ವಿಚಿತ್ರವಾದ ಪ್ರಾಣಿಗಳು ಎಲ್ಲಿಂದ ಇಲ್ಲಿ ಬಂದವು ಎಂದು ಅವುಗಳ ಕಣ್ಣುಗಳು ಪ್ರಶ್ನೆ ಕೇಳುತ್ತಲಿದ್ದವು. ಮೂಸಿ ನೋಡಿಯಾದ ಬಳಿಕ ಮೊಲಗಳು ಕಾಲಿನಿಂದ ಚಂಡುಗಳನ್ನು ಒದೆಯತೊಡಗಿದಾಗ ರಸ್ತೆಯ ಇನ್ನೊಂದು ಮಗ್ಗಲಿಂದ ಬಂದ ನರಿ ಅವುಗಳ ಮೇಲೆ ಜಿಗಿಯಿತು. ಆದರೆ ಬಣ್ಣದ ಚಂಡುಗಳನ್ನು ಕಂಡು ಅದು ಸಂದೇಹಪಡುವಂತಾಯಿತು. ಅದಕ್ಕೆ ಈ ಯಕ್ಷಪ್ರಶ್ನೆ ಎದು



ಕಾನನದ ರೋಮಾಂಚಕಾರಿ ಸತ್ಯಕಥೆ

# ಹೆಬ್ಬಾವಿನ ಬಾಯಿಂದ ಪಾರಾದೆವು

ಗೋಪಾಲಸಿಂಹ ನೇಪಾಳಿ

ಅಸಾಮಿನ ಸೃಷ್ಟಿಸೌಂದರ್ಯ ನಿರೀಕ್ಷಣೆಗಾಗಿ ಹೋಗಿದ್ದ ನಮ್ಮ ಮಿತ್ರಮಂಡಳಿಯಲ್ಲಿ ಒಬ್ಬ ಶಿಕಾರಿಗಳೂ ಇದ್ದರು. "ಬಂದದ್ದು ಬಂದಿದ್ದೇವೆ, ಇಲ್ಲಿಯ ಕಾಡುಮೃಗಗಳನ್ನಷ್ಟು ನೋಡಿಕೊಂಡು ಹೋಗೋಣ" ಎಂದರವರು. ಈ ವಿಚಾರದಲ್ಲಿ ಒಂದಿಷ್ಟು ವಾದವಿವಾದ ನಡೆದ ನಂತರ ಯಾವುದೊಂದು ಪ್ರಾಣಿ ನಮ್ಮ ಮೇಲೆ ಆಕ್ರಮಣ ಮಾಡುವ ಮೊದಲೇ ಅದನ್ನು ಗುಂಡಿನಿಂದ ಹೊಡೆಯಬಾರದು ಎಂಬ ಕರಾರು ಹಾಕಿ ನಾನು ಒಪ್ಪಿಕೊಂಡೆ.

ಮಾರನೆಯ ದಿನ ಮುಂಜಾನೆ ತಿಂಡಿತೀರ್ಥ ಮುಗಿಸಿಕೊಂಡು ಒಂದು ಜೀಪಿನಲ್ಲಿ ನಮ್ಮ ಪರಿವಾರ ಮೃಗದರ್ಶನಕ್ಕಾಗಿ ಹೊರಟಿತು. ಮುಂದಿನ ಸೀಟಿನಲ್ಲಿ ನುರಿತ ಶಿಕಾರಿಗಳಾದ ಮಾನಬಹಾದ್ದೂರಸಿಂಹ ಮತ್ತು ಜ್ಞಾನಬಹಾದ್ದೂರಸಿಂಹ ಎಂಬಿಬ್ಬರು ನೇಪಾಳಿ ಬಂಧುಗಳು ಕುಳಿತಿದ್ದರು. ಅವರ ನಡುವೆ ಇದೀಗ ಸೆರೆಹಿಡಿದ ಸೆರೆಯಾಳಿನಂತೆ ನಾನು ಕುಳಿತಿದ್ದೆ. ಹಿಂದಿನ ಸೀಟಿನಲ್ಲಿ ಉತ್ತರ ಪ್ರದೇಶದ ಜ್ಞಾನಪುರದ ಶಿವಶಂಕರ ಸಿಂಹರು ಮತ್ತು ಆಸಾಮಿನ ಅಗ್ನು ರಾಯ್ ಕುಳಿತಿದ್ದರು. ಹೆಸರಿನ ಮೇಲಿಂದ ಹೇಳುವುದಾದರೆ ನಮ್ಮ ಮಂಡಳಿಯಲ್ಲಿ ನಾಲ್ಕು ಸಿಂಹಗಳು (ನನ್ನನ್ನು ಹಿಡಿದು) ಇದ್ದವು. ಐದನೆಯ ಅಗ್ನು ಕರಡಿಯಂತೆ ಸ್ಥೂಲವಾಗಿದ್ದರು.

ಒಂದಕ್ಕಿಂತ ಒಂದು ಎತ್ತರವಾದ ಗುಡ್ಡಗಳು, ಕಿರಿದಾದ ರಸ್ತೆ, ನಾಲ್ಕೂ ದಿಕ್ಕಿನಲ್ಲಿ ದಟ್ಟಡವಿ. ನನಗೆ ಅಂಜಿಕೆಯಾಗುತ್ತಿತ್ತಾದರೂ ನಮ್ಮ ಜೀಪಿನಲ್ಲಿ ಮುಂದೆಯೂ ಹಿಂದೆಯೂ ಬಂದೂಕುಗಳು ಸಜ್ಜಾಗಿದ್ದುದರಿಂದ ಅಷ್ಟು ಗಾಬರಿಯಿರಲಿಲ್ಲ. ಶಿವಶಂಕರಸಿಂಹ ಮತ್ತು ಅಗ್ನುರಾಯ್

'ಧರ್ಮಯುಗ' ದಿಂದ

## 'ಶಬ್ದಭಾಂಡಾರ' ದ ಸರಿಯಾದ ಅರ್ಥಗಳು

೧. ಅಗಮ್ಯ (ಈ) ಹೋಗಬಾರದ, ಸಮೀಪಿಸಲಾಗದ, ಆದ್ದರಿಂದ ತಿಳಿಯಲಾರದ, ಗಹನವಾದ. ಉದಾ.— ಅವನ ಅಭಿಪ್ರಾಯ ಅಗಮ್ಯವಾಗಿದೆ. [ ಸಂ. ಅ=ಇಲ್ಲ, ಗಮ್ಯ = ಹೋಗತಕ್ಕದ್ದು ]

೨. ಅಂತರ್ಗತ (ಆ) ನಡುವೆ ಸೇರಿದ; ಒಳಗಿರುವ, ಒಳಗೆ ಸೇರಿದ; ಆದ್ದರಿಂದ, ಹುದುಗಿದ, ಗುಪ್ತವಾದ, ಕಣ್ಮರೆಯಾದ; ಮರೆತ[ಸಂ. ಅಂತರ್=ಒಳಗೆ, ನಡುವೆ, ಗತ = ಹೋದ ]

೩. ಉತ್ತರವಾದಿ (ಅ) ಪ್ರತಿವಾದಿ ಪ್ರಶ್ನೆ ಅಥವಾ ಆಕ್ಷೇಪಕ್ಕೆ ಉತ್ತರ ಕೊಡಬೇಕಾದವನು ; ಜವಾಬ್ದಾರ, ಹೊಣೆಗಾರ. ಉದಾ.— ಈ ಹಾನಿಯು ಉತ್ತರವಾದಿತ್ವ ನಿನ್ನ ಮೇಲಿದೆ. [ ಸಂ. ಉತ್ತರ+ ವಾದಿ = ಹೇಳುವವ]

೪. ಉದಗ್ರ (ಇ) ಮೇಲ್ಮುಖವಾದ; ಆದ್ದರಿಂದ, ಎತ್ತರವಾದ, ಮುಂದುವರಿದ, ಬೆಳೆದ, ಭೀಕರವಾದ, ಉತ್ತೇಜನಗೊಂಡ. ಉದಾ.— ಅವನ ಉದಗ್ರ ಪರಾಕ್ರಮ. [ಸಂ. ಉತ್ = ಮೇಲೆ, ಅಗ್ರ = ತುದಿ]

೫. ಎಟ್ಟೆ (ಅ) ಹಟಮಾರಿ, ಯಾರ ಮಾತನ್ನೂ ಕೇಳದವ, ತನ್ನಿಚ್ಛೆಯಂತೆಯೆ ನಡೆಯುವ. [ಕನ್ನಡ]

೬. ಹಸ್ತಾಂತರ (ಆ) ಕೈ ಬದಲಿಸುವಿಕೆ, ಒಬ್ಬರ ವಶದಿಂದ ಇನ್ನೊಬ್ಬರ ವಶಕ್ಕೆ ಹೋಗುವುದು, ಉದಾ.— ಅಧಿಕಾರ ಹಸ್ತಾಂತರ, ಆಸ್ತಿ ಹಸ್ತಾಂತರ [ಸಂ. ಹಸ್ತ = ಕೈ, ಅಂತರ = ಬದಲಾವಣೆ]

೭. ನಿರಸ್ತ (ಇ) ಹೊರದೂಡಲ್ಪಟ್ಟ, ದೂರ ಮಾಡಲ್ಪಟ್ಟ; ನಿರಾಕರಿಸಲ್ಪಟ್ಟ. ಉದಾ.— ಅವನ ಮನಸ್ಸಿನಿಂದ ಪ್ರೀತಿ ನಿರಸ್ತವಾಯಿತು. [ಸಂ. ನಿರಸ = ಹೊರದೂಡು, ಎಂಬುದರಿಂದ]

೮. ಸ್ನಾತಕ (ಅ) ವಿದ್ಯಾಭ್ಯಾಸ ಮುಗಿಸಿ ಗುರುಕುಲದಿಂದ ಹೊರಡುತ್ತಿರುವ ಬ್ರಹ್ಮಚಾರಿ: ಧರ್ಮಾಧ್ಯಯನ ಮುಗಿಸಿದವ. [ಸಂ. ಸ್ನಾ=ಸ್ನಾನಮಾಡು, ವಿಧಿಪೂರ್ವಕ ಮೀಯು]

೯. ಪುಣ್ಯಶ್ಲೋಕ (ಇ) ಕೀರ್ತಿವಂತ, ಒಳ್ಳೆಯ ಹೆಸರಾಂತ; ಯಾರ ಹೆಸರು ಹೇಳಿದರೆ ಪುಣ್ಯ ಬರುತ್ತದೋ ಅಂಥವ. [ಸಂ.]

೧೦. ಸ್ಖಾಲಿತ್ಯ (ಆ) ತಪ್ಪುತಡೆ, ಎಡಹುವಿಕೆ, ಜಾರುವುದು, ಮುಗ್ಗರಿಸುವಿಕೆ, ಬೀಳುವಿಕೆ. ಉದಾ.— ಪುಸ್ತಕದಲ್ಲಿ ಅನೇಕ ಸ್ಖಾಲಿತ್ಯಗಳಿವೆ, ಅವನು ಧರ್ಮ ಸ್ಖಾಲಿತ್ಯ ಹೊಂದಿದ್ದಾನೆ [ಸಂ. ಸ್ಖಲಿತ, ಜಾರುವಿಕೆ]

೧೧. ವೈತನಿಕ (ಈ) ಸಂಬಳದವ, ಸಂಬಳ ಪಡೆಯುವ ನೌಕರ, ಸಂಬಳದಿಂದ ಬದುಕುವವ, ಕೂಲಿಯಾಳು. [ ಸಂ. ವೇತನ = ಸಂಬಳ ]

೧೨. ದ್ವಿಕಳತ್ರ (ಈ) ಎರಡು ಹೆಂಡರುಳ್ಳವ. ದ್ವಿಕಳತ್ರಯೋಗ ಅಂದರೆ ಎರಡು ಹೆಂಡಂದಿರನ್ನು ಹೊಂದುವ ಯೋಗ. [ಸಂ. ದ್ವಿ = ಎರಡು, ಕಳತ್ರ = ಹೆಂಡತಿ]

---

### ನಿಮ್ಮ ಶಬ್ದಶಕ್ತಿಯ ತರಗತಿ

ನೀವು ಎಷ್ಟು ಶಬ್ದಗಳಿಗೆ ಅರ್ಥ ಆರಿಸಿದುದು ಸರಿಯಾಗಿದೆಯೆಂದು ಎಣಿಸಿ ಕೆಳಗಿನಂತೆ ನಿಮ್ಮ ಶಬ್ದ ಶಕ್ತಿಯ ತರಗತಿಗಳನ್ನು ತಿಳಿಯಿರಿ.

| | | |
|---|---|---|
| ೬—೮ ಸರಿಯಿದ್ದರೆ | | ... ಸಾಧಾರಣ |
| ೯—೧೦ | " | ... ಉತ್ತಮ |
| ೧೧—೧೨ | " | ... ಅತ್ಯುತ್ತಮ |

# ನಿಮ್ಮ ಶಬ್ದ ಭಾಂಡಾರ ಬೆಳೆಯಲಿ

## ಶಬ್ದ ಭಾಂಡಾರವು ಹಣದ ಭಾಂಡಾರಕ್ಕಿಂತಲೂ ಅಮೂಲ್ಯವಾಗಿದೆ

ಇಲ್ಲಿ ಪ್ರತಿ ೩ಂಗಳು ಕೆಲವು ಶಬ್ದಗಳನ್ನು ಪರಿಚಯ ಮಾಡಿಕೊಡಲಾಗುವುದು. ಆಯಾ ಶಬ್ದದ ಮುಂದೆ ನಾಲ್ಕು ಅರ್ಥಗಳನ್ನು ಕೊಟ್ಟಿದ್ದು, ಅವುಗಳಲ್ಲಿ ಒಂದು ಮಾತ್ರ ಸರಿಯಾಗಿರುತ್ತದೆ. ನಿಮಗೆ ಸರಿಯೆನಿಸಿದ ಅರ್ಥವನ್ನು ಮೊದಲು ಆರಿಸಿಕೊಳ್ಳಿರಿ. ಆ ಮೇಲೆ ಇದರ ಬೆನ್ನಿನ ಪುಟ ನೋಡಿರಿ. ಅಲ್ಲಿ ಸರಿಯಾಗಿ ಅರ್ಥಗಳನ್ನು ವಿವರಿಸಿದೆ.

೧. ಅಗಮ್ಯ
(ಅ) ಹತ್ತಿಕ್ಕಲಾಗದ (ಆ) ಪರ್ವತ
(ಇ) ಆಳವಿಲ್ಲದ (ಈ) ಹೋಗಬಾರದ

೨. ಅಂತರ್ಗತ
(ಅ) ಕೊನೆಯ ಮಾತು (ಆ) ಒಳಗಿರುವ
(ಇ) ಹೆಚ್ಚು ಕಡಿಮೆಯಾದ (ಈ) ಜನಾನಾಖಾನೆ

೩. ಉತ್ತರವಾದಿ
(ಅ) ಪ್ರತಿವಾದಿ (ಆ) ಬಡಗಣ ದಿಶೆಯ
(ಇ) ಎತ್ತರದಲ್ಲಿರುವವ (ಈ) ದಾಟಿ ಹೋದವ

೪. ಉದಗ್ರ
(ಅ) ಮೋಡ (ಆ) ಸಮುದ್ರ (ಇ) ಮೇಲ್ಮುಖವಾದ (ಈ) ಕೊಡ

೫. ಎಟ್ಟಿ
(ಅ) ಹಟವಾರಿ (ಆ) ಕಟ್ಟಿಗೆ (ಇ) ಪೂಜೆ (ಈ) ಮಣ್ಣು

೬. ಹಸ್ತಾಂತರ
(ಅ) ಗೇಣು (ಆ) ಕೈಬದಲಿಸುವಿಕೆ
(ಇ) ಕೈನೋಡುವುದು (ಈ) ಮೊಳ

೭. ನಿರಸ್ತ
(ಅ) ರಸವಿಲ್ಲದ (ಆ) ದಾರಿತಪ್ಪಿದ
(ಇ) ಹೊರದೂಡಿದ (ಈ) ಆಶೆಯಿಲ್ಲದ

೮. ಸ್ನಾತಕ
(ಅ) ವಿದ್ಯಾಭ್ಯಾಸ ಮುಗಿಸಿದವ (ಆ) ಮೈಲಿಗೆಯಾದ (ಇ) ಎಣ್ಣೆಯುಳ್ಳ
(ಈ) ಸ್ವಚ್ಛವಾದ

೯. ಪುಣ್ಯಶ್ಲೋಕ
(ಅ) ಮಂತ್ರವಾದಿ (ಆ) ಪುರೋಹಿತ
(ಇ) ಕೀರ್ತಿವಂತ (ಈ) ಕಷ್ಟಕ್ಕೊಳಗಾದ ಸಜ್ಜನ

೧೦. ಸ್ಖಾಲಿತ್ಯ
(ಅ) ಕಳ್ಳತನ (ಆ) ತಪ್ಪುತಡೆ (ಇ) ಮಿತ್ರ (ಈ) ದಾಳಿ

೧೧. ವೈತನಿಕ
(ಅ) ಕಾಯ್ದೆಯ (ಆ) ಮೈಮರೆತವ
(ಇ) ಕಣ್ಮರೆ (ಈ) ಸಂಬಳದವ

೧೨. ದ್ವಿಕಳತ್ರ
(ಅ) ಜಗಳಾಡುವ (ಆ) ಚಂದ್ರ (ಇ) ಇಮ್ಮಡಿ (ಈ) ಎರಡು ಹೆಂಡಂದಿರುಳ್ಳವ

ದೂರದಿಂದ ಅವನನ್ನು ಕಂಡ ಆ ಲೆಮನ್ ಪಾನೀಯದ ಹುಡುಗಿ ಅವನನ್ನು ಜನರಲ್ ಎಂದೇ ಭಾವಿಸಿ "ಬನ್ನಿ ಜನರಲ್" ಎಂದು ಕೂಗಿದಳು. ಮುಖ ತಿರುಗಿಸದೇನೇ ಬ್ಲಿಸ್ ಅವಳತ್ತ ಕೈ ಬೀಸಿ ಜನರಲ್ಲರ ಅಭ್ಯಾಸದ ಕೋಣೆಗೆ ನಡೆದ. ಸಹಜವಾಗಿ ಬಾಗಿಲು ತೆರೆದು ಒಳಹೊಕ್ಕು ಸಮಾಧಾನದ ಉಸಿರ್ಗರೆದ. ಯಾರಿಗೂ ಸಂದೇಹ ಬಂದಿರಲಿಲ್ಲ. ಆದರೂ ಆತ ಬೇಗ ಬೇಗನೆ ಕೆಲಸ ಮುಗಿಸಬೇಕು. ಯಾವನಾದರೂ ಹುಚ್ಚ ಆ ಮಾಲಿಯ ಉಪಕರಣಗಳ ಕೋಣೆಯತ್ತ ಹೋಗಿಬಿಟ್ಟರೆ...

ಬ್ಲಿಸ್ ಓವರ್ ಕೋಟು ಕಳಚಿ ಕೆಲಸಕ್ಕಾರಂಭಿಸಿದ. ಕೋಣೆ ದೊಡ್ಡದಾಗಿತ್ತು. ಗೋಡೆಗಳ ತುಂಬೆಲ್ಲ ಪುಸ್ತಕಗಳ ಕಪಾಟುಗಳನ್ನು ಹಚ್ಚಿದ್ದರು. ಒಂದು ಮೂಲೆಯಲ್ಲಿ ಹಳೆಯ ಕಾಲದ ಟ್ರಿಝುರಿ ಇತ್ತು. ಬ್ಲಿಸ್ ಜನರಲ್ಲರ ಮೇಜಿನ ಖಣಕ್ಕೆ ಕೈಹಾಕಿದ.

*

ಇತ್ತ ಜನರಲ್ಲರು ಬಹಳ ಹೊತ್ತಿನ ವರೆಗೆ ಗುದ್ದಾಡಿ ಬಹು ಪ್ರಯಾಸದಿಂದ ಹಗ್ಗ ಬಿಚ್ಚಿಕೊಂಡರು. ಅವರೆದ್ದು ನಿಂತಾಗ ಕಾಲು ಹರಿಯುತ್ತಿತ್ತು. ಮೈ ಕಂಪಿಸುತ್ತಿತ್ತು. ಆತ ತುಟಿಯಲ್ಲೆ ಬ್ಲಿಸ್‌ನನ್ನು ಶಪಿಸುತ್ತ ಹೊರಬಿದ್ದರು.

ಅವರು ಜನರಿದ್ದೆಡೆ ಬಂದಾಗ ಜನ ಗುಂಪುಗೂಡಿ ಪಿಸುಮಾತಿನಲ್ಲಿ ಏನೇನೊ ಹೇಳಿಕೊಳ್ಳುತ್ತ ನಿಂತಿದ್ದರು. ಲೆಮನ್ ಪಾನೀಯದ ಹುಡುಗಿ ಅವರಿದ್ದಲ್ಲಿಗೆ ಓಡುತ್ತಲೇ ಬಂದಳು.

"ಓ! ಜನರಲ್, ನಿಮ್ಮ ಅಭ್ಯಾಸದ ಕೋಣೆಗೆ ಕನ್ನ ಬಿದ್ದಿದೆ. ನೀವೆಲ್ಲಿಗೆ ಹೋಗಿದ್ದಿರಿ? ನಾನು ನಿಮಗೆ ಹೇಳಿದ್ದೆ..."

"ನಾನು ಆ ಸುಡಗಾಡು ಮಾಲಿಯ ಕೋಣೆಯಲ್ಲಿದ್ದೆ."

"ಹೀಗಾಗುತ್ತದೆ ಎಂದು ನಾನು ನಿಮಗೆ ಹೇಳಿದ್ದೆ. ಹಾಡೇ ಹಗಲು ನಡೆಯಿತು ಈಗ. ಜನರಲ್, ಇದು ತೀರ ಭಯಂಕರ ಮಾತಾಯಿತು. ನಿಮ್ಮ ಆ ಅದ್ಭುತ ವಜ್ರಗಳೀಗ ಮಾಯವಾಗಿಬಿಟ್ಟವು."

"ಮಾಯವಾದವೆ?" ಜನರಲ್ ಪ್ರತಿಧ್ವನಿ ಹೊರಡಿಸಿದರು.

"ಹೌದು. ಹುಡುಕಿದರೆ ನೀವು ಕಾಣಲೇ ಇಲ್ಲ. ನೀವು ಅಭ್ಯಾಸದ ಕೋಣೆಗೆ ಹೋಗಿ ತಿರುಗಿ ಬಂದಿದ್ದನ್ನು ನಾನು ಕಂಡಿದ್ದೆ."

"ಆದರೆ ನಾನಲ್ಲಿಗೆ ಹೋಗಿಯೆ..."

"ಇಲ್ಲ. ಆದರೆ ನೀವೇ ಎಂದು ನಾನು ತಿಳಿದುಕೊಂಡಿದ್ದೆ. ಅದು ನಿಮ್ಮ ಓವರ ಕೋಟನ್ನು ಹಾಕಿಕೊಂಡ ಬೇರೆ ಯಾರೋ ಇದ್ದಿರಬೇಕು. ಆ ಮೇಲೆ ನಾವೆಲ್ಲ ನಿಮ್ಮ ಕೋಣೆಗೆ ಹೋದೆವು. ಹಾ! ಅಲ್ಲಿಯ ದೃಶ್ಯ ಭೀಕರವಾಗಿತ್ತು. ಸಾಮಾನುಗಳು ಚೆಲ್ಲಾಪಿಲ್ಲಿಯಾಗಿ ಬಿದ್ದಿದ್ದವು. ಟ್ರಿಝುರಿ ಬಾಗಿಲು ಮುರಿದಿದ್ದಾರೆ. ಮೇಜಿನ ಖಣಗಳು ಬರಿದಾಗಿವೆ. ಆ ಮೇಲೆ ನಿಮ್ಮ ಓವರ ಕೋಟು ನಮಗೆ ಒಂದು ಗಿಡಗಂಟೆಯ ಹಿಂದೆ ಸಿಕ್ಕಿತು."

"ಅದನ್ನು ನನಗೆ ಕೊಡು. ಛಳಿಯಿಂದ ನಡುಗುತ್ತಿದ್ದೇನೆ ನಾನು."

ಯಾರೊ ಆ ಓವರ ಕೋಟು ಕೊಟ್ಟರು. ಅದನ್ನು ಜಾಗರೂಕತೆಯಿಂದ ಮುಟ್ಟಿ ಪರೀಕ್ಷಿಸುತ್ತ ಜನರಲ್ ತೊಟ್ಟುಕೊಂಡರು.

"ಛೇ! ಎಂಥ ನಿರಾಶೆ!" ಎಂದವರು ಗುಣುಗುಟ್ಟಿದರು.

"ಘೋರ ಪ್ರಸಂಗ" ಆ ತರುಣಿ ಹೇಳಿದಳು.

"ಕಳ್ಳನಿಗೆ ಎಂದೆ ನಾನು." ಜನರಲ್ ಕನಿಕರಪೂರ್ಣ ಧ್ವನಿಯಲ್ಲಿ ಹೇಳಿದರು. "ಇಂಥ ಸಮಾರಂಭದ ಸಮಯದಲ್ಲಿ ಎಂಥೆಂಥವರು ಬರುತ್ತಾರೊ ಹೇಳಲಿಕ್ಕಾಗುವುದಿಲ್ಲ. / ಅಂತೆಯೆ ನಾನು ಇಂದು ಆ ವಜ್ರಗಳನ್ನು ನನ್ನ ಈ ಓವರ ಕೋಟಿನ ಒಳಕಿಸೆಯಲ್ಲಿಯೆ ಇಟ್ಟುಕೊಂಡಿದ್ದ. *

ಬೇಕಾಗಿದೆ."

"ಓಹೊ! ಹೇಳಿರಲ್ಲ." ಜನರಲ್ ಸಂಭ್ರಮದಿಂದ ನುಡಿದರು.

"ಇಲ್ಲಲ್ಲ. ಖಾಸಗಿ ವಿಚಾರವದು. ಏಕಾಂತ ಸ್ಥಳವೊಂದಕ್ಕೆ ನಾವು ಹೋಗಲಾರೆವೆ?"

ಜನರಲ್ ಬ್ಲಿಸ್‌ನನ್ನು ಆಶ್ಚರ್ಯಚಕಿತ ದೃಷ್ಟಿಯಿಂದ ನೋಡಿ "ಅಷ್ಟು ಮಹತ್ವದ ಮಾತೆ?" ಎಂದು ಕೇಳಿದರು.

"ಹೌದು.

"ಮನೆಯ ಹಿಂದುಗಡೆ ಮಾಲಿಯ ಉಪಕರಣಗಳನ್ನಿಡುವ ಕೋಣೆಯಿದೆ. ಅಲ್ಲಿ ಹೋಗೋಣ. ಈ ಸಮಯದಲ್ಲಿ ಅಲ್ಲಿಗೆ ಯಾರೂ ಬರರು."

ಇಬ್ಬರೂ ಅಲ್ಲಿಗೆ ಹೋದರು. "ಹಂ. ಏನು ಸಮಾಚಾರ?" ಜನರಲ್ ಕೇಳಿದರು.

"ನಿಮ್ಮ ಓವರಕೋಟು ನನಗೆ ಬೇಕು." ಬ್ಲಿಸ್ ಬಿರುಸಾಗಿ ಹೇಳಿದ.

"ಅಂ? ನನ್ನ ಓವರಕೋಟು? ಯಾವ ಶತ ಕೃತ್ಯಕ್ಕಾಗಿ?"

"ಅದು ನನಗೆ ಸಂಬಂಧಪಟ್ಟ ವಿಚಾರ"

"ಥತ್! ನೋಡಿಲ್ಲಿ–"

"ತೆಗಿ" ಬ್ಲಿಸ್ ಅವಡುಗಚ್ಚಿ ನುಡಿದ.

"ನಿನ್ನ ಮೈ ಹುಳಿ..."

ಜನರಲ್ಲರ ಮಾತು ಅರ್ಧಕ್ಕೇ ನಿಂತುಹೋಯಿತು. ಬ್ಲಿಸ್‌ನ ಕೈಲಿದ್ದ ಪುಟ್ಟ ರಿವಾಲ್ವರ್ ಅವರ ಕಣ್ಣಿಗೆ ಬಿದ್ದಿತ್ತು.

"ನಾನು ಯಾವಾಗಲೂ ಸಿದ್ಧನಾಗಿಯೆ ಇರುತ್ತೇನೆ. ಕೋಟನ್ನು ತೆಗೆದು ಕೊಡುತ್ತೀರಿ ತಾನೇ?" ಬ್ಲಿಸ್ ಶಾಂತ ಆದರೆ ಖಂಡಿತ ಸ್ವರದಲ್ಲಿ ಕೇಳಿದ.

"ಗುಂಡು ಹಾರಿಸುವ ಧೈರ್ಯ ನಿನಗಾಗದು. ಗುಂಡಿನ ಸಪ್ಪಳ ಕೇಳಿ ಎಲ್ಲರೂ ಓಡಿ ಬರುತ್ತಾರೆ."

"ಗುಂಡು ಹಾರಿಸುವ ಇಚ್ಛೆ ನನಗೂ ಇಲ್ಲ. ಆದರೆ ಹಾರಿಸಲು ನಾನೇನೂ ಅಂಜುವದಿಲ್ಲ. ನನ್ನ ಮಿತ್ರರಾದ ಜನರಲ್ಲರಿಗೆ ಪಿಸ್ತೂಲನ್ನು ತೋರಿಸುತ್ತಿದ್ದಾಗ ಅಕಸ್ಮಾತ್ ಗುಂಡುಹಾರಿತು ಎಂದು ನಾನು ವಿವರಣೆ ಕೊಡಬಲ್ಲೆ. ಹಾಗೇನಾದರೂ ವಿವರಣೆ ಕೊಡಬೇಕಾದ ಪ್ರಸಂಗವೇ ಬಂದಲ್ಲಿ ಅಪಘಾತವು ಪ್ರಾಣಾಂತಿಕವಾಗುವಂತೆ ನೋಡಿಕೊಳ್ಳಬೇಕಾದೀತು."

ಜನರಲ್ ಇನ್ನೂ ಮೀನಮೇಷ ಮಾಡಿದರು.

"ಯಾಕೆ ಬೇಕು ನಿನಗೆ ನನ್ನ ಕೋಟು?"

"ಖಾಸಗಿ ಕೆಲಸಕ್ಕಾಗಿ. ನಿಮ್ಮ ಕೋಟನ್ನೇನೂ ಹಾಳು ಮಾಡುವುದಿಲ್ಲ"

ಜನರಲ್ ಕೋಟು ಕಳಚಿ ನೆಲದ ಮೇಲೆ ಚೆಲ್ಲಿದರು. "ಥ್ಯಾಂಕ್ಸ್. ಇನ್ನು ಕೋಣೆಯೊಳಗೆ ನಡೆಯಿರಿ. ಅಲ್ಲಿ ಚೂರುಪಾರು ಹಗ್ಗ ಸಿಕ್ಕೀತೆಂಬ ಭರವಸೆ ನನಗಿದೆ." ಬ್ಲಿಸ್ ಹೇಳಿದ.

ಹಗ್ಗ ಇತ್ತು. ಬ್ಲಿಸ್‌ನ ಚುರುಕು ಬೆರಳುಗಳು ತ್ವರಿತವಾಗಿ ಕಾರ್ಯ ಮಾಡಿದವು. ಕೆಲವೇ ನಿಮಿಷಗಳಲ್ಲಿ ಕೈಕಾಲು ಕಟ್ಟಿಸಿಕೊಂಡು ಜನರಲ್ ನಿಸ್ಸಹಯಾಕರಾಗಿ ಬೆಂಚಿನ ಬುಡದಲ್ಲಿ ಬಿದ್ದುಕೊಂಡಿದ್ದರು. ಅವರ ಕುತ್ತಿಗೆಗೆ ಇದ್ದ ರೇಶಿಮೆಯ ಸ್ಕಾರ್ಫೇ ಅವರ ಬಾಯಿಯ ಬೀಗವಾಯಿತು ಈಗ ಸಮಾಧಾನದ ದೃಷ್ಟಿಯಿಂದ ಅವರನ್ನು ನೋಡಿ ಬ್ಲಿಸ್ ಹೊರಬಂದು ಕೋಣೆಯ ಬಾಗಿಲು ಹಾಕಿದ. ಆತ ಓವರಕೋಟನ್ನು ಸುರುಳಿ ಸುತ್ತಿ ಬಗಲಲ್ಲಿ ಹಿಡಿದುಕೊಂಡು ತಿರುಗಿ ಜನರಿದ್ದಲ್ಲಿಗೆ ಬಂದಾಗ ಯಾರೂ ಅವನತ್ತ ವಿಶೇಷ ಗಮನೀಯಲಿಲ್ಲ. ಯಾರೂ ತನ್ನನ್ನು ನೋಡುತ್ತಿಲ್ಲ ಎಂದು ನಂಬಿಗೆಯಾದಾಗ ಬ್ಲಿಸ್ ಒಂದು ಗಿಡದ ಮರೆಯಲ್ಲಿ ನಿಂತು ಓವರಕೋಟು ತೊಟ್ಟುಕೊಂಡ. ಆ ಮೇಲೆ ಆತ ಸಮಯ ನಿರೀಕ್ಷಿಸುತ್ತ ನಿಂತ. ಆ ಇಪ್ಪತ್ತು ಮಾರು ಅಂಗಳ ದಾಟಿದರೆ ಮುಂದೇನೂ ತೊಂದರೆಯಿಲ್ಲ.

ಆ ಮುಹೂರ್ತ ಬಂತು. ಅವನನ್ನು ಗುರುತಿಸುವಷ್ಟು ಸಮೀಪದಲ್ಲಿ ಯಾರೂ ಇರಲಿಲ್ಲ. ದೂರದಲ್ಲಿರುವವರನ್ನು ಮೋಸಗೊಳಿಸಲು ಓವರಕೋಟು ಸಮರ್ಥವಾಗಿತ್ತು. ಬ್ಲಿಸ್ ಗಿಡದ ಮರೆಯಿಂದ ಹೊರಬಂದು ಸರಸರ ನಡೆದ.

ಗ್ಲಾಸಿನಲ್ಲಿ ಇನ್ನಿಷ್ಟು ಪಾನೀಯವನ್ನು ಸುರಿದಳು. ಅಂಥ ವಸ್ತುಗಳನ್ನು ಸಂಗ್ರಹಿಸುವುದಕ್ಕಾಗಿ ಹಣ ಹಾಳು ಮಾಡುವುದು ಮೂರ್ಖತನವೆಂದು ನನಗನಿಸುತ್ತದೆ. ಅಲ್ಲವೆ?"

"ಖಂಡಿತವಾಗಿಯೂ."

"ಮತ್ತೆ ಅಂಥ ಬೆಲೆಬಾಳುವ ವಸ್ತುಗಳನ್ನು ನಾನಂತೂ ಮನೆಯಲ್ಲಿಟ್ಟುಕೊಳ್ಳಲಾರೆ."

"ಅಂದರೆ ಜನರಲ್ ವಜ್ರಗಳನ್ನು ಮನೆಯಲ್ಲಿಯೆ ಇಟ್ಟಿರುತ್ತಾರೆಯೆ?" ಬ್ಲಿಸ್ ಮುಗ್ಧನಂತೆ ತರುಣಿಯ ಮುಖ ನೋಡಿದ.

"ಹೌದು. ತೀರ ಮಂಕುತನ ಅದು. ತಮ್ಮ ಅಭ್ಯಾಸದ ಕೋಣೆಯ ಮೇಜಿನ ಖಣದಲ್ಲಿ ಅವುಗಳನ್ನಿಡುತ್ತಾರೆ. ಅವನ್ನು ಬ್ಯಾಂಕಿನಲ್ಲಿಡಿ ಎಂದು ಅನೇಕರು ಅವರಿಗೆ ಸಲಹೆಯಿತ್ತರು. ಆದರೆ ಅವರು ಕೇಳುವುದಿಲ್ಲ ತುಂಬಾ ದುರಾಗ್ರಹಿಗಳು ಈ ಜನರಲ್. ಒಂದಲ್ಲ ಒಂದು ದಿನ ಯಾರಾದರೂ ಆ ವಜ್ರಗಳನ್ನು ಕದಿಯದೆ ಇರುವುದಿಲ್ಲ, ನೋಡಿ ಬೇಕಾದರೆ."

"ವಜ್ರಗಳು ಕಳವಾಗಿ ಹೋದವು ಎಂಬ ಸುದ್ದಿ ಕೇಳಿದರೆ ನನಗೂ ಆಶ್ಚರ್ಯವಾಗಲಿಕ್ಕಿಲ್ಲ." ಬ್ಲಿಸ್ ಮೆಲ್ಲನೆ ಉತ್ತರವಿತ್ತ.

ಮಾತಿನ ಭರದಲ್ಲಿ ತರುಣಿ ಮತ್ತೂ ಹೇಳಿದಳು. "ಅಲ್ಲದೆ ಜನರಲ್ ತುಂಬಾ ಮರೆವಿನ ಸ್ವಭಾವದವರು. ನಿಷ್ಕಾಳಜಿ ಮನುಷ್ಯರು. ಕೆಲ ಸಲವಂತೂ ಅವರು ಮೇಜಿನ ಖಣ ತೆರೆದುಕೂಡ ನೋಡುವುದಿಲ್ಲ. ಕೋಣೆಯ ಬಾಗಿಲಿಗೆ ಬೀಗವನ್ನು ಎಂದೂ ಹಾಕುವುದಿಲ್ಲ. ಮನೆಯ ಆಳುಕಾಳುಗಳ ಮನದಲ್ಲಿ ಲಾಲಸೆಯನ್ನು ಹುಟ್ಟಿಸಿದಂತಾಗುವುದಿಲ್ಲವೆ ಹೀಗೆ ಮಾಡಿದರೆ?"

"ಮನೆಯಲ್ಲಿ ಬಹಳ ಆಳುಗಳಿದ್ದಾರೆಯೆ?"

"ಹೌದು. ಆದರೆ ಇಂದು ಅವರೆಲ್ಲ ಈ ಸಮಾರಂಭದ ವ್ಯವಸ್ಥೆಯಲ್ಲಿ ಮಗ್ನರಾಗಿದ್ದಾರೆ. ಇನ್ನೊಂದು ಗ್ಲಾಸು ಲೆಮನ್ ಕೊಡಲೆ?"

"ಬೇಡ." ಮುಗುಳ್ನಕ್ಕು ಅವಳನ್ನು ಅಭಿವಂದಿಸಿ ಬ್ಲಿಸ್ ಅಲ್ಲಿಂದ ನಡೆದ.

ತೋಟ ಜನರಿಂದ ತುಂಬಿಹೋಗಿತ್ತು. ಯಾವುದೊ ಸಂಸ್ಥೆಯ ಸಹಾಯಕ್ಕಾಗಿ ಎಂದು ಯೋಜಿಸಿದ್ದ ಈ ಸಮಾರಂಭಕ್ಕೆ ಯಾರು ಬೇಕಾದರೂ ಬರಬಹುದಿತ್ತು. ಪಾನೀಯದ ಮಳಿಗೆಗಳು, ಮಿಠಾಯಿ ಮಳಿಗೆಗಳು, ಐಸ್‌ಕ್ರೀಮ ಮಳಿಗೆ ಮುಂತಾದವುಗಳ ನಡುವಿಂದ ಜನಗದ್ದಲದಲ್ಲಿ ಹಾದಿ ಮಾಡಿಕೊಳ್ಳುತ್ತ ನಡೆದ ಬ್ಲಿಸ್ ಒಬ್ಬ ಭವಿಷ್ಯವಾದಿಯ ಡೇರೆಯ ಹಿಂದುಗಡೆ ಬಂದು ನಿಂತ. ಅಲ್ಲಿ ನಿಂತು ಆತ ತಾನು ಮಾತ್ರ ಯಾರ ಕಣ್ಣಿಗೂ ಬೀಳದೆ ಜನರಲ್ಲರ ಅಭ್ಯಾಸದ ಕೋಣೆಯ ಕಿಡಕಿಗಳನ್ನು ನಿರೀಕ್ಷಿಸಬಹುದಿತ್ತು.

ಕೆಲಸ ಬಲು ಸುಲಭವಾಗಿತ್ತು. ಚಿಕ್ಕ ಮಗು ಕೂಡ ಮಾಡಬಹುದಿತ್ತು. ಆದರೆ ಒಂದೇಒಂದು ಆತಂಕವಿತ್ತು. ನಡುವೆ ಅಂಗಳ ದಾಟಿ ಆ ಕಿಡಕಿಗಳ ವರೆಗೆ ಹೋಗಬೇಕಾದರೆ ಸುಮಾರು ಇಪ್ಪತ್ತು ಮಾರು ನೆಲವನ್ನು ಕ್ರಮಿಸಬೇಕಾಗಿತ್ತು. ದಾಟುವವನನ್ನು ಮರೆ ಮಾಡಲು ಯಾವ ಸಾಧನವೂ ಇರಲಿಲ್ಲ. ಅಂಗಳ ದಾಟಲೆತ್ನಿಸಿದರೆ ಯಾರ ಕಣ್ಣಿಗಾದರೂ ಬೀಳುವುದು ಖಂಡಿತವಾಗಿತ್ತು.

ಅಷ್ಟರಲ್ಲಿ ದಪ್ಪನ್ನ ಕಂದುಬಣ್ಣದ ಓವರ್ ಕೋಟನ್ನು ತೊಟ್ಟ ಜನರಲ್ ಆ ಅಂಗಳದತ್ತ ನಡೆದಿರುವುದು ಅವನಕಣ್ಣಿಗೆ ಬಿತ್ತು. ಹಠಾತ್ತಾಗಿ ಅವನ ಮಿದುಳಿನಲ್ಲಿ ಯುಕ್ತಿಯೊಂದು ಮಿಂಚಿತು. ಅಲ್ಲಿ ನೆರೆದ ಜನರಲ್ಲಿ ಓವರ್‌ಕೋಟು ತೊಟ್ಟಿದ್ದವನೆಂದರೆ ಜನರಲ್ ಒಬ್ಬರೇ. ದೂರದಲ್ಲಿ ಯಾರೇ ಓವರ್‌ಕೋಟು ತೊಟ್ಟು ನಿಂತರೂ ಜನರಲ್ ಎಂದೇ ಭಾವನೆಯುಂಟಾಗುವಂತಿತ್ತು.

ಬ್ಲಿಸ್ ಹಲ್ಲು ಕಿರಿದ. ಜನರಲ್ಲರ ಮನೆಗೆ ಕನ್ನ ಹಾಕಲು ಅವರದೇ ಓವರಕೋಟನ್ನು ಕೈಗಡ ಇಸಿದುಕೊಳ್ಳುವ ಅಪೂರ್ವ ಹಂಚಿಕೆ ಅವನಿಗೆ ಕಚಗುಳಿಯಿಟ್ಟಂತೆ ಮಾಡಿತ್ತು.

ಆತ ತಟ್ಟನೆ ಜನರಲ್ಲರ ಬಳಿ ನಡೆದ. "ಅಂ, ಕ್ಷಮಿಸಿ. ನಿಮ್ಮ ಹತ್ತಿರ ಮಹತ್ವದ ಮಾತಾಡ

ತಕ್ಕನಿಗೆ ಠಿಕ್ಕ ಗಂಟು ಬಿದ್ದರೆ ಹೀಗಾಗುತ್ತದೆ.

# ಜನರಲ್ಲರ ಗತ್ತು

ಸೆಸಿಲಿಯಾ ಫ್ರೀಮನ್

ಮಿಸ್ಟರ್ ಬ್ಲಿಸ್ ಖದೀಮನ ಹಾಗೆ ಕಾಣಿಸುತ್ತಿರಲಿಲ್ಲ. ಜನರಲ್ ಮಾಹೋನರ ವನಭೋಜನ ಸಮಾರಂಭದಲ್ಲಿ ಲಿಮನ್ ಪಾನೀಯ ವಿತರಣೆಯ ಮೇಲ್ವಿಚಾರಣೆ ನೋಡಿಕೊಳ್ಳುತ್ತಿದ್ದ ತರುಣಿಗೆ ಅವನು ಅತ್ಯಂತ ಸಭ್ಯಗೃಹಸ್ಥನಾಗಿ ಕಂಡುಬಂದನು. ಜನರಲ್ಲರ ವಜ್ರಗಳನ್ನು ಕದಿಯಬೇಕೆನ್ನುವುದೇ ಬ್ಲಿಸ್‌ನ ಮಹತ್ವಾಕಾಂಕ್ಷೆಯಾಗಿತ್ತು ಎನ್ನುವುದೇನಾದರೂ ಅವಳಿಗೆ ಗೊತ್ತಿದ್ದರೆ ಅವಳು ಪುಲಕಿತಳಾಗುತ್ತಿದ್ದಳು.

ಒಂದಿಷ್ಟು ಸ್ವಾದರಹಿತವಾದ, ಅರ್ಧಪಾರ್ದಪಾರದರ್ಶಿಯಾದ ಪಾನೀಯವನ್ನು ಚಪ್ಪರಿಸುತ್ತಿದ್ದ ಬ್ಲಿಸ್‌ನನ್ನು ಕುರಿತು ಆ ತರುಣಿ ಹೇಳಿದಳು, "ನಮ್ಮ ಜನರಲ್ ಇದ್ದಾರಲ್ಲ, ತುಂಬಾ ಪ್ರಿಯ ವ್ಯಕ್ತಿಗಳು. ಆದರೆ ಅವರಿಗೆ ಬ್ರಿಟನ್ನಿನ ಹವೆ ಒಗ್ಗುವುದಿಲ್ಲ. ಅವರ ಜೀವನದ ಬಹುಭಾಗವೆಲ್ಲ ಭಾರತದಲ್ಲಿ ಕಳೆದಿದೆ ಎನ್ನುವುದು ನಿಮಗೆ ಗೊತ್ತಿರಬೇಕು."

ಬ್ಲಿಸ್‌ನಿಗೆ ಅಂಥ ವಿಚಾರವಾವುದೂ ಗೊತ್ತಿರಲಿಲ್ಲ. ಆದರೂ ಆತ ಹಾಗೆ ಹೇಳಲಿಲ್ಲ. "ಅಂದರೆ ಅವರಿಗೆ ಅಲ್ಲಿಯ ಸೆಕೆ ರೂಢಿಯಾಗಿರಬೇಕು." ಎಂದಾತ ಹೇಳಿದ.

"ಸರಿ." ತರುಣಿ ಮುಗುಳ್ನಕ್ಕಳು. "ಈಗ ಸ್ವದೇಶಕ್ಕೆ ಬಂದ ಮೇಲೆ ಅವರಿಗೆ ಕುಳಿತರೆ ನೆಗಡಿ ಎದ್ದರೆ ನೆಗಡಿ ಎನ್ನುವಂತಾಗಿದೆ. ಪಾಪ! ಈಗಿನ ಈ ಬೆಚ್ಚನ್ನ ಹವೆಯಲ್ಲಿ ಕೂಡ ಆತ ನಡುಗುತ್ತಲೇ ಇರುತ್ತಾರೆ."

"ಅಯ್ಯೊ ಅಯ್ಯೊ!" ಬ್ಲಿಸ್ ಸಹಾನುಭೂತಿ ತೋರಿದ.

"ಅಂತೇ ಅವರು ಯಾವಾಗಲೂ ಓವರ್ ಕೋಟ್ ಹಾಕಿಕೊಳ್ಳುತ್ತಾರೆ. ಹವೆ ಈಗಿನಷ್ಟು ಬೆಚ್ಚಗಿಲ್ಲದಿದ್ದರೆ ಎರಡು ಓವರ್‌ಕೋಟುಗಳನ್ನು ಹಾಕಿಕೊಳ್ಳುತ್ತಾರೆ."

"ಅವರ ವಜ್ರಗಳು ತುಂಬಾ ಹೆಸರುವಾಸಿಯಾಗಿವೆ." ಬ್ಲಿಸ್ ಸಹಜವಾಗಿ ನುಡಿದ.

"ಹೌದೌದು." ತರುಣಿಗೆ ಮಾತು ಬೆಳೆಸಲು ಹೊಸ ವಿಷಯ ಸಿಕ್ಕಿತು. ಬ್ಲಿಸ್ ತೋರಿದ ಕುತೂಹಲದ ಪ್ರಯೋಜನ ಪಡೆದು ಅವಳು ಅವನ

ರುಬಾರದಿದ್ದರೆ ಒಂದು ಇಣಚಿಯಾಗಲಿ ಮೊಲವಾಗಲಿ ಖಂಡಿತ ಅದರ ಹೊಟ್ಟೆ ಸೇರುತ್ತಿತ್ತು.

ಅಡವಿಯ ಜೀವನದಲ್ಲಿ ಮೈತುಂಬ ಕಣ್ಣಾಗಿರುವುದು ಅಗತ್ಯವಾಗಿದೆ. ನರಿ ಬಂದಿತೋ ಇಲ್ಲವೊ ಎನ್ನುವಷ್ಟರಲ್ಲಿ ಇಣಚಿಗಳು ಗಿಡವನ್ನೇರಿದವು. ಮೊಲಗಳು ಜಿಗಿದು ಪೊದೆಯಲ್ಲಿ ಮರೆಯಾದವು. ನಮಗೆ ತುಂಬ ಮೋಜೆನಿಸಿತು. ನಮ್ಮೆದುರು ವಾಲ್ಟ್ ಡಿಸ್ನೆಯ ಯಾವುದೊ ಚಿತ್ರಪಟ ನಡೆದಂತಿತ್ತು.

ಎಲ್ಲರನ್ನೂ ಓಡಿಸಿದ ನರಿ ನಾಲ್ಕೂ ದಿಕ್ಕಿನಲ್ಲಿ ದೃಷ್ಟಿ ಹಾಯಿಸಿತೊ ಇಲ್ಲವೊ, ಕಾಡು ಹಂದಿಗಳ ಹಿಂಡೊಂದು ಅಲ್ಲಿಗೆ ಬಂತು. ನರಿ ಅವುಗಳನ್ನು ಬಿರುಗಣ್ಣಿನಿಂದ ನೋಡಿತು. ಹಂದಿಗಳು ನರಿಗಳನ್ನು ಅಷ್ಟೆ ಕೆಟ್ಟಗಣ್ಣಿನಿಂದ ನೋಡಿದವು. ಆದರೆ ನರಿ ಬಲು ಚತುರ ಪ್ರಾಣಿ. ಯಾರೊ ಬರುತ್ತಿದ್ದಾರೆಂದು ಹಂದಿಗಳನ್ನು ಭ್ರಮೆಯಲ್ಲಿ ಕೆಡವಲು ಅದು ತಟ್ಟನೆ ಓಡಿ ಗಿಡಗಂಟಿಗಳ ಹಿಂದೆ ಅಡಗಿತು. ಹಂದಿಗಳೂ ಚಲ್ಲಾಪಿಲ್ಲಿಯಾಗಿ ಓಡಿದವು. ಆ ಮೇಲೆ ನರಿ ಮತ್ತೆ ಬಂದು ಒಂದು ಚಂಡನ್ನು ಮೂತಿಯಿಂದ ಮೆಲ್ಲಗೆ ತಿವಿಯಿತು. ಅದು ಮೇಲಕ್ಕೆ ನೆಗೆಯಿತು. ಎರಡನೆಯದನ್ನು ತಿವಿದಾಗ ಅದೂ ಮೇಲಕ್ಕೆ ಪುಟಿಯಿತು. ಎಲಾ! ಏನಿವು? ಏನು ಮಾಡಬೇಕು ಎಂದು ನರಿ ಯೋಚನೆಗೊಳಗಾಯಿತು. ಅದರ ಯೋಚನೆ ಮುಗಿಯುವಷ್ಟರಲ್ಲಿ ಕರಡಿಯೊಂದು ಜಿಗಿಯುತ್ತ ಬಂತು. ಚಂಡುಗಳು ಪುಟಿದವು. ಹಾಗೆಯೆ ನರಿಯೂ ಮಂತ್ರಿಸಿದಂತೆ ಮಾಯವಾಯಿತು. ಕರಡಿ ತನ್ನ ಉಗುರುಗಳಿಂದ ಚಂಡುಗಳನ್ನು ಹಿಡಿಯಲೆತ್ನಿಸಿತು. ಐದು ಹತ್ತು ನಿಮಿಷ ಕರಡಿ ಯತ್ನಿಸಿದರೂ ಯಶಸ್ಸೇನೂ ಸಿಗಲಿಲ್ಲ. ಅದರ ತಾಲೀಮು ನಡೆಯುತ್ತಿದ್ದಾಗ ನಮಗೆ ನಗು ತಡೆಯುವುದಾಗುತ್ತಿರಲಿಲ್ಲ. ಬಾಯಿಯಲ್ಲಿ ಕರವಸ್ತ್ರ ತುರುಕಿಕೊಂಡು ನಗು ತಡೆಯಲೆತ್ನಿಸುತ್ತಿದ್ದಾಗ ಒಮ್ಮೆ ಒಬ್ಬರ ಬಾಯಿಂದ ಪಟ್ಟನೆ ನಗುವಿನ ಧ್ವನಿ ಹೊರಬಿದ್ದೇ ಬಿಟ್ಟಿತು.



ಅಕೋ!, ಜಾಂಬುವಂತ ಮಹಾರಾಜರು ಬೆಚ್ಚಿದರು, ಸಂಶಯಗ್ರಸ್ತರಾಗಿ ಯೋಚಿಸತೊಡಗಿದರು.

ಕರಡಿಯ ಚಿಂತೆಯ ಧಾರೆಯನ್ನು ಆನೆಯೊಂದು ಕಡಿಯಿತು ದಷ್ಟಪುಷ್ಟವಾಗಿದ್ದ ಆನೆ ಸೀದಾ ರಸ್ತೆಗೇ ಬರಲು ಕರಡಿ ಗುರುಗುಟ್ಟಿ ಅದನ್ನು ಶಪಿಸಿ ಓಡಿತು; ಈಗ ಆನೆಯ ಸರತಿ. ಸೊಂಡಿಲಿಂದ ಅದು ಒಮ್ಮೆ ಈ, ಒಮ್ಮೆ ಆ ಚಂಡನ್ನು ಪುಟಿಸತೊಡಗಿತು. ಅದರ ಕಾಲು ಬುಡಕ್ಕೆ ಚಂಡು ಸಿಗಲಿಲ್ಲ, ಅದೇ ಪುಣ್ಯ. ಗಜರಾಜ ಚಂಡುಗಳ ಜೊತೆ ಆಟವಾಡುತ್ತಿದ್ದಾಗ ಉಳಿದ ಮೃಗ ಪಕ್ಷಿಗಳೆಲ್ಲ ಮರೆಯಲ್ಲಿ ನಿಂತು ಇಣಿಕಿ ನೋಡುತ್ತಿದ್ದವು. ಆನೆ ಒಮ್ಮೆ ಕುತೂಹಲದಿಂದ ಚೀತ್ಕಾರ ಮಾಡಲು ಅದಕ್ಕೆ ಪ್ರತಿಧ್ವನಿಯಾಗಿ ದೂರದಲ್ಲೊಂದು ಗರ್ಜನೆ ಕೇಳಿ ಬಂತು. ಒಂದು ಜೋಡಿ ಚಿರತೆಗಳು ಇತ್ತಲೇ ಬರುವುದನ್ನು ಕಂಡ ಗಜರಾಜ ಮೆಲ್ಲನೆ ಪಲಾಯನ ಹೇಳಿದ

ಬಂದವುಗಳಲ್ಲಿ ಒಂದು ಚಿರತೆ ಚಂಡನ್ನು ತನ್ನ ಮುಂಗಾಲಿನಿಂದ ಹೊಡೆಯಲು ಪ್ಲಾಸ್ಟಿಕ್‌ನ ಆ ಚಂಡು 'ಠಸ್' ಎಂದು ಒಡೆಯಿತು ಉಳಿದಿದ್ದ ಚಂಡಿನತ್ತ ಚಿರತೆಯ ಎರಡು ಪುಟ್ಟ ಮರಿಗಳು ಜಿಗಿದವು. ಗುರುಗುಡುತ್ತ ಅದರೊಂ-ದಿಗೆ ಚಿನ್ನಾಟ ನಡೆಸಿದವು. ತಂದೆತಾಯಿ ಚಿರತೆಗಳು ಅಲ್ಲೆ ರಸ್ತೆಯಲ್ಲಿ ತಮ್ಮ ಮೈ ನೆಕ್ಕಿಕೊಳ್ಳುತ್ತಲೇ ಮಕ್ಕಳ ಮೇಲೆ ಕಣ್ಣಿಟ್ಟು ಅಡ್ಡಾದವು. ಈ ಭೀಕರ ಅಡವಿಯಲ್ಲೂ ನಮಗೆ ಮೃಗಾಲಯದ ಮೋಜು ಅನುಭವಕ್ಕೆ ಬರುತ್ತಿತ್ತು. ಜ್ಞಾನ ಬಹಾದ್ದೂರ ಸಿಂಹರು ಮತ್ತೆರಡು ಚಂಡುಗಳನ್ನು ಕೆಳಕ್ಕೆ ಕೆಡವಿದರು. ಅವು ನೆಲಕ್ಕೆ ಬೀಳುತ್ತಲೇ ಅಡ್ಡಾದ ಚಿರತೆಗಳು ಗರ್ಜಿಸಿ ಜಿಗಿದೆದ್ದು ನಿಂತು ಗುರುಗುಡತೊಡಗಿದವು. ಏನೋ ಕುತಂತ್ರವಿದೆ ಇದರಲ್ಲಿ ಎಂದವಕ್ಕೆ ಸಂಶಯ ಬಂದಿತ್ತು. ಅವು ಪುನಃ ಪುನಃ ಅಟ್ಟವಿದ್ದ ನಮ್ಮ ಗಿಡದತ್ತ ನೋಡುತ್ತಿದ್ದವು.

ಸಂದೇಹ ನಿವಾರಣೆಯಾಗದಿರಲು ಅವು ರಸ್ತೆಯ ಮತ್ತೊಂದು ಮಗ್ಗುಲಿನ ಗಿಡಗಂಟಿಗಳ ಹಿಂದೆ ನಿಂತು ನಮ್ಮತ್ತ ನೋಡುತ್ತ ನಿಂತವು. ಆದರೆ ನಮ್ಮಲ್ಲಿ ಒಬ್ಬರಾದರೂ ಗಟ್ಟಿಯಾಗಿ ಉಸಿರು ಕೂಡ ಬಿಡುತ್ತಿರಲಿಲ್ಲ. ಎಲೆ ಟೊಂಗೆಗಳ ದಟ್ಟವಾದ ಪಡದೆಯ ಹಿಂದಿದ್ದ ನಾವು ಅವಕ್ಕೆ ಕಾಣಿಸುವಂತೆಯೂ ಇರಲಿಲ್ಲ. ಕೆಲ ಹೊತ್ತಿನ ಮೇಲೆ ಸಂಶಯ ನಿವಾರಣೆಯಾದಂತೆ ಅವೆರಡೂ ಪುನಃ ಬಂದು ಮರಿಗಳ ಸಮೀಪದಲ್ಲಿ ಅಡ್ಡಾದವು. "ಪಶುಗಳಾದರೂ ಜಾಗರೂಕತೆಯಲ್ಲಿ ಪೋಲೀಸರಿಗಿಂತಲೂ ಮೇಲು" ಎಂದೆ ನಾನು. ಎರಡೂ ಮರಿಗಳೂ ಚಂಡುಗಳೊಡನೆ ಆಡುತ್ತಿದ್ದವು. ಶಿವಶಂಕರರಿಗೆ ತಡೆಯಲಾಗಲಿಲ್ಲ. ಅವರು ಎಲ್ಲ ಚಂಡುಗಳನ್ನೂ ಕೆಳಗೆಸೆದರು. ಎರಡೂ ಚಿರತೆಗಳು ಜಿಗಿದೆದ್ದು ಮರಿಗಳನ್ನು ಕರೆದುಕೊಂಡು ಓಡಿದವು. ಬರಲೊಪ್ಪದ ಮರಿಗಳನ್ನು ಬಲಾತ್ಕಾರದಿಂದ ಕಚ್ಚಿಕೊಂಡು ಸಾಗಿದವು.

ರಂಗ ಖಾಲಿಯಾದದ್ದನ್ನು ಕಂಡು ಅಡಗಿದ್ದ ಕರಡಿ ಹೊರಬಂದು ಚಂಡುಗಳನ್ನು ಕಾಲಿನಿಂದ ಸರಿಸುತ್ತ ಗಿಡಗಂಟಿಗಳ ಬಳಿಗೆ ಒಯ್ಯತೊಡಗಿತು. ಅಷ್ಟರಲ್ಲಿ ಅದಕ್ಕಿಂತಲೂ ಬಲಶಾಲಿಯಾದ ಇನ್ನೊಂದು ಕರಡಿ ಬಂತು. ಎರಡರಲ್ಲೂ ಕುಸ್ತಿಗಾರಂಭವಾಯಿತು. ಕತ್ತಲಾಗುತ್ತಾ ಬಂದಿತ್ತು. ಮನರಂಜನೆಯೂ ಸಾಕಷ್ಟಾಗಿತ್ತು. ದಣಿವೂ ಮೈತೋರಹತ್ತಿತ್ತು. ಜ್ಞಾನಬಹಾದ್ದೂರರು ಹುಸಿ ಗುಂಡು ಹಾರಿಸಿ ಗುದ್ದಾಡುತ್ತಿದ್ದ ಕರಡಿಗಳನ್ನು ಓಡಿಸಿದರು. ನಾವು ಐವರೂ ಅಟ್ಟದಿಂದ ಕೆಳಗಿಳಿದೆವು. ಜೀಪನ್ನು ಹೊರತೆಗೆದು ಕುಳಿತೆವು. ಜೀಪನ್ನು ತಿರುಗಿಸಿ ಹೊರಟೆವು ಎನ್ನುವಾಗ ದೀಪದ ಪ್ರಕಾಶದಲ್ಲಿ ಸುಮಾರು ಐವತ್ತು ಮಾರು ದೂರದಲ್ಲಿ ಐದುಹತ್ತು ಆನೆಗಳು ರಸ್ತೆಗೆ ಅಡ್ಡಲಾಗಿ ನಿಂತಿದ್ದು ಕಾಣಿಸಿತು. ಇನ್ನು ತಿರುಗಿ ಹೋಗುವುದು ಹೇಗೆ?

ಅಂಜಿಕೆಯಿಂದ ಮೈ ಬೆವತಿತು. ಇನ್ನು ನಮ್ಮ ಮೇಲೆ ಆಕ್ರಮಣವಾಗಲು ತಡವಿಲ್ಲ ಎನಿಸುತ್ತಿತ್ತು. ಜ್ಞಾನಬಹಾದ್ದೂರರು ಗಾಡಿಯನ್ನು ಹೊರಳಿಸಿ ಮತ್ತೊಂದು ದಿಕ್ಕಿನಲ್ಲಿ ಓಡಿಸಿದರು. ಹೀಗೆಯೇ ಮನೆಗೆ ಹೋಗಬಹುದುಎಂದರವರು. ಆದರೆ ಈ ರಸ್ತೆ ಅರಲು, ಮಣ್ಣು, ಕಲ್ಲು, ತಗ್ಗುಗಳಿಂದ ತುಂಬಿತ್ತು. ಬಹು ಪ್ರಯಾಸದಿಂದ ಅರ್ಧ ತಾಸು ಹಾದಿ ಕ್ರಮಿಸಿದಮೇಲೆ ಹೆಬ್ಬಾವು ಕೋಳಿಯನ್ನು ನುಂಗಿದ ತಾಣವನ್ನು ತಲುಪಿದೆವು. ಆದರೆ ನಮ್ಮ ಗಾಬರಿ ಗಡಬಿಡಿಗಳಲ್ಲಿ ಆ ಕಥೆಯನ್ನು ಪೂರ್ತಿ ಮರೆತುಬಿಟ್ಟಿದ್ದೆವು. ಹೆಬ್ಬಾವಿದ್ದ ಗಿಡದ ಬುಡಕ್ಕೆ ಬಂದೊಡನೆ ಅದು ನಮ್ಮ ಜೀಪಿನ ಮೇಲೆ ಜಿಗಿಯಿತು. ಆದರೆ ನಮ್ಮ ಸುದೈವದಿಂದ ಇಂಜಿನ್ನು ಬಹಳ ಬಿಸಿಯಾಗಿದ್ದುದರಿಂದ ಬಾನೆಟ್ಟು ಕಾದ ಕೆಂಡವಾಗಿತ್ತು. ಜಿಗಿದ ಹೆಬ್ಬಾವು ಅದರ ಮೇಲೆಯೆ ಬಿದ್ದಿತ್ತು. ಚರ್-ಚರ್ ಎಂದು ಸಪ್ಪಳವಾಗತೊಡಗಿತು. ಹೆಬ್ಬಾವಿನ ಮಾಂಸ ಬೇಯತೊಡಗಿತು. ಬೆಂದು ಅರ್ಧಮರ್ಧ ಸತ್ತಂತಾದ ಹೆಬ್ಬಾವು ಬಾನೆಟ್ಟಿನಿಂದ ಜಾರಿ ಕೆಳಗುರುಳಿತು. ನೂರಾರು ಪ್ರಾಣಿಗಳನ್ನು ನುಂಗಿದ ಅದರ ಬಾಯಿ ಈಗ ಸುಟ್ಟು ಕಮರಿಹೋಗಿತ್ತು. ಹೆಬ್ಬಾವು ಪ್ರಾಣಸಂಕಟದಿಂದ ಒದ್ದಾಡುತ್ತಿದ್ದಾಗ ನಾವು ಸಿಗರೇಟು ಹೊತ್ತಿಸಿ ಮಾತಾಡುತ್ತಿದ್ದೆವು.

ನಾನು ಕೇಳಿದೆ: "ಬಾನೆಟ್ಟಿನ ಮೇಲೆ ಬೀಳದೆ ಹಾವು ನಮ್ಮ ಮೇಲೆ ಬಿದ್ದಿದ್ದರೆ ಏನಾಗುತ್ತಿತ್ತು?"

"ನಮ್ಮ ಐದು ಜನರಲ್ಲಿ ಒಬ್ಬಾತನ ಕಥೆ ಮುಗಿಯುತ್ತಿತ್ತು." ಶಿವ ಶಂಕರ ಹೇಳಿದರು.

" ಯಾರ ಕಥೆ ಮುಗಿಯುತ್ತಿತ್ತು? "

"ಯಾರ ಆಯುಷ್ಯ ತುಂಬಿ ಬಂದಿತ್ತೊ ಅವರದು "

ನಾವು ಶಿಲಾಂಗಿಗೆ ಮರಳುತ್ತಿದ್ದೆವು. ಕತ್ತಲು ರಾತ್ರಿ, ಗುಡ್ಡಗಾಡು ಹಾದಿ. ತಪ್ಪಲು ಪ್ರದೇಶದಿಂದ ಆಕಾಶದ ಲಕ್ಷಗಟ್ಟಲೆ ನಕ್ಷತ್ರಗಳು ತೀರ ಹತ್ತಿರವಿರುವಂತೆ ಭಾಸವಾಗುತ್ತಿತ್ತು. ಒಂದೆರಡನ್ನು ಹಿಡಿದುಕೊಂಡು ಹೋಗುವುವಾಗಿದ್ದರೆ—ಎಂದು ಮನ ಬಯಸುತ್ತಿತ್ತು. *



# ನಾನು ನೋಡಿದ ಮಲಾಯಾ



**ಕುಂಚದಂತೆ ಇವರು ಲೇಖನಿಯನ್ನೂ ಹಿಡಿಯಬಲ್ಲರು**

ಎ. ಆಲಮೇಲಕರ

ಚಿಕ್ಕಂದಿನಲ್ಲಿ ನಾನು ಸೊಲ್ಲಾಪುರದ ಹರಿಭಾಯಿ ದೇವಕರಣ ಹಾಯಸ್ಕೂಲಿನಲ್ಲಿ ಕಲಿಯುತ್ತಿದ್ದಾಗ ಅಲ್ಲಿಯ ಗೋಡೆಗಳ ಮೇಲಿದ್ದ ಕೆಲವು ಚಿತ್ರಗಳನ್ನು ಕಂಡು ನನಗೆ "ನನಗೇನಾದರೂ ವಿದೇಶ ಪ್ರವಾಸದ ಯೋಗ ಲಭಿಸಿದರೆ ಮೊಟ್ಟ ಮೊದಲು ನಾನು ಮಲಾಯಾದ ಅಡವಿಗಳಿಗೆ ಹೋಗುತ್ತೇನೆ," ಎಂಬ ವಿಚಾರ ಬರುತ್ತಿತ್ತು. ಏಕೆಂದರೆ ಆ ಚಿತ್ರಗಳಲ್ಲಿ ಹೆಚ್ಚಿನವು ಮಲಾಯಾ ಮತ್ತು ದೂರ ಪ್ರಾಚ್ಯದೇಶಗಳಿಗೆ ಸಂಬಂಧಿಸಿದವೇ ಆಗಿದ್ದವು.

ಶಾಲೆ ಬಿಟ್ಟು ಇಪ್ಪತ್ತೈದು ವರ್ಷಗಳ ನಂತರ ನನ್ನೀ ಕನಸು ನನಸಾಗುವ ಸಂದರ್ಭ ಬಂತು. ಇಷ್ಟರೊಳಗಾಗಿ ನಾನು ಭಾರತದ ಸಕಲ ಪ್ರದೇಶಗಳಲ್ಲಿ ಅಡ್ಡಾಡಿ ಅಲ್ಲಿಯ ದೈನಂದಿನ ಜೀವನದ ಬಗ್ಗೆ ನೂರಾರು ಚಿತ್ರಗಳನ್ನು ಬಿಡಿಸಿದ್ದೆ. ಈಗ ಭಾರತದ ಹೊರಗೆ, ಪರನಾಡಿಗೆ ಹೋಗುವ ಸಂಧಿ ನನ್ನನ್ನು ಹುಡುಕಿಕೊಂಡು ಬಂದಿತ್ತು.

ಮಲಾಯಾದ ಪ್ರಧಾನ ಮಂತ್ರಿ ಶ್ರೀ [illegible]ಲ್ ತುಂಗರ ಪ್ರೆಸ್ ಸೆಕ್ರೆಟರಿ ಶ್ರೀ ಫ್ರಾಂಕ್ ಸಾಲ್ವಿನ್‌ರು ಒಳ್ಳೇ ರಸಿಕರೂ ಕಲಾಪ್ರಿಯರೂ ಆದ ವ್ಯಕ್ತಿ. ಅವರ ಬಳಿ ನನ್ನ ಕೆಲ ಚಿತ್ರಗಳಿದ್ದವು. ಅವರು ಅವನ್ನು ಸದಾ ತಮ್ಮ ಮನೆಯ ಗೋಡೆಗಳಿಗೆ ತೂಗ ಹಾಕಿರುತ್ತಾರೆ. ಅವರು ಮಲಾಯಾದಲ್ಲಿರುವ ಭಾರತದ ಹೈ-ಕಮೀಶನರ್ ಶ್ರೀ ವೈ. ಕೆ. ಪುರಿಯವರಿಗೆ "ಮಲಾಯಾ ಫೆಡರೇಶನ್ ಆರ್ಟ್ಸ ಕೌನ್ಸಿಲ್ಲು ಮಲಾಯಾಕ್ಕೆ ಬಂದು ತಮ್ಮ ಚಿತ್ರಗಳ ಪ್ರದ-ರ್ಶನವನ್ನು ಮಾಡಲು ಶ್ರೀ ಆಲಮೇಲಕರರಿಗೆ ಆಮಂತ್ರಣವೀಯಬೇಕೆನ್ನುತ್ತದೆ ಎಂಬ ವಿಚಾರವನ್ನು ಭಾರತ ಸರಕಾರಕ್ಕೆ ದಯವಿಟ್ಟು ತಿಳಿಸಿ" ಎಂದು ಕೇಳಿಕೊಂಡರು.

ನನಗೇನೂ ಇದರ ಗಂಧಗಾಳಿ [illegible] ಒಂದು ದಿನ ಅಕಸ್ಮಾತ್ತಾಗಿ ಭಾರತ [illegible] ಸಂಶೋಧನೆ ಮತ್ತು ಸಾಂಸ್ಕೃತಿಕ ವ್ಯ[illegible] ಗಳ ಮಂತ್ರಿ ಶಾಖೆಯಿಂದ ನನಗೊಂದು ಪತ್ರ ಬಂತು: "ಮಲಾಯಾದಲ್ಲಿ ನಿಮ್ಮ ಚಿತ್ರ ಪ್ರದ-ರ್ಶನವನ್ನು ಮಾಡುವುದು [illegible]

ನಿಮಗೆ ಸರಕಾರದಿಂದ ಏರ್ ಇಂಡಿಯ ಇಂಟರ್ ನ್ಯಾಶನಲ್ ವಿಮಾನದಲ್ಲಿ ಹೋಗಿ ಬರುವ ವೆಚ್ಚವನ್ನು ಕೊಡಲಾಗುವುದು."

ಓದಿ ನನ್ನ ಆನಂದಕ್ಕೆ ಮೇರೆಯುಳಿಯಲಿಲ್ಲ. ಪತ್ರವನ್ನು ಎದೆಗವಚಿಕೊಂಡು ಕುಣಿದಾಡಿದೆ. ಸಂಗತಿಯೇನೆಂದು ತಿಳಿಯದ ನನ್ನ ಹೆಂಡತಿಗೆ ಈ ಕುಣಿತ ಮರ್ಕಟ ಚೇಷ್ಟೆಯೆಂದೆನಿಸಿದ್ದರಲ್ಲೇನೂ ಆಶ್ಚರ್ಯವಿಲ್ಲ. ನಾನವಳಿಗೆ ಆ ಪತ್ರವನ್ನು ಓದಲು ಕೊಟ್ಟೆ. ಓದಿ ಅವಳಿಗೆ ಆನಂದ, ದುಃಖಗಳೆರಡೂ ಏಕಕಾಲದಲ್ಲಿ ಉಂಟಾದವು. ಗಂಡ ಪರದೇಶಕ್ಕೆ ಹೋಗುತ್ತಾನೆಂದು ಸಂತೋಷವಾದರೆ ಕೆಲ ತಿಂಗಳ ಮಟ್ಟಿಗೆ ತನ್ನಿಂದ ದೂರವಾಗುತ್ತಾನಲ್ಲ ಎಂದು ದುಃಖವಾಗಿತ್ತು. ಅವಳ ಕಂಗಳಲ್ಲಿ ಆನಂದ ಮಿಶ್ರಿತ ದುಃಖಾಶ್ರುಗಳನ್ನು ಕಂಡೆ. ವಿದೇಶ ಪ್ರವಾಸದ ಸಿದ್ಧತೆಗೆ ತೊಡಗಿದೆ.

೧೯೬೧ ಅಕ್ಟೋಬರ ೧೮ ರಂದು ಮುಂಜಾನೆ ಸಾಂತಾಕ್ರುಝ್ ವಿಮಾನ ನಿಲ್ದಾಣದಿಂದ ಕಲಕತ್ತಾ ಬಾಂಕಾಕ್ ಮಾರ್ಗವಾಗಿ ಕೌಲಾಲಂಪುರಕ್ಕೆ ಹೊರಟೆ.

ಪ್ರದರ್ಶನ ಕೌಲಾಲಂಪುರದಲ್ಲಿ ಜರುಗಲಿತ್ತು. ಅದಕ್ಕಿನ್ನೂ ತುಸು ಅವಧಿಯಿದ್ದಿತಾದ್ದರಿಂದ ಮಲಾಯಾ ನೋಡಲು ಹೊರಟೆ. ಮೊದಲಿಗೆ ಜಾರ್ಜ್‌ಟೌನ್ ಅಥವಾ ಪಿನಾಂಗ್ ಎಂಬ ಮಲಾಯಾದ ಅತ್ಯಂತ ಸುಂದರ ನಡುಗಡ್ಡೆಗೆ ಹೋದೆ.

ಪಿನಾಂಗ ಮುಕ್ತ ಬಂದರ. ಮೂರು ಲಕ್ಷ ಜನವಸತಿಯ ಪಟ್ಟಣ. ಈ ಜನರಲ್ಲಿ ಚೀನಿ, ಮಲಾಯನ್, ದಕ್ಷಿಣ ಭಾರತೀಯರು, ಪಂಜಾಬಿ, ಶೀಖ ಮುಂತಾದ ನಾನಾ ಜನರಿದ್ದಾರೆ. ಸುಂದರವೂ ಸ್ವಚ್ಛವೂ ಆದ ಈ ನಗರಕ್ಕೆ ಇಂಗ್ಲೀಷರು, "ಹೇವನ್ ಆಫ್ ದಿ ಈಸ್ಟ್" (ಪೂರ್ವದ ಸ್ವರ್ಗ) ಎಂದು ಕರೆಯುತ್ತಿರುವುದು ಯಥಾರ್ಥವೇ ಆಗಿದೆ.

ಪಿನಾಂಗಿನ ಸಮುದ್ರತೀರ ಸುಂದರವಾಗಿದೆ. ಇಲ್ಲಿ ಸೂರ್ಯಸ್ನಾನ ಮತ್ತು ಸಮುದ್ರ ಸ್ನಾನ ಮಾಡಲೆಂದು ಶೋಕಿ ಯುರೋಪಿಯನ್ನರು ಯುರೋಪದಿಂದ ಬರುತ್ತಾರೆ. ತಮ್ಮ ರಜಾ ದಿನಗಳನ್ನು ಸಂತಸದಿಂದ ಕಳೆಯುತ್ತಾರೆ.

ಇಲ್ಲಿ ದೊಡ್ಡದೊಂದು ಬುದ್ಧ ಪಗೋಡಾ ಇದೆ. 'ಆಯರ ಇತರಾಮ' ಎಂಬ ಹೆಸರಿನ ಇದು ತುಂಬಾ ಪ್ರಸಿದ್ಧವಾಗಿದೆ. ಇದರ ಮೇಲಿನ ಮಂದಿರ ಮತ್ತು ಪಾವಟಿಗೆಗಳನ್ನು ಕಂಡರೆ ಪುಣೆಯ ಪರ್ವತಿಯ ನೆನಪು ಬರುತ್ತದೆ.

ಇಲ್ಲೊಂದು ಪಿಯಾಂಗ್ ಹಿಲ್ ಎಂಬುದಿದೆ. ಎರಡು ಸಾವಿರ ಅಡಿ ಎತ್ತರವನ್ನು ಏರಿಹೋಗಲು ಒಂದೇ ಕಂಬಿಯ ಮೇಲೆ ಚಲಿಸುವ ಗಾಡಿಯಿದೆ. ಈ ಗಾಡಿಯನ್ನು ಒಂದು ಸರಪಳಿಯಿಂದ ಎರಡು ಡಬ್ಬಿಗಳಿಗೆ ಕಟ್ಟಿದ್ದಾರೆ. ಒಂದು ಡಬ್ಬಿ ಮೇಲೆ ಇನ್ನೊಂದು ಕೆಳಗೆ ಇರುತ್ತದೆ. ಎರಡೂ ಡಬ್ಬಿಗಳಲ್ಲಿ ಪ್ರಯಾಣಿಕರು ತುಂಬಿದ ಕೂಡಲೆ ಒಂದು ಗುಂಡಿ ಒತ್ತುತ್ತಾರೆ. ಆಗ ಕೆಳಗಿನ ಡಬ್ಬಿ ಮೇಲಕ್ಕೆ ಹೋಗುತ್ತದೆ, ಮೇಲಿನ ಡಬ್ಬಿ ಕೆಳಗೆ ಬರುತ್ತದೆ. ಕೆಲವೇ ಮಿನಿಟುಗಳ ಪ್ರವಾಸ ತುಂಬಾ ಆಹ್ಲಾದದಾಯಕವಾಗುತ್ತದೆ. ಗುಡ್ಡದ ಮೇಲಿಂದ ಇಡೀ ಪಿನಾಂಗ್ ನಗರದ ಸುಂದರ ದೃಶ್ಯ ಕಾಣಿಸುತ್ತದೆ.

ಪಿನಾಂಗಿನಲ್ಲಿ ರಸ್ತೆಗಳ ಮೇಲಿನ ಸ್ವಚ್ಛತೆಯ ಬಗ್ಗೆ ಅತ್ಯಂತ ದಕ್ಷತೆ ವಹಿಸುತ್ತಾರೆ. ಎಲ್ಲಿಯೂ ನಿಮಗೆ ಕಸಕಡ್ಡಿ, ಕಾಗದದ ಚೂರು ಹಣ್ಣಿನ ಸಿಪ್ಪೆ ಕಾಣಸಿಗದು. ಯಾರಾದರೂ ಅಪ್ಪಿತಪ್ಪಿ ರಸ್ತೆಯ ಮೇಲೆ ಏನಾದರೂ ಚೆಲ್ಲಿದರೆ ತತ್‌ಕ್ಷಣ ಅಲ್ಲಿಯ ಪೋಲೀಸ ಅವನಿಗೆ ದಂಡ ವಿಧಿಸುತ್ತಾನೆ. ಇಲ್ಲಿಯ ಕೆಲವು ರಸ್ತೆಗಳ ಮೇಲೆ ರಬ್ಬರಿನ ಪೌಡರ್ ಕೂಡ ಹಾಕಿರುತ್ತಾರೆ. ಇಡೀ ಏಶಿಯ ಖಂಡದಲ್ಲಿ ಮಲಾಯಾದ ರಸ್ತೆಗಳು ಸುಂದರವಾದವು ಎಂಬ ಖ್ಯಾತಿಯಿದೆ.

ಮಲಾಯಾದ ಜನರ ಜೀವನಮಟ್ಟ ತುಂಬಾ ಉಚ್ಚವಾದದ್ದು. ಮಧ್ಯಮ ವರ್ಗದ ಜನ ತೀರ ಕಡಿಮೆ. ಇಲ್ಲಿ ಪ್ರಾಮುಖ್ಯವಾಗಿ ಶ್ರೀಮಂತರು ಮತ್ತು ಕೂಲಿಕಾರರು ಎಂಬ ಎರಡೇ ವರ್ಗಗಳಿವೆ. ಇದ್ದಬಿದ್ದ ಮಧ್ಯಮ ವರ್ಗದವರು ನಮ್ಮಲ್ಲಿಯ ಶ್ರೀಮಂತರಿಗಿಂತಲೂ ಕಡಿಮೆ ದರ್ಜೆಯವರೇನಲ್ಲ.

ಪಿನಾಂಗಿನಲ್ಲಿ ಬ್ರಿಟಿಶ್ ಕೌನ್ಸಿಲರ್ ಆಗಿರುವ

ನನ್ನ ಮಿತ್ರ ಶ್ರೀರಾಮ ಮೆಂಡಿಯವರು ತಮ್ಮ ಆಫೀಸಿನ ಒಬ್ಬ ನೌಕರನಿಗೆ ಮೋಟಾರಿನಲ್ಲಿ ಶ್ರೀ ಆಲಮೇಲಕರರನ್ನು ಒಂದಿಷ್ಟು ನಗರದಲ್ಲಿ ಸುತ್ತಾಡಿಸಿಕೊಂಡು ಬಾ ಎಂದು ಹೇಳಿದರು.

ಅದರಂತೆ ಆ ನೌಕರ ಪ್ರತಿನಿತ್ಯ ಸಂಜೆ ಮೂವತ್ತು ನಲವತ್ತು ಮೈಲು ನನ್ನನ್ನು ಸುತ್ತಾಡಿಸಿಕೊಂಡು ಬರಹತ್ತಿದ. ಮೂರು ನಾಲ್ಕು ದಿನಗಳ ನಂತರ ನಾನೆಂದೆ: "ಏನಪ್ಪಾ, ನಿತ್ಯವೂ ಹೀಗೆ ಪೆಟ್ರೋಲ್ ಸುಟ್ಟರೆ ನಿನ್ನ ಸಾಹೇಬರು ಬೇಗಲಿಕ್ಕಿಲ್ಲವೆ?"

ಆಗ ಆತ ಹೇಳಿದ: "ಪ್ರಿಯ ಆಲಮೇಲಕರ್, ಇದು ನನ್ನ ಮೋಟರ್. ನನ್ನ ಸ್ವಂತ ಮೋಟರಿನಲ್ಲಿಯೇ ನಿಮ್ಮನ್ನು ಅಡ್ಡಾಡಿಸುತ್ತಿದ್ದೇನೆ. ನೀವು ಭಾರತೀಯರು. ನಾನೂ ಭಾರತೀಯನೇ. ನನ್ನಿಂದೇನಾದರೂ ನಿಮ್ಮ ಸೇವೆ ಆಗಬೇಕೆಂದೇ ನಿಮ್ಮನ್ನು ನಿತ್ಯವೂ ಅಡ್ಡಾಡಿಸಿಕೊಂಡು ಬರುತ್ತಿದ್ದೇನೆ."

ನಾನು ಅವಾಕ್ಕಾದೆ. "ನಿನಗೆಷ್ಟು ಸಂಬಳ ಸಿಗುತ್ತದೆ?" ಎಂದು ಕೇಳಿದೆ.

ಆತ ನಕ್ಕು ನುಡಿದ "ಹೆಚ್ಚೇನಿಲ್ಲ. ಮೂರು ನೂರು ಮಲಾಯನ್ ಡಾಲರು (೪೫೦ ರೂಪಾಯಿ) ನಾವು ಏಳು ಜನ ಅಣ್ಣ ತಮ್ಮಂದಿರಿದ್ದೇವೆ. ಎಲ್ಲರೂ ದುಡಿಯುತ್ತೇವೆ. ಎಲ್ಲರದು ಸೇರಿದರೆ ತಿಂಗಳ ಎರಡು ಮೂರುಸಾವಿರ ರೂಪಾಯಿಗಳಾಗುತ್ತವೆ."

ಇಷ್ಟೆಂದವನೆ ಆತ ಮೋಟಾರನ್ನು ತನ್ನ ಮನೆಯ ಕಡೆ ತಿರುಗಿಸಿದ. ತುಸು ಹೊತ್ತಿನಲ್ಲಿ ಒಂದು ಸುಂದರವಾದ ತೋಟದಲ್ಲಿ ನಮ್ಮ ಮೋಟರು ಹೊಕ್ಕಿತು. ಅಲ್ಲಿದ್ದ ಸುಂದರ ಬಂಗಲೆಯೆ ಈ ನೌಕರನ ಮನೆ. ಮನೆಯೊಳಗಿನ ಸುಂದರ ಫರ್ನಿಚರ್, ರೇಡಿಯೊ, ವಿದ್ಯುತ್ ಬೀಸಣಿಕೆ, ರೆಫ್ರಿಜೇಟರ್ ಎಲ್ಲವನ್ನೂ ಕಂಡು ದಂಗಾದೆ.

ಚಹಾಪಾನದ ನಂತರ "ಈ ಎಲ್ಲ ತುಟ್ಟಿ ಸಾಮಾನುಗಳನ್ನು ಹೇಗೆ ಕೊಳ್ಳುತ್ತೀರಿ?" ಎಂದು ಕೇಳಿದೆ.

"ಪಿನಾಂಗ್ ಮುಕ್ತ ಬಂದರ. ಯಾವ ಸಾಮಾನಿನ ಮೇಲೂ ಕರವಿಲ್ಲ. ಸಾಮಾನುಗಳು ಅಗ್ಗವಾಗಿ ಸಿಗುತ್ತವೆ ಮಾತ್ರವಲ್ಲ, ಕಂಪನಿಯವರೇ ತಂದು ಮನೆಯಲ್ಲಿ ಜೋಡಿಸಿ ಕೊಡುತ್ತಾರೆ. ಕಂತಿನಿಂದ ಹಣ ಮುಟ್ಟಿಸುತ್ತೇವೆ."

ಪಿನಾಂಗಿನಿಂದ ಇಪೋಕ್ಕೆ ತೆರಳಿದೆ. ಇಪೋ ಶಹರ ರಬ್ಬರಿನ ವ್ಯಾಪಾರಕ್ಕೆ ಪ್ರಸಿದ್ಧವಾಗಿದೆ. ವರ್ಷಂಪ್ರತಿ ಕೋಟ್ಯವಧಿ ಡಾಲರುಗಳ ರಬ್ಬರಿನ ವ್ಯಾಪಾರ ಇಲ್ಲಿ ನಡೆಯುತ್ತದೆ. ಶಹರ ಸಣ್ಣದೆಂದೇ ಹೇಳಬಹುದಾದರೂ ಪೇಟೆ ದೊಡ್ಡದು. ವ್ಯಾಪಾರವೆಲ್ಲ ಹೆಚ್ಚು ಕಡಿಮೆ ಚೀನಿಯರ ಕೈಲಿದೆ.

ಇಪೋ ತಲುಪುವ ಮೊದಲೊಂದು ಮೋಜಿನ ಸಂಗತಿ ಹಾದಿಯಲ್ಲಿ ನಡೆಯಿತು.

ಮಲಾಯಾ ಪ್ರವೇಶಿಸುವ ಮೊದಲು ಪೋಲೀಸ್ ತಪಾಸಣೆ ನಡೆಸಿ ಪಿನಾಂಗಿನಲ್ಲಿ ಕೊಂಡ ಹೊಸ ವಸ್ತುಗಳ ಮೇಲೆ ಸುಂಕ ವಸೂಲು ಮಾಡುತ್ತಾರೆ. ಸುಂಕದ ಕಟ್ಟೆಯಲ್ಲಿ ನನ್ನ ಬ್ಯಾಗನ್ನು ತಪಾಸಿಸಿದ ಪೋಲೀಸ್ "ನೀವು ಒಬ್ಬರೇ ಪ್ರವಾಸ ಮಾಡುತ್ತಿದ್ದೀರಿ. ಆದರೆ ಬ್ಯಾಗಿನಲ್ಲಿ ಹೆಂಗಸರ ಬಟ್ಟೆಗಳು ತುಂಬಿವೆಯಲ್ಲ? ಅವೆಲ್ಲವೂ ಹೊಸವು. ಮೂರು ಡಾಲರು ಸುಂಕ ಕೊಡಿ," ಎಂದ.

ಹೆಂಗಸರ ಬಟ್ಟೆ ಎಂದೊಡನೆ ಆಶ್ಚರ್ಯವಾಯಿತು ನನಗೆ. "ಅಯ್ಯೊ, ಇವೆಲ್ಲ ನನ್ನವು" ಎಂದೆ. ಆತ ನಗತೊಡಗಿದ. ನಾನು ತೊಡುವ ಕುರ್ತಾ ಪಾಯಜಾಮಾದಂಥ ಕುರ್ತಾಪಾಯಜಾಮುಗಳನ್ನು ಮಲಾಯಾದಲ್ಲಿ ಸ್ತ್ರೀಯರು ತೊಡುತ್ತಾರೆ. ಆತ ಈ ಸತ್ಯವನ್ನು ಅಲ್ಲಿ ಅಡ್ಡಾಡುತ್ತಿದ್ದ ಸ್ತ್ರೀಯರನ್ನು ತೋರಿಸಿ ನನಗೆ ತಿಳಿಸಿದ. ಅದನ್ನು ನೋಡಿ ನನಗೂ ನಗು ಬಂತು. ಕಡೆಗೂ ಆ ಪೋಲೀಸ್ ಮೂರು ಡಾಲರು ವಸೂಲು ಮಾಡದೆ ಬಿಡಲಿಲ್ಲ.

ಇಪೋದಲ್ಲಿ ರೋಟರಿ ಕ್ಲಬ್ಬಿನವರು ನನ್ನನ್ನು ಸತ್ಕರಿಸಿದರು.

ಇಪೋದಲ್ಲಿ ಪ್ರತಿಯೊಂದು ಕಟ್ಟಡಕ್ಕೂ ಬಣ್ಣ ಬಳಿದು ಚಂದ ಕಾಣುವಂತೆ ಮಾಡಿದ್ದರು. "ಇದೇನು, ಎಲ್ಲ ಮನೆಗಳೂ ಹೊಸತಾಗಿ ಕಟ್ಟಿರುವಂತೆ ಹೊಳೆಯುತ್ತಿವೆಯಲ್ಲ!" ಎಂದು ಚೀನಿ



ಮಿತ್ರನೊಬ್ಬನೊಡನೆ ಹೇಳಿದೆ. ಆತ, "ಪ್ರತಿಯೊಬ್ಬರೂ ಮನೆಗೆ ಸುಣ್ಣ ಬಣ್ಣ ಹಚ್ಚಿಸಬೇಕೆಂದು ನಗರ ಸಭೆ ಆಜ್ಞೆ ಮಾಡುತ್ತದೆ. ವರ್ಷ ಮುಗಿಯುವುದರೊಳಗಾಗಿ ಹಾಗೆ ಮಾಡಿಸದವರು ದಂಡ ಕೊಡಬೇಕಾಗುತ್ತದೆ" ಎಂದ. ವ್ಹಾ! ಎಂಥ ಒಳ್ಳೆಯ ವ್ಯವಸ್ಥೆ! ಹನಿ ಹನಿ ಮಳೆ ಬೀಳುತ್ತಲಿತ್ತು. ರಬ್ಬರ್ ರಸ್ತೆಯ ಕನ್ನಡಿಯಲ್ಲಿ ಇಪೋ ನಗರದ ಪ್ರತಿಬಿಂಬ ಕಾಣಿಸುತ್ತಿತ್ತು.

ಇಪೋದಿಂದ ಎರಡು ಮೈಲು ದೂರದಲ್ಲಿರುವ ಗುಡ್ಡಗಳಲ್ಲಿ ಎರಡು ಸುಂದರವಾದ ಬೌದ್ಧ ಗುಹೆಗಳಿವೆ. 'ಬಾಟುಗವಿ'ಯ ಗೋಡೆಗಳ ಮೇಲೆ ತುಂಬಾ ಚಿತ್ರಗಳಿವೆ. ಇದನ್ನು ಸಂದರ್ಶಿಸುವ ಪ್ರತಿಯೊಬ್ಬ ಚಿತ್ರಕಾರನಿಗೂ "ನಿಮ್ಮದೊಂದು ಸುಂದರ ಚಿತ್ರವನ್ನು ಇಲ್ಲಿ ಬಿಡಿಸಿ" ಎಂದು ವಿನಂತಿ ಮಾಡಿಕೊಳ್ಳುತ್ತಾರೆ. ಇಲ್ಲಿ ನಾನು ಪ್ರಸಿದ್ಧ ಚೀನೀ ಮತ್ತು ಜಪಾನಿ ಚಿತ್ರಕಾರರ ಚಿತ್ರಗಳನ್ನು ನೋಡಿದೆ. ಬಣ್ಣ-ಕುಂಚಗಳನ್ನು ಹಿಡಿದು ನಾನೂ ಹದಿನೈದು ಅಡಿ ಎತ್ತರ ಎಂಟಡಿ ಅಗಲದ ಬುದ್ಧ ಮೂರ್ತಿಯನ್ನು ಬಿಡಿಸಿ ನನ್ನ ಅಂಕಿತ ಹಾಕಿದೆ.

ನನ್ನ ಆ ಚಿತ್ರವನ್ನು ಕಂಡು ಗವಿಯ ವ್ಯವಸ್ಥಾಪಕರು ಬಹಳ ಸಂತೋಷಗೊಂಡು, "ಭಾರತೀಯನೊಬ್ಬ ಇಲ್ಲಿ ಚಿತ್ರ ಬಿಡಿಸಿದ್ದು ಇದೇ ಮೊದಲು. ನಿಮ್ಮ ಚಿತ್ರ ಇಲ್ಲಿರುವವರೆಗೂ ನಿಮ್ಮ ನೆನಪು ನಮಗುಳಿಯುತ್ತದೆ" ಎಂದರು.

ಪ್ರವಾಸಿ ಚಿತ್ರಕಾರರಿಂದ ಈ ರೀತಿ ಚಿತ್ರ ಬರೆಯಿಸಿಕೊಳ್ಳುವ ಕಲ್ಪನೆ ನನಗೆ ಬಲು ಆಕರ್ಷಕವೆನಿಸಿತು.

ನಾನು ನಿಜವಾದ ಮಲಾಯನ್ ಜೀವನವನ್ನು ಕಂಡದ್ದು ಪನಕೋರ್‌ನಲ್ಲಿ. ಚಿಕ್ಕದೊಂದು ಬಂದರವಾದ ಫಿಶಿಂಗ್ ಆಯ್ಲೆಂಡ್‌ಗೆ (ಮೀನು ಹಿಡಿಯುವ ದ್ವೀಪ) ಮೋಟಾರಿನಲ್ಲಿ ಹೋದೆ. ಕೆಲವರು ಇದನ್ನು ಪಿಕ್‌ನಿಕ್ ಆಯ್ಲೆಂಡ್ (ವನಭೋಜನ ದ್ವೀಪ) ಎಂದೂ ಕರೆಯುತ್ತಾರೆ. ರಜಾ ದಿನಗಳಲ್ಲಿ ವಿದ್ಯಾರ್ಥಿ ವಿದ್ಯಾರ್ಥಿನಿಯರು ಇಲ್ಲಿ ದೊಡ್ಡ ಸಂಖ್ಯೆಯಲ್ಲಿ ಬರುತ್ತಾರೆ. ಮೀನುಗಾರಿಕೆ ಇಲ್ಲಿಯ ಮುಖ್ಯ ಉದ್ಯೋಗ. ಚೀನಿ ಮತ್ತು ಮಲಾಯಾ ಮೀನುಗಾರರನ್ನೂ ಮೀನು ಹಿಡಿಯುವ ಅವರ ವಿವಿಧ ರೀತಿಗಳನ್ನೂ ಕಂಡೆ.

ಚೀನೀ ಮೀನುಗಾರರ ಬಲೆ ಮೈಲುದ್ದವಾಗಿರುತ್ತದೆ. ಆದರೆ ಮಲಾಯನ್ ಮೀನುಗಾರರು ಬಿದಿರಿನಿಂದ ತಯಾರಿಸಿದ ಚಿಕ್ಕ ಬಲೆಗಳಿಂದ ಮೀನು ಹಿಡಿಯುತ್ತಾರೆ. ಚೀನೀಯರು ತಮ್ಮ ಮನೆಗಳನ್ನು ಕಟ್ಟಿಗೆಗಳಿಂದ ಕಟ್ಟುತ್ತಾರೆ. ಮಲಾಯನ್ನರು ಬಿದಿರು, ತಾಳೆಗರಿಗಳಿಂದ ತಮ್ಮ ಮನೆಗಳನ್ನು ಕಟ್ಟುತ್ತಾರೆ. ನೆಲದಲ್ಲಿ ಐದು ಹತ್ತು ಅಡಿ ಎತ್ತರದ ಕಂಬಗಳನ್ನು ಹುಗಿದು ಅವುಗಳ ಮೇಲೆ ಮನೆಗಳನ್ನು ಕಟ್ಟುತ್ತಾರೆ. ಈ ಮನೆಗಳು ಸುಂದರವಾಗಿರುತ್ತವೆ.

ಒಬ್ಬ ಚೀನೀ ಮೀನುಗಾರನ ಸ್ನೇಹ ಮಾಡಿಕೊಂಡು ಐದಾರು ದಿನ ಅವನ ಮನೆಯಲ್ಲಿ ಇದ್ದೆ. ಈತನ ಕುಟುಂಬ ಬಲು ಸುಖಿಯಾಗಿತ್ತು. ಮನೆಯವರೆಲ್ಲರೂ ಮೀನುಹಿಡಿಯುವ ಮಾರುವ ಉದ್ಯೋಗ ಮಾಡುತ್ತಾರೆ. ನಿತ್ಯವೂ ಊಟಕ್ಕೆ ಮೀನು, ಕೋಳಿ, ತತ್ತಿ, ಅನ್ನ ಇರುತ್ತಿತ್ತು. ಚೀನೀ ಜನರಿಗೆ ಒಂದು ದಿನವಾದರೂ ಹಂದಿಯ ಮಾಂಸವಿಲ್ಲದೆ ನಡೆಯುವುದಿಲ್ಲ. ಆದರೆ ನನಗಾಗಿ ಅವರು ನಾನಿರುವವರೆಗೂ ಅದನ್ನು ಮುಟ್ಟಲಿಲ್ಲ.

ಇಲ್ಲಿ ಪ್ರತಿಯೊಬ್ಬ ಮೀನುಗಾರನ ಮನೆಯಲ್ಲೂ ಇಲೆಕ್ಟ್ರಿಕ್ ಮಶಿನ್, ಬರ್ಫ ತಯಾರಿಸುವ ಮಶಿನ್, ರೆಫ್ರಿಜಿರೇಟರ್, ಮೀನು ಹಿಡಿಯುವ ಆಧುನಿಕ ಸಾಧನ ಸಾಮಗ್ರಿಗಳಿರುವ ದೋಣಿ ಇವೆಲ್ಲ ಇರುತ್ತವೆ.

ಒಂದು ದಿನ ಮಶೀದೆಯ ನೀರಿನ ಟಾಕಿಯ ಹತ್ತಿರ ಮಲಾಯನ್ ಮುಸ್ಲಿಂ ಮಹಿಳೆಯೊಬ್ಬಳನ್ನು ಕಂಡೆ. ಆಶ್ಚರ್ಯಚಕಿತನಾದೆ. ಆ ಹೆಂಗಸು ತನ್ನ ಎದೆಯ ಮೇಲೆ ಯಾವ ವಸ್ತ್ರವನ್ನೂ ತೊಟ್ಟಿರಲಿಲ್ಲ. ಈ ರೀತಿಯಾಗಿ ತೆರೆದ ಎದೆಯಿಂದ ಯಾವಳಾದರೂ ಮುಸ್ಲಿಂ ಸ್ತ್ರೀ ಮಶೀದೆಯ ಆವಾರದಲ್ಲಿ ಬಂದರೆ ನಮ್ಮ ಕಡೆಯ ಮೌಲ್ವಿಗಳು ಅವಳಿಗೆ ಕಠಿಣ ಶಿಕ್ಷೆಯನ್ನು ವಿಧಿಸಿಯಾರು.

ಮಲಾಯಾದಲ್ಲಿ ಧರ್ಮ ಬಂಧನಗಳು ಬಿಗಿಯಾಗಿಲ್ಲ. ಮಲಾಯನ್ನರು ಮುಸ್ಲಿಮರಾದರೂ ನಮ್ಮಲ್ಲಿಯ ಮುಸ್ಲಿಮರಂತೆ ಅವರ ಜೀವನವಿಲ್ಲ. ಇಲ್ಲಿ ಹೆಂಗಸು ಕೂಡ ಒಂದೇ ಒಂದು ಲುಂಗಿ ಉಟ್ಟುಕೊಂಡು ಸಮಾಜದಲ್ಲಿ ಅಡ್ಡಾಡಬಲ್ಲಳು. ಘೋಷಾ ಪದ್ಧತಿ ಇಲ್ಲ. ಸ್ತ್ರೀಯರ ಉಡುಪೆಂದರೆ ಲುಂಗಿ ಮತ್ತು ಕುರ್ತಾ. ಪುರುಷರ ಉಡುಪು ಒಂದು ಲುಂಗಿ ಮತ್ತು ಗಂಜಿ ಫ್ರಾಕ್. ಪ್ರತಿಯೊಬ್ಬರ ಮನೆಯಲ್ಲೂ ನಿತ್ಯ ಕುರಾಣ ಪಠನ ನಡೆಯುತ್ತದೆ.

ಪನಕೋರಿನಲ್ಲಿ ಮುಸಲ್ಮಾನರ ಲಗ್ನವೊಂದನ್ನು ನೋಡಿದೆ. ನಮ್ಮಲ್ಲಿಯ ಮುಸ್ಲಿಮರ ಪದ್ಧತಿಯಂತೆಯೆ ಲಗ್ನ ನಡೆಯಿತು. ಆದರೆ ವರ ವಧುವನ್ನು ತನ್ನ ಮನೆಗೆ ಕರೆದೊಯ್ಯುವ ಬದಲು ತಾನೇ ಮಾವನ ಮನೆಯಲ್ಲಿ ಉಳಿದ!

ವ್ಯಾಪಾರ, ಕೊಡಕೊಳ್ಳುವಿಕೆ ಇತ್ಯಾದಿ ವ್ಯವಹಾರಗಳನ್ನೆಲ್ಲ ಇಲ್ಲಿ ಸ್ತ್ರೀಯರೇ ಮಾಡುತ್ತಾರೆ. ಮನೆಗೆಲಸ, ಮಕ್ಕಳ ಆರೈಕೆ ಮುಂತಾದವುಗಳನ್ನು ಗಂಡಸರು ಮಾಡುತ್ತಾರೆ.

ಅಲ್ಲಿಂದ ಕೌಲಾಲಂಪುರಕ್ಕೆ ಬಂದೆ. ಇಲ್ಲಿ ಭಾರತದ ಹೈಕಮೀಶನರ್ ಕಚೇರಿಯವರು ನನಗಾಗಿ ಸುಂದರ ಹೊಟೆಲ್ಲೊಂದರಲ್ಲಿ ವಸತಿ ಭೋಜನಗಳ ಏರ್ಪಾಡು ಮಾಡಿದ್ದರು. ೧೯೬೧ ನವೆಂಬರ್ ೧೩ ರಿಂದ ೧೮ ರ ವರೆಗೆ ಇಲ್ಲಿಯ



ಬ್ರಿಟಿಶ್ ಕೌನ್ಸಿಲ್ ಕಲ್ಚರಲ್ ಸೆಂಟರನಲ್ಲಿ ನನ್ನ ಚಿತ್ರ ಪ್ರದರ್ಶನ ನಡೆಯಲಿತ್ತು. ಪ್ರದರ್ಶನ ಯಶಸ್ವಿಯಾಯಿತು. ನನ್ನ ಚಿತ್ರಗಳೂ ಮಾರಾಟವಾದವು.

ಇಲ್ಲಿಯ ಮಲಾಯನ್ ವಿದ್ಯಾಪೀಠವನ್ನು ನೋಡಿದೆ. ಪ್ರೊಫೆಸರರ ಮನೆಗಳು ವಿದ್ಯಾಪೀಠದ ಕಂಪೌಂಡಿನಲ್ಲಿಯೆ ಇವೆ. ಹುಡುಗರು, ಹುಡುಗಿಯರಿಗೆ ಪ್ರತ್ಯೇಕ ವಸತಿಗೃಹವಿರದೆ ಒಂದೇ ಇದೆ. ವಿಜ್ಞಾನ, ಸಾಹಿತ್ಯ, ವೈದ್ಯಕೀಯ ಶಾಸ್ತ್ರ ಸ್ಥಾಪತ್ಯಶಾಸ್ತ್ರ ಮುಂತಾದ ಅನೇಕ ಶಾಸ್ತ್ರಗಳ ಶಿಕ್ಷಣ ಕೊಡಲ್ಪಡುತ್ತಿದೆ. ಇಲ್ಲಿಯ ಪ್ರೊಫೆಸರರಿಗೆ ತಿಂಗಳ ೨೫೦೦-೩೦೦೦ ರೂಪಾಯಿ ಸಂಬಳ ಸಿಗುವುದಾದರೂ ಅವರು ಉಳಿಸಿಕೊಳ್ಳುವುದು ತೀರ ಕಡಿಮೆ. ಕಾಲೇಜು ಬಿಟ್ಟನಂತರ, ಇಸ್ಪೀಟು, ಕುಣಿತ, ಜುಗಾರಿಗಳಲ್ಲಿ ಹೊತ್ತು ಕಳೆಯದವ ತೀರ ವಿರಳ.

ಟನ್ನಿನ ಗಣಿಗಳಿಗಾಗಿ ಪ್ರಸಿದ್ಧವಾಗಿರುವ ಕೌಲಾಲಂಪುರದಲ್ಲಿ ಎತ್ತ ನೋಡಿದತ್ತ ಗಣಿಗಳೇ ಗಣಿಗಳು, ನೀರೇ ನೀರು.

ಕೌಲಾಲಂಪುರ ಬಿಡುವಾಗ ಅಲ್ಲಿಯ ಚಿತ್ರಕಾರರು ಮತ್ತು ಫೆಡರೇಶನ್ ಆಫ್ ಮಲಾಯಾ ಆರ್ಟ್ ಕೌನ್ಸಿಲ್ಲಿನವರು ಶ್ರೀ ಫ್ರಾಂಕ್ ಸಾಲ್ಮನ್ನರ ಮನೆಯಲ್ಲಿ ನನ್ನನ್ನು ಸತ್ಕರಿಸಿದರು.

ಆಮೇಲೆ ಮಲಾಯಾದ ಹಳೆಯ ರಾಜಧಾನಿಯೂ ಅತ್ಯಂತ ಪ್ರಾಚೀನ ನಗರವೂ ಆದ

ಮಲಾಕಾಕ್ಕೆ ಹೋದೆ. ಇಲ್ಲಿಯ ಹಳೆಯ ವಸ್ತು ಸಂಗ್ರಹಾಲಯ ನೋಡತಕ್ಕಂಥದು.

ಸೇರೆಬಾನ ನಗರದಲ್ಲೆಲ್ಲ ದೊಡ್ಡ ದೊಡ್ಡ ಗಿಡಗಳ ತೋಟಗಳು ತುಂಬಿವೆ. ಇಲ್ಲಿ ಒಂದು ಚೀನೀ ಚಿತ್ರಶಾಲೆ ಮತ್ತು ೪೦೦ ವರ್ಷಗಳ ಮಲಾಯನ್ ಮನೆಯೊಂದನ್ನು ಇದ್ದಕ್ಕಿದ್ದಂತೆ ಕಾಯ್ದಿರಿಸಿದ್ದು ಅವು ನೋಡುವಂಥವಾಗಿವೆ.

ಸಿಂಗಾಪುರಕ್ಕೆ ಹೋಗುವಾಗ ಜುವಾರ ನಗರದ ಮುಂದೆ ವಸಯಿ ಆಖಾತದಂಥ ಒಂದು ಸಣ್ಣ ಆಖಾತವನ್ನು ದಾಟಬೇಕಾಗುತ್ತದೆ. ಇದರ ಮೇಲೆ ಕಬ್ಬಿಣದ ಸೇತುವೆಯಿದೆ. ಅರ್ಧ ಸೇತುವೆಯ ಮೇಲೆ 'ಮಲಾಯಾ ರಾಜ್ಯ' ಎಂದು ಬರೆದಿದೆ. ಉಳಿದರ್ಧ ಸಿಂಗಾಪುರಕ್ಕೆ ಸೇರಿದ್ದು.

ಸಿಂಗಾಪುರ ೧೫ ಲಕ್ಷ ಜನರ ಶಹರ. ಅದರಲ್ಲಿ ೧೧ ಲಕ್ಷ ಚೀನೀಯರು. ೨ ಲಕ್ಷ ಮಲಾಯನ್ನರು, ೧ ಲಕ್ಷ ಇಂಗ್ಲೀಷರು ಮತ್ತು ಒಂದು ಲಕ್ಷ ಭಾರತೀಯರಿದ್ದಾರೆ. ಮುಕ್ತ ಬಂದರವಾದ್ದರಿಂದ ಇಲ್ಲಿ ಜಗತ್ತಿನ ಎಲ್ಲೆಡೆಗಳಿಂದ ವ್ಯಾಪಾರಿ ಹಡಗುಗಳು ಬಂದು ಹೋಗಿ ಮಾಡುತ್ತವೆ. ಸಮುದ್ರ ತೀರದಲ್ಲಿ ೧೫–೨೦ ಅಂತಸ್ತುಗಳ ಕಟ್ಟಡಗಳು ಇವೆ.

ಚೈನಾ ಟೌನ ಪ್ರದೇಶದಲ್ಲಿ ಚೀನೀಯರ ದಟ್ಟ ವಸತಿಯಿದೆ. ಚೀನೀ ಖಾದ್ಯ ವಸ್ತುಗಳನ್ನು ತಯಾರಿಸುವ ಬಹಳಷ್ಟು ಚಿಕ್ಕ ದೊಡ್ಡ ಉಪಾಹಾರ ಗೃಹಗಳಿವೆ. ಇಲ್ಲಿ ಹಂದಿ ತಿನ್ನುವ ಚೀನೀ ಮನುಷ್ಯ, ಕೋಳಿ ತಿನ್ನುವ ಮಸಲ್ಮಾನ, ಅನ್ನ ಸಾರು ಉಣ್ಣುವ ಹಿಂದು ಎಲ್ಲರೂ ಒಂದೇ ಮೇಜಿನ ಮೇಲೆ ಊಟ ಮಾಡುತ್ತಾರೆ. ಆದರೂ ಒಬ್ಬರನ್ನೊಬ್ಬರು ಟೀಕಿಸುವುದಿಲ್ಲ, ತಿರಸ್ಕಾರದಿಂದ ನೋಡುವುದಿಲ್ಲ.

ಚೀನೀ ಜನರ ಮನೆಗಳು ಮಕ್ಕಳಿಂದ ತುಂಬಿ ಹೋಗಿರುತ್ತವೆ. ಚೀನೀ ಮನುಷ್ಯ ಮೂರು ನಾಲ್ಕು ಹೆಂಡಂದಿರನ್ನು ಮಾಡಿಕೊಳ್ಳುವುದೇನೂ ವಿಶೇಷವಲ್ಲವಾದ್ದರಿಂದ ಪ್ರತಿ ಮನೆಯಲ್ಲಿ ೨೦–೨೫ ಮಕ್ಕಳಿರುತ್ತಾರೆ. ಮನೆಯಲ್ಲಿ ತಂದೆ ಅಥವಾ ತಾಯಿ ಸತ್ತಿದ್ದರೆ ಚೀನೀಯರು ಮುಖ್ಯ ಬಾಗಿಲ ಮೇಲೆ ಒಂದು ಗುರುತು ಮಾಡುತ್ತಾರೆ. ಇಬ್ಬರೂ ಸತ್ತಿದ್ದರೆ ಎರಡು ಗುರ್ತು ಮಾಡುತ್ತಾರೆ.

ಚೀನೀ ಮನುಷ್ಯ ಸತ್ತ ಮೇಲೆ ಬಿಳಿಯ ಚಾದರ ಹೊದಿಸಿ ಮನೆಯಲ್ಲಿ ಕನಿಷ್ಠವೆಂದರೆ ಎಂಟು ದಿನಗಳ ವರೆಗಾದರೂ ಇಡುತ್ತಾರೆ. ಜೀವವೇನಾದರೂ ತಿರುಗಿ ಬಂದರೆ ಬರಲಿ ಎನ್ನುವುದೇ ಇದರ ಉದ್ದೇಶ.

ಈ ದಿನಗಳಲ್ಲಿ ಊಟ, ಕುಣಿತ, ಜುಗಾರಿಗಳು ನಡೆಯುತ್ತವೆ. ಸಾವಿರಾರು ರೂಪಾಯಿಗಳು ಧ್ವಂಸವಾಗುತ್ತವೆ. ಎಂಟು ದಿನಗಳ ನಂತರ ಇನ್ನು ಜೀವ ಮರಳದು ಎಂದುಕೊಂಡು ಹೆಣವನ್ನೊಯ್ದು ಸ್ಮಶಾನದಲ್ಲಿ ಹುಗಿದು ಮೇಲೆ ಗೋರಿಕಟ್ಟುತ್ತಾರೆ.

ಇಲ್ಲಿ "ಟೈಗರ್ ಬಾಮ್" ಎಂಬ ದೊಡ್ಡ ತೋಟದಲ್ಲಿ ಚೀನೀ ಜನರ ಕಲಾಕೃತಿಗಳ ಮಾದರಿಗಳೆಲ್ಲ ಕಾಣಸಿಗುತ್ತವೆ ಇಲ್ಲೂ ಒಂದು ವಾರ ನನ್ನ ಚಿತ್ರ ಪ್ರದರ್ಶನ ನಡೆಯಿತು. *

## ಹೃದಯ ಬಡಿತ

ಪ್ರಪಂಚದ ಜೀವಿಗಳಲ್ಲಿ ಅತಿ ಹೆಚ್ಚು ಹೃದಯ ಬಡಿತವುಳ್ಳ ಜೀವಿಯೆಂದರೆ, 'ಗುಂಯಿ ಗುಡುವ ಹಕ್ಕಿ' (Humming bird) ಆಗಿದೆ. ಇದರ ಹೃದಯ ನಿಮಿಷಕ್ಕೆ ಒಂದು ಸಾವಿರ ಸಲ ಬಡಿಯುತ್ತದೆ. ಎರಡನೆಯ ಸ್ಥಾನ ಇಲಿಗೆ ಸಿಗುತ್ತದೆ. ಇದರ ಹೃದಯ ನಿಮಿಷಕ್ಕೆ ಮುನ್ನೂರು ಸಲ ಬಡಿಯುತ್ತದೆ. ಮನುಷ್ಯನ ಹೃದಯದ ಬಡಿತ ನಿಮಿಷಕ್ಕೆ ೬೪ ರಿಂದ ೭೨ ಸಲ. ಮಾನವನಿಗಿಂತ ಕಡಿಮೆ ಹೃದಯ ಬಡಿತವುಳ್ಳ ಪ್ರಾಣಿಗಳಲ್ಲಿ ಆನೆ ಒಂದು. ಇದರ ಹೃದಯ ನಿಮಿಷಕ್ಕೆ ೩೫ ರಿಂದ ೪೦ ಸಾರೆ ಬಡಿಯುತ್ತದೆ. ಅತೀ ಕಡಿಮೆ ಹೃದಯ ಬಡಿತವುಳ್ಳ ಪ್ರಾಣಿಯೆಂದರೆ, ತಿಮಿಂಗಿಲ. ಇದರ ಹೃದಯ ಬಡಿತವು ನಿಮಿಷಕ್ಕೆ ಕೇವಲ ೨೦ ಸಲ!

—'ರಾಗ' ಬಲ್ಲೂರಿ

# ಈ ಅದ್ಭುತ ಸಾಧನವನ್ನು ಉಪಯೋಗಿಸಿ ನೋಡಿ—ಇಂದೇ!




# ಹೊಸ

## 'ಹೇಜ್‌ಲೀನ್' ಕೋಲ್ಡ್ ಕ್ರೀಮ್

'ಹೇಜ್‌ಲೀನ್' ಕೋಲ್ಡ್ ಕ್ರೀಮ್ ನಿಮ್ಮ ಚರ್ಮವನ್ನು ಆಳವಾಗಿ ಸ್ವಚ್ಛಗೊಳಿಸುತ್ತದೆ...ಕೊಳೆ, 'ಮೇಕ್-ಅಪ್' ಇತ್ಯಾದಿಗಳನ್ನು ಸಂಪೂರ್ಣವಾಗಿ ತೆಗೆಯುತ್ತದೆ. ಕಿಂದುಕಲೆಗಳು ಮೂಡುವ ಮೊದಲೇ ಅವನ್ನು ತಡೆಯುತ್ತದೆ! ಅದರ ಉತ್ತಮ ಎಣ್ಣೆಗಳು ನಿಮ್ಮ ಚರ್ಮವನ್ನು ದೃಢವಾಗಿ, ಕೋಮಲವಾಗಿ ಇಡುತ್ತವೆ, ನಿಮ್ಮ ಮುಖಕಾಂತಿಯನ್ನು ಬೆಳಗಿಸುತ್ತವೆ. ಚರ್ಮ ನಯ, ಮೃದು ಹಾಗೂ ಕಾಂತಿಯುಕ್ತವಾಗುವುದನ್ನು ಖಚಿತಗೊಳಿಸಲು:— ದಿನಾಲೂ ರಾತ್ರಿ ನಿಮ್ಮ ಮುಖವನ್ನು 'ಹೇಜ್‌ಲೀನ್' ಕೋಲ್ಡ್ ಕ್ರೀಮ್‌ನಿಂದ ಸ್ವಚ್ಛಗೊಳಿಸಿರಿ. ದಿನಾಲೂ ಬೆಳಗ್ಗೆ ಮುಖ ತೊಳೆದು "'ಹೇಜ್‌ಲೀನ್' ಸ್ನೋ"ವನ್ನು ಹಚ್ಚಿಕೊಳ್ಳಿರಿ. ಅದರ ಮೇಲೆ ಪೌಡರ್ ಹಾಕಿಕೊಳ್ಳುವುದಕ್ಕೆ ಚೆನ್ನಾಗಿರುತ್ತದೆ ಮತ್ತು ಅದು ನಿಮ್ಮ ಚರ್ಮವನ್ನು ರಕ್ಷಿಸುತ್ತದೆ.

**'ಹೇಜ್‌ಲೀನ್' ಕೋಲ್ಡ್ ಕ್ರೀಮ್**
ಬರ್ರೋಸ್ ವೆಲ್ಕಂ ಅವರ ತಯಾರಿಕೆ



76-9

ಫ್ರೆಂಚರ ಅಸಾಧ್ಯ ಸೈಕಲ್ ಶರ್ಯತ್ತು

# ಟೂರ್ - ಡಿ - ಫ್ರಾನ್ಸ್

ಮುರಲೀಧರ

ಪ್ರತಿ ವರ್ಷ ಜೂನ್-ಜುಲೈ ತಿಂಗಳ ೨೪ ದಿನಗಳ ವರೆಗೆ ಆರು ಕೋಟಿಯ ಇಡೀ ಫ್ರೆಂಚ್ ಜನಾಂಗ ಉನ್ಮತ್ತರಂತೆ ಸೈಕಲ್ ಹೊಡೆಯುವ ೧೫೦ ಜನ ಸಾಹಸಿಗಳ ವಿಷಯದಲ್ಲಿ ಹುಚ್ಚೆದ್ದುಹೋಗುತ್ತದೆ. ಉಳಿದೆಲ್ಲ ವ್ಯವಹಾರಗಳನ್ನು ಮರೆತೇ ಬಿಟ್ಟಂತೆ ಆ ದೇಶದ ಪತ್ರಿಕೆಗಳು, ರೇಡಿಯೋ, ಟೆಲಿವಿಶನ್‌ಗಳು "ಟೂರ್-ಡಿ-ಫ್ರಾನ್ಸಿನ" ಸುದ್ದಿಗಳಲ್ಲೇ ಮಗ್ನವಾಗಿ ಹೋಗಿರುತ್ತವೆ. ಜನರು ಕೆಲಸ ಮರೆತು ತಮ್ಮ ಸೈಕಲ್ ವೀರರನ್ನು ನೋಡಲು ರಸ್ತೆಗಳಲ್ಲಿ ಎರಡೂ ಮಗ್ಗಲುಗಳಲ್ಲಿ ಸೇರುತ್ತಾರೆ. ಯಾರು ಸೋಲುವರು ಯಾರು ಗೆಲ್ಲುವರೆಂಬ ಬಗ್ಗೆ ಹೋಟೆಲುಗಳಲ್ಲಿ ನಡೆಯುವ ಚರ್ಚೆಗಳಿಗೆ ಕಾವೇರಿ ಕೆಲ ವೇಳೆ ತಲೆಗಳು ಒಡೆಯುತ್ತವೆ. ಟೂರ್-ಡಿ-ಫ್ರಾನ್ಸಿಗಿಂತ ಮಹತ್ವದ್ದು ಪ್ರಪಂಚದಲ್ಲಾವುದೂ ಇಲ್ಲೆಂಬಂತೆ ಫ್ರಾನ್ಸಿನ ಅಧ್ಯಕ್ಷ ಡಿ ಗಾಲೆ ಕೂಡ ಅದರ ವೀರರನ್ನು ಎದುರುಗೊಳ್ಳಲು ತಪ್ಪದೆ ಹಾಜರಿರುತ್ತಾರೆ.

ಟೂರ್ ಡಿ ಫ್ರಾನ್ಸಿನ ಸೈಕಲ್ ಸ್ಪರ್ಧೆಯಲ್ಲಿ ಭಾಗವಹಿಸುವವರನ್ನು "ರಸ್ತೆಯ ರಾಕ್ಷಸರು" ಎಂದು ಕರೆಯಲಾಗುತ್ತದೆ. ಗುಡ್ಡಗಳ ಓರೆಗಳ ಸುತ್ತು ರಸ್ತೆಗಳ ಇಳುಕಲಿನಲ್ಲಿ ಗಂಟೆಗೆ ೬೦ ಮೈಲು ವೇಗದಿಂದ ಸೈಕಲ್ ಹೊಡೆಯುವವರನ್ನು ರಾಕ್ಷಸರೆಂದಲ್ಲದೆ ಬೇರೆ ಹೇಗೆ ಕರೆಯಬೇಕು? ಈ ಶರ್ಯತ್ತಿನಲ್ಲಿ ಗೆದ್ದ ಸೈಕಲ್ ಸವಾರರು ವರ್ಷಕ್ಕೆ ರೂ. ೪,೦೦,೦೦೦ ವರೆಗೂ ಸಂಪಾದಿಸುತ್ತಾರೆ. ಆದರೆ ಯಾವಾಗ ಅವರು ಗೋಣು ಮುರಿದುಕೊಂಡು ಶಾಶ್ವತವಾಗಿ ಆಸ್ಪತ್ರೆಯ ಅತಿಥಿಗಳಾಗುವರೆಂದು ಹೇಳುವಂತಿಲ್ಲ.

ಏಕೆಂದರೆ ಟೂರ್ ಡಿ ಫ್ರಾನ್ಸ್ ಜಗತ್ತಿನ ಅತಿ ಕಷ್ಟದಾಯಕವಾದ ಸೈಕಲ್ ಸ್ಪರ್ಧೆಯಾಗಿದೆ. ಗುಡ್ಡ ಕಾಡು ಹಳ್ಳ ತಿಟ್ಟುಗಳನ್ನು ಹಾಯುವ ಸುಮಾರು ೩೦೦೦ ಮೈಲು ದೀರ್ಘವಾದ ಯಾತ್ರೆಯಿದು. ಇಷ್ಟು ದಾರಿಯನ್ನು ಸವಾರರು ಎರಡು ರಜಾ ದಿನಗಳು ಸೇರಿ ೨೬ ದಿನಗಳಲ್ಲಿ ಮುಗಿಸುತ್ತಾರೆ. ಈ ವರ್ಷದ ಶರ್ಯತ್ತು ಜೂನ್ ೨೪ ರಂದು ಪೂರ್ವ ಫ್ರಾನ್ಸಿನ ನ್ಯಾನ್ಸಿ ಪ್ರಾಂತಿಕ ನಗರದಿಂದಾರಂಭವಾದದ್ದು ಉತ್ತರದ ಬೆಲ್ಜಿಯಂ ದೇಶವನ್ನು ಹೊಕ್ಕು ಅದರ ರಾಜಧಾನಿ ಬ್ರುಸೆಲ್ಸ್ ಮಾರ್ಗವಾಗಿ ಮರಳಿ ಫ್ರಾನ್ಸಿನಲ್ಲಿ ಪ್ರವೇಶಿಸಿ ಹೆಚ್ಚು ಕಡಿಮೆ ಇಡೀ ಫ್ರಾನ್ಸಿಗೆ ಒಂದು ಅಪ್ರದಕ್ಷಿಣೆ ಹಾಕಿ ಜುಲೈ ೧೫ ರಂದು ರಾಜಧಾನಿ ಪ್ಯಾರಿಸಿನಲ್ಲಿ ಮುಕ್ತಾಯವಾಯಿತು. ಅದು ೨೨ ನಗರಗಳ ಮತ್ತು ದಕ್ಷಿಣ ಮತ್ತು ಆಗ್ನೇಯ ಫ್ರಾನ್ಸಿನ ಅತಿ ಕಡಿದಾದ ೧೫ ಪರ್ವತ ಘಟ್ಟಗಳ ಮೂಲಕ ಹಾದು ಹೋಗಿತ್ತು.

ಈ ಶರ್ಯತ್ತು ಪ್ರಾರಂಭವಾಗುವುದು ಜೂನ್ ಅಂತ್ಯದಲ್ಲಾದರೂ ಅದರ ಎತ್ತುಗಡೆ ಮೇ ತಿಂಗಳಿಂದಲೇ ಆರಂಭವಾಗುತ್ತದೆ. ಅದರ ಸಂಘಟನೆ ೩೦ ಜನರ ಒಂದು ಸಮಿತಿಯ ಕೈಯಲ್ಲಿರುತ್ತದೆ. ಅದು ಮಾಡಬೇಕಾದ ಕೆಲಸ ಅಗಾಧವಾಗಿರುತ್ತದೆ. ಟೂರ್-ಡಿ-ಫ್ರಾನ್ಸಿನ ಮಾರ್ಗ ಪ್ರತಿ ವರ್ಷ ಬದಲಾಗಬೇಕು. ತಮ್ಮೂರಿನ ಮೂಲಕ

ಅದು ಹಾದು ಹೋಗಬೇಕೆಂದು ಅಸಂಖ್ಯ ನಗರಗಳೂ ಟೂರಿಸ್ಟ್ ಸಂಸ್ಥೆಗಳೂ ವಣಿಕ್ ಸಂಘಗಳೂ ಹಟದಿಂದ ಬೇಡಿಕೆ ಮುಂದೊಡ್ಡುತ್ತವೆ. ಅವನ್ನೆಲ್ಲ ತೂಗಿನೋಡಿ, ಆಯಾ ಪಟ್ಟಣಗಳಲ್ಲಿ ರಾತ್ರಿ ಸಾಕಷ್ಟು ಜನರಿಗೆ ತಂಗುವ ವ್ಯವಸ್ಥೆಗಳು ಇವೆಯೋ ಎಂದು ಖಾತ್ರಿ ಮಾಡಿಕೊಂಡು ಸಮಿತಿ ಮಾರ್ಗವನ್ನು ಗೊತ್ತುಪಡಿಸಬೇಕಾಗುತ್ತದೆ.

ಸುಮಾರು ೧೩೦ ಜನ ಸವಾರರು ಸಾಮಾನ್ಯವಾಗಿ ೧೩ ರ ತಂಡಗಳಲ್ಲಿ ಈ ಶರ್ಯತ್ತಿನಲ್ಲಿ ಸೇರುತ್ತಾರೆ. ಆವರೆ ಅವರಿಗಾಗಿ ಪೂರೈಕೆ ಮತ್ತು ಇತರ ವ್ಯವಸ್ಥೆಗಳಿಗಾಗಿ ಅದಕ್ಕೂ ಹತ್ತು ಪಟ್ಟು ಜನ ಬೇಕಾಗುತ್ತದೆ. ಮೆನೇಜರರು, ಸೈಕಲ್ ದುರಸ್ತಿಯವರು, ಗಂಡು ನರ್ಸುಗಳು (ಸುಮಾರು ೧೦೦) ಅವರೊಡನೆ ಧಾವಿಸಬೇಕಾಗುತ್ತದೆ. ೭೦ ಜನ ಅಂಪಾಯರರೇ ಇರುತ್ತಾರೆ! →



ಅಸಂಖ್ಯ ಸುದ್ದಿಗಾರರೂ ಟೆಲಿವಿಜನ್ ಪ್ರತಿನಿಧಿಗಳೂ ಶರ್ಯತ್ತಿನೊಡನೆ ಮೋಟಾರುಗಳಲ್ಲಿ ಮೋಟಾರ್ ಸೈಕಲ್ಲುಗಳಲ್ಲಿ ಶರ್ಯತ್ತು ಹೂಡುತ್ತಾರೆ. ಇಡೀ ಫ್ರಾನ್ಸಿನಲ್ಲಿ ನಿಮಿಷ ನಿಮಿಷಕ್ಕೂ ಶರ್ಯತ್ತಿನ ಸುದ್ದಿಗಾಗಿ ಜನ ತುದಿಗಾಲ ಮೇಲೆ ನಿಂತಿರುತ್ತಾರೆ. ಅವರ ಕುತೂಹಲವನ್ನು ಸಮಾಧಾನ ಪಡಿಸಲು ಸುದ್ದಿಗಾರರು ಗಂಟೆಗಂಟೆಗೆ ತಂತಿ, ಟೆಲಿಫೋನ್ ಸೌಕರ್ಯಗಳಿಗಾಗಿ ಬಡಿದಾಡುತ್ತಾರೆ.

ಶರತ್ತು ಬರುವ ಒಂದು ತಾಸಿಗೆ ಮೊದಲೇ ಅದು ಸಾಗಲಿರುವ ಮಾರ್ಗದಲ್ಲಿ ೧೦೦ ಕಾರುಗಳು ಧ್ವನಿವರ್ಧಕಗಳಲ್ಲಿ ಘೋಷಿಸುತ್ತ ಇಕ್ಕಡೆಗಳಲ್ಲಿ ಕಲೆತ ಜನರಿಗೆ ಸುದ್ದಿ ಮುಟ್ಟಿಸುತ್ತವೆ. ಅನಂತರ ಟೂರ್ ಸುಪರಿಂಟೆಂಡೆಂಟನೂ ಪೋಲೀಸ್ ಅಧಿಕಾರಿಗಳೂ ಮೋಟಾರ್ ಸೈಕಲ್‌ಗಳ ಮೇಲೆ ವ್ಯವಸ್ಥೆಯನ್ನು ಪರೀಕ್ಷಿಸುತ್ತ ಧಾವಿಸುತ್ತಾರೆ ಅವರ ಹಿಂದೆ ಸವಾರರು ಧೂಳಿಡಿದ ಬೆವರು ಸುರಿಸುವ ತಮ್ಮ ವಿಕಾರ ರೂಪಗಳನ್ನು ಪ್ರದರ್ಶಿಸುತ್ತ ಜೀವದ ಹಂಗು ದೊರೆದು ನುಗ್ಗುವಾಗ ಹಳ್ಳಿ ಹಳ್ಳಿ ಪಟ್ಟಣ ಪಟ್ಟಣದ ರಸ್ತೆಗಳಲ್ಲಿ ನೆರೆದ ಜನಸಂದಣಿ ತಂತಮ್ಮ ಪ್ರಿಯ ತಂಡಕ್ಕೆ ಉತ್ತೇಜನಪರವಾಗಿ ಕೇಕೆ ಹಾಕುತ್ತದೆ. ಸವಾರರ ಸಂಗಡವೇ ಆಂಬ್ಯುಲೆನ್ಸ್‌ಗಳೂ ಸುದ್ದಿಗಾರರೂ ಇರುತ್ತಾರೆ. ಅನಂತರ ಮತ್ತೆ ಮೋಟಾರ್ ಸೈಕಲ್ ಪೋಲೀಸರು, ಅವರ ಬೆನ್ನಿಗೆ ನೂರು ನೂರು ಮೋಟಾರುಗಳಲ್ಲಿ ಅನುಸರಿಸಿ ಬರುವ ಉತ್ಸಾಹಿ ಪ್ರೇಕ್ಷಕರು.

ಮೂರು ವಾರಗಳ ವರೆಗೆ ನಿರಂತರವಾಗಿ ಉದ್ರೇಕಗೊಂಡ ಈ ಕೋಲಾಹಲ ಎಷ್ಟು ಪ್ರಚಂಡವಾಗಿರುತ್ತದೆಂದರೆ ಅದನ್ನು ನಿಯಂತ್ರಿಸಲು ೩೨೦ ವಿಶೇಷ ಟ್ರಾಫಿಕ್ ಪೋಲೀಸರು, ೩೦೦೦ ಪ್ರಾದೇಶಿಕ ಪೋಲೀಸರು, ೩೦೦೦ ಸಶಸ್ತ್ರ ಪೋಲೀಸರು, ೩೦೦೦ ನಗರ ಪೋಲೀಸರು ಬೇಕಾಗುತ್ತಾರೆ.

ಶರ್ಯತ್ತಿನಲ್ಲಿ ಹೆಚ್ಚಾಗಿ ಗೆಲ್ಲುವವರು ಸೈಕಲ್ ಸವಾರಿಯನ್ನೇ ವೃತ್ತಿಯಾಗಿ ಮಾಡಿಕೊಂಡ ಆಂಕೆಟಿಲ್, ವ್ಯಾನ್ ಲೂಯಿ, ಡರಿಗೇಟ್, ಗಾಜಿಕ್, ಗ್ಯಾಸ್ಪೋಸ್, ಸೆನ್ನಿ ಮುಂತಾದವರು. (ಈ ವರ್ಷದ ಛಾಂಪಿಯನ್ ಜಾಕ್ ಆಂಕೆಟಿಲ್ ಪ್ರಥಮ ಸ್ಥಾನ ಪಡೆಯುತ್ತಿರುವುದು ಇದು ಮೂರನೇ ಸಲ). ಆದರೆ ಅಮೆಚೂರರೂ ಸಾಕಷ್ಟು ಸಂಖ್ಯೆಯಲ್ಲಿ ಇದರಲ್ಲಿ ಸೇರುತ್ತಾರೆ.

ಟೂರ್ ಡಿ ಫ್ರಾನ್ಸ್ ಬೆವರು ನೆತ್ತರ ಶರ್ಯತ್ತು. ಅದರ ಶ್ರಮ ಅಸಹನೀಯವಾದದ್ದು. ಆದ್ದರಿಂದ ಪ್ರಾರಂಭದಲ್ಲಿದ್ದ ೧೩೦ ಜನರಲ್ಲಿ ಕೊನೆಯವರೆಗುಳಿಯುವವರು ಹನ್ನೆರಡೋ ಹದಿಮೂರೋ ಮಂದಿ ಅಷ್ಟೇ. ಕೆಲವರು ಅರೆವಾರಿಯಲ್ಲಿ ಸೋತು ಕೈಬಿಡುತ್ತಾರೆ; ಕೆಲವರು ಇತರ ಸೈಕಲ್ಲುಗಳಿಗೆ ಢಿಕ್ಕಿ ಹೊಡೆದು ನೆಲ ಮೂಸುತ್ತಾರೆ; ಕೆಲವರು ಅಪಾರ ವೇಗ ಮತ್ತು ಶ್ರಮದಿಂದ ಮೂಗು ಬಾಯಿಗಳಲ್ಲಿ ನೆತ್ತರು ಕಾರುತ್ತ ಕೆಳಗುರುಳುತ್ತಾರೆ. ಅವರನ್ನು ಕೂಡಲೇ ಆಂಬ್ಯುಲೆನ್ಸುಗಳು ಎತ್ತಿಕೊಳ್ಳುತ್ತವೆ, ಡಾಕ್ಟರರೂ ನರ್ಸುಗಳೂ ಶುಶ್ರೂಷೆ ಮಾಡುತ್ತಾರೆ.

ಇತರರು ಕೊನೆ ಹೊಂದಿಯೇ ಬಿಡುವೆವೆಂಬ ಹಟದಿಂದ ಮುಂದೆ ಸಾಗುತ್ತಾರೆ. ಅವರು ತಮ್ಮ ತಂಡಗಳೊಡನೇ ಉಳಿದರೆ ಕೂಡ ಶರ್ಯತ್ತು ಮುಗಿಯುವುದರೊಳಗೆ ಅರೆಜೀವವಾಗಿರುತ್ತಾರೆ. ಆದರೆ ಅವರು ಮುನ್ನುಗ್ಗಿ ಗೆದ್ದುಬಿಡುವ ಹುಮ್ಮಸ್ಸಿಗೆ ಬಿದ್ದರೋ ಭವಿಷತ್ತು ಪೂರ್ತಿ ಅದೃಷ್ಟದ ಕೈಸೇರುತ್ತದೆ. ಬಿರುಗಾಳಿ ಬೀಸುವ ಪರ್ವತದ ಓರೆಯಲ್ಲಿ ತನ್ನ ಸೈಕಲ್ಲನ್ನು ಮುಂದೋಡಿಸುತ್ತ ೪೦, ೫೦, ೬೦ ಮೈಲಿನ ವೇಗವನ್ನು ಮುಟ್ಟಿದರೆಂದರೆ ತಡೆಯುವುದು ಸಾಧ್ಯವೇ ಇಲ್ಲ ಆಗ ಯಾವುದಾದರೊಂದು ಅಮಂಗಲ ಕ್ಷಣದಲ್ಲಿ ಹಿಡಿತ ಕಳೆದುಕೊಂಡು ಜಾರುವ ಕಣಿವೆಯಲ್ಲಿ ವಾಹನ ಸಮೇತವಾಗಿ ಉರುಳಿ ಆತ ನಿಶ್ಚೇಷ್ಟಿತನಾಗಬಹುದು. ಕೂಡಲೇ ಅವನನ್ನು ಆಂಬ್ಯುಲೆನ್ಸ್ ಹತ್ತಿರದ ಆಸ್ಪತ್ರೆ ಸೇರಿಸಿ ಮುಂದೆ ಸಾಗುತ್ತದೆ. ಅವನು ಎಷ್ಟು ತಿಂಗಳು ಆಸ್ಪತ್ರೆಯ ಅತಿಥಿಯಾ

ಗಿರಬೇಕೋ ಹೇಳುವಂತಿಲ್ಲ.

ಇಂಥ ಅಪಘಾತಗಳು ಕೆಲವರನ್ನು ಶರ್ಯತ್ತಿಗೆ ಕಾಯಂ ಆಗಿ ಶರಣು ಹೊಡೆಯುವಂತೆ ಮಾಡಬಹುದು. ಆಚೆ ವರ್ಷ ಶರ್ಯತ್ತಿನಲ್ಲಿ ಕೊನೆಗೆ ಗೆದ್ದ ನೆನ್ಸಿಯನ್ನು ದಾಟಿ ಮುಂದೆ ಹೋಗಲು ತನ್ನ ವಾಹನವನ್ನು ಮುಂದೋಡಿಸಿದ ರೋಜರ್ ರಿವಿಯರ್ ಗುಡ್ಡದ ಒಂದು ತಿರುಕಲಿನಲ್ಲಿ ಅಂಕೆ ತಪ್ಪಿ ಕೆಳಗಿನ ಕಲ್ಲಿನ ಪ್ರಪಾತಕ್ಕೆ ಅಪ್ಪಳಿಸಿದ. ಅಲ್ಲಿ ಅವನನ್ನು ಮೂರ್ಛಿತಾವಸ್ಥೆಯಲ್ಲಿ ಎತ್ತಿ ಆಸ್ಪತ್ರೆ ಸೇರಿಸಲಾಯಿತು. ಅವನ ಬೆನ್ನು ಎರಡು ಕಡೆ ಮುರಿದಿತ್ತು. ಹೊರಡುವ ಮುನ್ನ ಸೈಕಲ್ಲಿನಲ್ಲೇ ಹೆಂಡತಿಯ ಕೈಕುಲುಕಿಸಿ "ನನ್ನನ್ನು ಕೆಡಹುವ ಸೈಕಲ್ಲು ಪ್ರಪಂಚದಲ್ಲೇ ಇಲ್ಲ!" ಎಂದು ಹೇಳಿಕೊಂಡಿದ್ದ ಆತ ಒಂದು ವರ್ಷಕ್ಕೂ ಹೆಚ್ಚುಕಾಲ ಆಸ್ಪತ್ರೆಯಲ್ಲಿರಬೇಕಾಯಿತು ಅವನಿಗೆ ಇನ್ನೊಂದು ಸೈಕಲ್ ಶರ್ಯತ್ತು ಸಾಧ್ಯವಾಗದೆಂದು ಡಾಕ್ಟರರ ಅಭಿಪ್ರಾಯ.

೧೯೬೦ ರಲ್ಲಿ ಗೆದ್ದ ನೆನ್ಸಿಯೇ ಹೋದ ವರ್ಷ ಒಂದು ತಾಲೀಮು ಶರ್ಯತ್ತಿನಲ್ಲಿ ಪೆಂಟನ್-ರೋಮ್ ರಸ್ತೆಯ ಪರ್ವತದ ಓರೆಯಲ್ಲಿ ಅಂಕೆ ತಪ್ಪಿ ಒಡ್ಡಿಗೆ ಬಡಿದು ಪುಟಿದು ಅದರಾಚೆಗೆ ಒಗೆಯಲ್ಪಟ್ಟು ಕೆಳಗೆ ಕಲ್ಲಿನ ಕಂದರದ ಗೋಡೆಗೆ ಬಡಿದು ತಲೆ ಬುರುಡೆ ಒಡೆದು ಆಸ್ಪತ್ರೆ ಸೇರಿದ.

ಆದರೂ ಗೆದ್ದವನಿಗೆ ಪ್ರತಿಫಲವೂ ಹಾಗೇ ಇದೆ. ಅವನು ಜನರ ಕಣ್ಮಣಿಯಾಗುತ್ತಾನೆ, ಹೆಂಗಸರ ಕಟಾಕ್ಷಕ್ಕೆ ಪಾತ್ರನಾಗುತ್ತಾನೆ, ಇಡೀ ದೇಶ ಅವನ ಖಾಸಗಿ ಜೀವನದ ಎಳೆಎಳೆಯನ್ನು ಅರಿತುಕೊಳ್ಳಲು ಹಂಬಲಿಸುತ್ತದೆ. ಅವನಿಗೆ ಬಹುಮಾನಗಳು, ಪದಕಗಳು ದೊರೆಯುತ್ತವೆ. ಅವನು ವರ್ಷಕ್ಕೆ ಐದು ಲಕ್ಷದ ವರೆಗೂ ಗಳಿಸುವ ಆಸೆ ಇಟ್ಟುಕೊಳ್ಳಬಹುದು. ಸೈಕಲ್ ಕಂಪನಿಗಳು ಅವನಿಗೆ ಕಾಯಂ ಆಗಿ ಭಾರಿ ಸಂಬಳಗಳನ್ನು ಕೊಟ್ಟು ತಮ್ಮ ಜಾಹೀರಾತು ಹೆಚ್ಚಿಸಬಹುದು.

ಫ್ರೆಂಚ್ ಜನರು ಈ ಶರ್ಯತ್ತಿನ ಬಗ್ಗೆ ಶುದ್ಧ ಹುಚ್ಚರಾಗಿಬಿಡುತ್ತಾರೆ. ಮಂತ್ರಿಗಳೂ ಭಾರಿ ಅಧಿಕಾರಿಗಳೂ ಕೂಡ ಅದರ ಆಕರ್ಷಣೆಯಿಂದ ತಪ್ಪಿಸಿಕೊಳ್ಳಲಾರರು. ಹಾಟ್-ಲಾಯರಿನ ೮೩ ವರ್ಷದ ವೃದ್ಧನೊಬ್ಬ ಪ್ರತಿ ವರ್ಷ ಟೂರ್ ಡಿ ಫ್ರಾನ್ಸ್ ನೋಡಲೆಂದೇ ಸೈಕಲ್ ಮೇಲೆ ಪ್ಯಾರೀಸಿಗೆ ಬರುತ್ತಿದ್ದ. ಕೊನೆಗೆ ೧೯೫೫ ರಲ್ಲಿ ಅವನ ಹೆಣ ಅವನ ಸೈಕಲ್ಲಿನೊಡನೆ ರಸ್ತೆ ಬದಿಯಲ್ಲಿ ಬಿದ್ದದ್ದನ್ನು ಯಾರೊ ಕಂಡರು.

ಟೂರ್ ಡಿ ಫ್ರಾನ್ಸ್ ಬಗ್ಗೆ ಫ್ರೆಂಚರ ತಲೆಗಳು ಕಾಯುವುದೂ ಬೇಗ. ಮೂರು ವರ್ಷಗಳ ಹಿಂದೆ, ಎರಡು ಬೇರೆ ಬೇರೆ ತಂಡಗಳ ಯೋಗ್ಯತೆಯ ಬಗ್ಗೆ ಒಂದು ಹೋಟೆಲಿನಲ್ಲಿ ಮೂವರು ತರುಣರಿಗೂ ಒಬ್ಬ ೪೦ರವನಿಗೂ ಬಾಯಿಗೆ ಬಾಯಿ ಹತ್ತಿ ಅದು ಕೈಕೈಗೆ ಬಂದಾಗ ಯಾರೋ ಬಿಡಿಸಿದರು. ಆದರೆ ಕೆಲ ತಾಸುಗಳ ನಂತರ ಆ ಮನುಷ್ಯ ಗುಂಡು ಬಡಿದು ಬಿದ್ದಿರುವುದು ಗೊತ್ತಾಯಿತು! *



## ಅದೃಷ್ಟ

ಪ್ರಶ್ನೆ: "ಸ್ವಾಮಿ, ತಾವು ಅದೃಷ್ಟವನ್ನು ನಂಬುತ್ತೀರೋ?

ಉತ್ತರ: "ಸತ್ಯವಾಗಿಯೂ. ಇಲ್ಲದಿದ್ದರೆ, ನಿಮಗಾಗದವರ ಏಳಿಗೆಯನ್ನು ನೀವು ಇನ್ನೇನೆಂದು ಕರೆಯುತ್ತೀರಿ?"

— ಜಿ. ಕೆ. ನಾಡಿಗ್



ಅಜ್ಞಾತ ಪ್ರಪಂಚದಲ್ಲಿ ಅಪೂರ್ವ ಸಂಶೋಧನೆಗಳು

# ಆತ್ಮಕ್ಕೆ ರೂಪವುಂಟೆ ?

ಮುಕ್ತಾ ರಾಜೆ

ಮೃತ್ಯು ಇಂದಿನ ವರೆಗೂ ಮಾನವನಿಗೊಂದು ಬಗೆಹರಿಯದ ರಹಸ್ಯವಾಗಿಯೇ ಉಳಿದುಕೊಂಡಿದೆ. ಮರಣದ ದೃಶ್ಯವನ್ನು ಕೋಮಲ ಹೃದಯಿಯಾದ ಮನುಷ್ಯ ಸಹಸಾ ಮರೆಯಲಾರ. ಅದನ್ನು ಕಂಡಾಗ ಅವನ ಮನದಲ್ಲಿ ನೂರಾರು ಪ್ರಶ್ನೆಗಳೇಳುತ್ತವೆ. ಪ್ರತಿಭಾಶಾಲಿಗಳಾದವರು ಇಂಥ ದೃಶ್ಯಗಳನ್ನು ಕಂಡ ನಂತರದಲ್ಲಿ ಚಿಂತನೆಯಲ್ಲಿ ಮಗ್ನರಾಗಿ ದಾರ್ಶನಿಕರಾಗುತ್ತಾರೆ. ಮೃತ್ಯುವಿನ ಬಗ್ಗೆ ಇದುವರೆಗೆ ಎಷ್ಟೋ ದಾರ್ಶನಿಕ ವ್ಯಾಖ್ಯೆಗಳು ಮಾಡಲ್ಪಟ್ಟಿಡುವವಾದರೂ ಅವರ ರಹಸ್ಯವೇನೂ ಬಯಲಾಗಿಲ್ಲ ಮರಣ ಸಂಭವಿಸಿದಾಗ ವಾಸ್ತವದಲ್ಲಿ ಏನಾಗುತ್ತದೆ? ಶರೀರವನ್ನು ಬಿಟ್ಟು ಹೋಗುವ ವಸ್ತು ಯಾವುದು? ಅದೆಲ್ಲಿಗೆ ಹೋಗುತ್ತದೆ?

ಶರೀರದಲ್ಲಿ 'ಆತ್ಮ'ವೆಂಬೊಂದು ವಸ್ತು ಇರುತ್ತದೆಂದು ಹೆಚ್ಚಿನ ಜನ ಮನ್ನಿಸುತ್ತಾರೆ. ಅದು ಹೊರಟು ಹೋದಾಗ ಶರೀರ ಸಾಯುತ್ತದೆ. ಆತ್ಮದ ಸ್ವರೂಪವನ್ನು ಕುರಿತು ತುಂಬಾ ಮಾತುಗಳು ಹೇಳಲ್ಪಟ್ಟಿವೆ. ಆದರೆ ಇಂದಿನ ವೈಜ್ಞಾನಿಕ ಯುಗದಲ್ಲಿ ಧ್ಯಾನ ಮತ್ತು ಚಿಂತನಗಳ ಬಲದಿಂದ ಹೇಳಿದ ಮಾತುಗಳಿಗೆ ಏನೂ ಬೆಲೆಯಿಲ್ಲ. ವೈಜ್ಞಾನಿಕ ಸಾಧನಗಳಿಂದ ಪರೀಕ್ಷೆಯಾದ ನಂತರವೇ ಅವಕ್ಕೆ ಬೆಲೆ ಬರುವುದು. ಇಂಗ್ಲಂಡಿನ ಒಬ್ಬ ಡಾಕ್ಟರರ ಮನದಲ್ಲಿ ಮೃತ್ಯುವಿನ ಬಗ್ಗೆ ಕುತೂಹಲ ಜಾಗ್ರತವಾಯಿತು. ಆತ ತನ್ನ ಆಸ್ಪತ್ರೆಯ ಪ್ರಯೋಗಶಾಲೆಯಲ್ಲಿ ವಾಸ್ತವದಲ್ಲಿ ಮೃತ್ಯುವೆಂದರೇನು, ಶರೀರದಿಂದ ಹೊರಟುಹೋಗುವ ವಸ್ತು ಯಾವುದು ಎಂಬುದರ ಶೋಧಕ್ಕೆ ತೊಡಗಿದರು. ಲಂಡನ್ನಿನ ಪ್ರಖ್ಯಾತ ಸೇಂಟ್ ಜೇಮ್ಸ್ ಆಸ್ಪತ್ರೆಯ ಈ ಡಾಕ್ಟರ್ ಡಬ್ಲ್ಯು.ಜೆ ಕಿಲ್ನರ್‌ರ ಲಕ್ಷ್ಯ ಈ ಮಾತಿನತ್ತ ಒಂದು ವಿಚಿತ್ರ ಘಟನೆಯ ಕಾರಣದಿಂದ ಆಕರ್ಷಿತವಾಯಿತು. ಒಂದು ದಿನ ಆಸ್ಪತ್ರೆಯಲ್ಲಿ ಅವರು ರೋಗಿಗಳ ಪರೀಕ್ಷೆ ಮಾಡುತ್ತಿದ್ದಾಗ ಅವರ ಸೂಕ್ಷ್ಮದರ್ಶಕ ಯಂತ್ರದ ಕನ್ನಡಿಯ ಮೇಲೆ ಒಂದು ವಿಚಿತ್ರ ಪ್ರಕಾರದ ಬಣ್ಣ ಅವರಿಗೆ ಕಾಣಿಸಿತು. ಅದೊಂದು ದುರ್ಲಭವಾದ ವಿಶಿಷ್ಟ ಬಗೆಯ ರಾಸಾಯನಿಕ ಬಣ್ಣವಾಗಿತ್ತು. ಸೇಂಟ್ ಜೇಮ್ಸ್ ಹಾಗಿರಲಿ, ಇಡೀ ಇಂಗ್ಲಂಡಿನ ಯಾವ ಪ್ರಯೋಗ ಶಾಲೆಯಲ್ಲೂ ಸಹಸಾ

"ಧರ್ಮಯುಗ" ದಿಂದ

ಕಣ್ಣಿಗೆ ಬೀಳದಂಥ ಬಣ್ಣವಾಗಿತ್ತದು. ಡಾಕ್ಟರ ರಿಗೆ ಸಂದೇಹ ಬಂತು: ಈ ಬಣ್ಣ ಹೇಗೆ ಬಂತು? ಈ ಸೂಕ್ಷ್ಮದರ್ಶಕದ ಕನ್ನಡಿಯ ಮೇಲೆ ಹೇಗೆ ಕೂಡಿತು? ಅವರೆಷ್ಟು ಯೋಚಿಸಿ ಪರೀಕ್ಷಿಸಿದರೂ ಆ ಪ್ರಶ್ನೆ ಬಗೆ ಹರಿಯಲಿಲ್ಲ.

ಮಾರನೆಯ ದಿನ ಅವರು ಒಬ್ಬ ರೋಗಿಯನ್ನು ತಪಾಸಿಸುತ್ತಿದ್ದಾಗ ಆಶ್ಚರ್ಯಚಕಿತರಾದರು. ಅವರು ರೋಗಿಯ ಬಟ್ಟೆಗಳನ್ನು ತೆಗಸಿದ್ದರು. ಭೂತಗನ್ನಡಿಯ ಮೂಲಕ ತಪಾಸಣೆ ನಡೆಸಿದ್ದರು. ಆಗ ಹಿಂದಿನ ದಿನ ಕಂಡ ಬಣ್ಣದ ತೆರೆಗಳು ಕನ್ನಡಿಯ ಎದುರು ಹಾರಿ ಹೋಗುತ್ತಿರುವುದು ಅವರಿಗೆ ಕಾಣಿಸಿತು. ಅವರು ಲಕ್ಷ್ಯಗೊಟ್ಟು ನೋಡಿದಾಗ ಒಂದು ಅದ್ಭುತ ರಹಸ್ಯ ಬಯಲಾಯಿತು. ಆ ರೋಗಿ ವಿವಸ್ತ್ರನಾಗಿದ್ದ. ಆತನ ಶರೀರದ ನಾಲ್ಕೂ ದಿಕ್ಕಿನಲ್ಲಿ ಐದಾರು ಇಂಚು ವ್ಯಾಸದಲ್ಲಿ ಒಂದು ತೀರ ಮಂದವಾದ ಪ್ರಕಾಶ ಮಂಡಲವಿದ್ದು ಅದರಲ್ಲಿ ಎಷ್ಟೋ ದುರ್ಲಭ ರಾಸಾಯನಿಕ ಬಣ್ಣಗಳು ಕಾಣಿಸುತ್ತಿದ್ದವು. ಆಶ್ಚರ್ಯದಿಂದ ಡಾಕ್ಟರರ ಬೆರಳು ನಡುಗತೊಡಗಿದವು. ಏನಿದು? ಶರೀರದ ಯಾವುದಾದರೊಂದು ಅವಸ್ಥೆಯ ಮೂಲಕ ಈ ತತ್ತ್ವ ಕಾಣಿಸುತ್ತಿದೆಯೆ?

ಆದರೆ ಡಾಕ್ಟರರು ಈ ಬಗ್ಗೆ ಯಾರಿಗೂ ಏನೂ ಹೇಳಲಿಲ್ಲ. ರೋಗಿಯನ್ನು ಸೂಕ್ಷ್ಮವಾಗಿ ಪರೀಕ್ಷಿಸಿದರು. ಈ ಪ್ರಕಾಶವೃತ್ತ ಶರೀರದ ಯಾವುದೊಂದು ಅವಸ್ಥೆಯ ಪರಿಣಾಮವಲ್ಲ, ಅದು ಶರೀರದಿಂದ ಬೇರೆಯಾದ ಯಾವುದೊ ವಸ್ತು ಎಂದು ಅವರಿಗೆ ತಿಳಿಯಿತು. ಆಗವರು ಅದನ್ನು ಇನ್ನಷ್ಟು ಸೂಕ್ಷ್ಮವಾಗಿ ಪರೀಕ್ಷಿಸತೊಡಗಿದರು. ಈ ಪ್ರಕಾಶ ಮಂಡಲ ಸದಾ ಇರುತ್ತದೆ ಮಾತ್ರವಲ್ಲ, ಅದು ಯಾವ ಯಾವಾಗ ಮಂದವಾಗುತ್ತದೊ ಆಗ ಆಗ ಶರೀರದಲ್ಲಿ ಶಿಥಿಲತೆಯುಂಟಾಗಿ ಭಿನ್ನ ಭಿನ್ನ ರೋಗಲಕ್ಷಣಗಳು ಯಾವ ಶಾರೀರಕ ಕಾರಣವಿಲ್ಲದೆ ಕಾಣಿಸತೊಡಗುತ್ತವೆಯೆಂದು ಅವರಿಗೆ ತಿಳಿದುಬಂತು.

ಡಾ. ಕಿಲ್ನರ್‌ರಿಗೆ ಬಹುಶಃ ಈ ಪ್ರಕಾಶ ಮಂಡಲಕ್ಕೂ ಆತ್ಮಕ್ಕೂ ಏನೊ ಸಂಬಂಧವಿರಬೇಕು ಎಂಬ ಆಭಾಸವುಂಟಾಯಿತು. ವೈಜ್ಞಾನಿಕ ಕುತೂಹಲದಿಂದ ಅವರು ಆ ರೋಗಿಯ ಮೇಲೆ ಸತತ ಕಣ್ಣಿಟ್ಟರು. ಆತ ಮರಣಾಸನ್ನ ಸ್ಥಿತಿಯಲ್ಲಿದ್ದ. ಡಾಕ್ಟರರು ಸದಾ ಅವನ ಬಳಿಯಲ್ಲಿ ಕುಳಿತಿರುತ್ತಿದ್ದರು. ಮರಣದ ಕ್ಷಣ ಸಮೀಪಕ್ಕೆ ಬಂದಂತೆಲ್ಲ ಪ್ರಕಾಶ ಮಂದವಾಗುತ್ತ ನಡೆಯಿತು. ಪ್ರಕಾಶಮಂಡಲ ಲುಪ್ತವಾದಾಗ ಡಾ ಕಿಲ್ನರರು ರೋಗಿಯ ನಾಡಿ ನೋಡಿದರು. ನಾಡಿಯ ಬಡಿತ ನಿಂತಿತ್ತು. ದೇಹ ತಣ್ಣಗಾಗಿತ್ತು. ಮೃತ್ಯುವಿನ ಪ್ರಥಮ ವೈಜ್ಞಾನಿಕ ಪರೀಕ್ಷೆಯೆ ಇದಾಗಿತ್ತು.

ಡಾ. ಕಿಲ್ನರರು ತಮ್ಮ ಈ ಅನುಭವವನ್ನು ವೈಜ್ಞಾನಿಕ ಪತ್ರಿಕೆಗಳಲ್ಲಿ ಪ್ರಕಟಿಸಿದಾಗ ತುಂಬಾ ಗಡಿಬಿಡಿಯೆದ್ದಿತು. ಅನೇಕರು ಆ ಬಗ್ಗೆ ವಾದವಿವಾದ ಮಾಡಿದರು. ಕೆಲವರಂತೂ ಇದು ಡಾಕ್ಟರ ಕಿಲ್ನರ್‌ರ ಕಲ್ಪನೆ ಎಂದರು. ಆದರೆ ಡಾಕ್ಟರರು ತಮ್ಮ ಕಾರ್ಯ ನಿಲ್ಲಿಸಲಿಲ್ಲ. ೧೯೧೦ ರಲ್ಲಿ ಅವರು ತಮ್ಮ ಶೋಧದ ಪರಿಣಾಮವನ್ನು "ದ ಹ್ಯೂಮನ್ ಎಟ್ಮಾಸ್ಪಿಯರ್" ಎಂಬ ಪುಸ್ತಕದಲ್ಲಿ ಬರೆದರು. ಈ ವಿಚಾರದಲ್ಲಿ ಈ ಪುಸ್ತಕವೇ ಪ್ರಥಮ ಪ್ರಾಮಾಣಿಕ ಪುಸ್ತಕವೆಂದು ಮನ್ನಣೆ ಪಡೆದಿದೆ. ಡಾ. ಕಿಲ್ನರ್‌ರ ಶೋಧಗಳ ಪರಿಣಾಮವಾಗಿ ಇತರ ವೈಜ್ಞಾನಿಕರ ಲಕ್ಷ್ಯವೂ ಈ ವಿಷಯದತ್ತ ಆಕರ್ಷಿಸಲ್ಪಟ್ಟಿತು. ಮನೋವಿಜ್ಞಾನದಲ್ಲಿ ಅನೇಕ ಪಠ್ಯ ಪುಸ್ತಕಗಳನ್ನು ಬರೆದಿರುವ ವಿಲಿಯಂ ಮೆಕ್ಡೂಗಲ್‌ರು ಅಮೇರಿಕದ ಆಸ್ಪತ್ರೆಯೊಂದರಲ್ಲಿ ತಮ್ಮ ಪ್ರಯೋಗವನ್ನಾರಂಭಿಸಿದರು. ಮರಣ ಸಂಭವಿಸಿದಾಗ ಶರೀರವನ್ನು ಬಿಟ್ಟು ಹೋಗುವ ತತ್ವವನ್ನು ಅಳೆದು ತೂಗಿ ನೋಡಲು ಸಾಧ್ಯವೇ ಎಂದವರು ತಿಳಿಯಬಯಸಿದರು. ಇದಕ್ಕಾಗಿ ಅವರು ಮಂಚ ಸಹಿತವಾಗಿ ರೋಗಿಯನ್ನಿಡಬಹುದಾದಂಥ ಒಂದು ಭಾರಮಾಪಕ ಯಂತ್ರ (ತಕ್ಕಡಿ) ವನ್ನು

ತಯಾರಿಸಿದರು. ಈ ಯಂತ್ರ ಎಷ್ಟು ಸೂಕ್ಷ್ಮವಾಗಿತ್ತೆಂದರೆ ದಾಯಿ ಮಂಚದ ಮೇಲೆ ಒಂದು ಸಿಗಾರ್ ಇಟ್ಟರೆ ಕೂಡ ಯಂತ್ರದ ಮುಳ್ಳು ಸರಿಯುತ್ತಿತ್ತು. ಡಾ. ಮೆಕ್ಡೂಗಲ್‌ರು ಒಬ್ಬ ವೃದ್ಧ ವ್ಯಕ್ತಿಯನ್ನು ಪ್ರಯೋಗಕ್ಕಾರಿಸಿಕೊಂಡರು. ಆತನೊಬ್ಬ ಅನಾಥ ವೃದ್ಧ. ಒಂದು ದಿನ ಅವನ ಆರೋಗ್ಯ ತೀರ ಕೆಟ್ಟಿತ್ತು. ಆತನನ್ನು ಮಂಚ ಸಹಿತ ಯಂತ್ರದ ಮೇಲೆ ಮಲಗಿಸಲಾಯಿತು. ನಾಲ್ಕೂ ದಿಕ್ಕಿನಲ್ಲಿ ಮೆಕ್ಡೂಗಲ್ ಮತ್ತು ಅವರ ಸಹಕಾರಿಗಳು ನಿಂತುಕೊಂಡು ಮುದುಕ ಸಾಯುವ ಕ್ಷಣವನ್ನೆ ನಿರೀಕ್ಷಿಸತೊಡಗಿದರು. ರೋಗಿಯ ಪುಪ್ಪುಸದಲ್ಲಿ ಎಷ್ಟು ಹವೆ ಸೇರಿಕೊಳ್ಳಬಹುದು ಎಂಬುದನ್ನು ಮೊದಲೆ ಅಳೆದು ನೋಡಿದ್ದರು. ಮರಣದ ಕ್ಷಣ ಬಂದಾಗ ಎಲ್ಲರ ದೃಷ್ಟಿ ಭಾರಮಾಪಕ ಯಂತ್ರದ ಮುಳ್ಳಿನ ಮೇಲೆ ಬಿದ್ದಿತು. ಮುದುಕನ ಸಹಿತ ಮಂಚದ ತೂಕದಲ್ಲಿ ಪುಪ್ಪುಸದಲ್ಲಿಯ ಹವೆಯ ಒತ್ತಡದ ತೂಕವನ್ನು ಕಳೆದರೆ ಸೂಜಿ ಸಾಧಾರಣವಾಗಿ ಒಂದು ಔನ್ಸ್ ಕಡಿಮೆ ತೂಕವನ್ನು ತೋರಿಸಿತ್ತು. ಕಣ್ಣಿಗೆ ಕಾಣಿಸದಿದ್ದರೂ ಶರೀರದಿಂದ ಹೊರಬಿದ್ದು ಹೋದ ವಸ್ತುವಿನ ತೂಕ ಸಾಮಾನ್ಯವಾಗಿ ಒಂದು ಔಂಸಿನಷ್ಟು ಇತ್ತು ಎಂದು ಸ್ಪಷ್ಟವಾಗಿತ್ತು. ಹಾಗಾದರೆ ಇದೇ ಆತ್ಮದ ತೂಕವೆ? ಆತ್ಮ ಸುಮಾರು ಒಂದು ಔಂಸಿನಷ್ಟು ಭಾರವಾಗಿರುವುದೆ?

ಮೆಕ್ಡೂಗಲ್‌ರು ತಮ್ಮ ಪ್ರಯೋಗಗಳನ್ನು ಮುಂದುವರಿಸಿದರು. ಬೇರೆ ಬೇರೆ ರೋಗಿಗಳಲ್ಲಿ ಬೇರೆ ಬೇರೆ ತೂಕಗಳಿರುವುದನ್ನು ಅವರು ಕಂಡುಕೊಂಡರು. ಕಾಲು ಔಂಸಿನಿಂದ ಹಿಡಿದು ಒಂದೂವರೆ ಔಂಸಿನ ವರೆಗೆ ಈ ವಿಶಿಷ್ಟ ವಸ್ತುವಿನ ತೂಕವನ್ನು ಯಂತ್ರ ತೋರಿಸುತ್ತಿತ್ತು. ಮೆಕ್ಡೂಗಲ್‌ರು ಮಾತ್ರವಲ್ಲ, ಬೇರೆ ವೈಜ್ಞಾನಿಕರೂ ಇಂಥ ಪ್ರಯೋಗಗಳಲ್ಲಿ ತೊಡಗಿದ್ದರು. ಲಾಸ್ ಏಂಜಲ್ಸ್‌ನ ಪ್ರೊಫೆಸರ ಟ್ವಾಯಿನಿಂಗ್ ಮತ್ತು ಕಾರ್ನೆಲ್ ವಿಶ್ವವಿದ್ಯಾಲಯದ ಡಾ. ಒಟ್ಟೊ ರಾನ್‌ರು ಕೂಡ ಇಂಥ ಪ್ರಯೋಗಗಳನ್ನು ಮಾಡಿದರು. ೧೯೩೬ ರಲ್ಲಿ ಡಾ. ರಾನ್‌ರು "ಪ್ರತಿಯೊಬ್ಬ ಮನುಷ್ಯನ ಶರೀರದ ಸುತ್ತಲೂ ಕೆಲವೊಂದು ರಹಸ್ಯಮಯ ಕಿರಣಗಳ ಆವರಣವೊಂದು ಇರುತ್ತದೆ. ವಿಶೇಷತಃ ಬೆರಳುಗಳು, ಕಣ್ಣುಗಳು ಮತ್ತು ತುಟಿಗಳಿಂದ ಈ ಕಿರಣಗಳು ಹೊರಡುತ್ತವೆ. ಮರಣ ಸಮಯದಲ್ಲಿ ಇವು ಲುಪ್ತವಾಗುತ್ತವೆ" ಎಂದು ಬರೆದರು.

ಈ ರಹಸ್ಯಮಯ ಆತ್ಮವನ್ನು ವೈಜ್ಞಾನಿಕ ತಕ್ಕಡಿಯಲ್ಲಿ ತೂಗಬಲ್ಲೆವಾದರೆ ಈ ಕಿರಣ ಮಂಡಲದ ಚಿತ್ರವನ್ನು ತೆಗೆದುಕೊಳ್ಳಲಾರೆವೆ ಎಂಬ ವಿಚಾರ ಕೆಲ ಡಾಕ್ಟರರ ಮನದಲ್ಲಿ ಮೂಡಿತು. ಫ್ರಾನ್ಸಿನ ಡಾ. ಹೆನ್ರಿ ಬಾರಾದೂಕ್‌ರು ಒಂದು ವಿಶಿಷ್ಟ ಕ್ಯಾಮೆರಾ ತಯಾರಿಸಿ ಮೃತ್ಯುವಿನ ಫೋಟೋ ತೆಗೆಯಲು ಅನುವಾದರು. ವಿಜ್ಞಾನಿಗಳು ತಮ್ಮ ಪ್ರಯೋಗಗಳ ಉತ್ಸಾಹದಲ್ಲಿ ಕೆಲಸಲ ಎಷ್ಟೊಂದು ಹೃದಯಹೀನರೂ ಆಗುತ್ತಾರೆ ಎಂಬುದಕ್ಕೆ ಬಾರಾದೂಕ್ ಸಾಕ್ಷಿಯಾಗಿದ್ದಾರೆ. ಅವರು ಈ ಪ್ರಯೋಗಗಳ ಸನ್ನಾಹದಲ್ಲಿದ್ದಾಗ ಅವರ ಮಗ ಬೇನೆ ಬಿದ್ದ. ಮಗ ಉಳಿಯುವುದು ಸಾಧ್ಯವಿಲ್ಲ ಎಂದು ತಿಳಿದಾಗ ಡಾ. ಬಾರಾದೂಕ್‌ರು ಔಷಧೋಪಚಾರಗಳ ಹಂಬಲವನ್ನು ಬಿಟ್ಟು ತಮ್ಮ ಕ್ಯಾಮೆರಾ ಸಜ್ಜು ಮಾಡತೊಡಗಿದರು. ಮಗ ಮೂರು ತಾಸಿನ ವರೆಗೆ ಮರಣಾಸನ್ನ ಸ್ಥಿತಿಯಲ್ಲಿದ್ದ. ಆ ಅವಸ್ಥೆಯಲ್ಲಿಯೆ ಡಾಕ್ಟರರು ಆತನ ಆರು ಫೋಟೊಗಳನ್ನು ತೆಗೆದುಕೊಂಡರು. ಆ ಫೋಟೋಗಳನ್ನು ಕುರಿತು ಫ್ರಾನ್ಸಿನಲ್ಲಿ ತುಂಬಾ ವಾದವಿವಾದ ನಡೆಯಿತು. ಮಗನ ಮರಣದ ದುಃಖವನ್ನು ಮರೆತು ಡಾಕ್ಟರರು ಆ ವಾದವಿವಾದದಲ್ಲಿ ಭಾಗವಹಿಸತೊಡಗಿದರು. ಅಷ್ಟರಲ್ಲಿ ದುರ್ಭಾಗ್ಯದಿಂದ ಅವರ ಮೇಲೆ ಇನ್ನೊಂದು ವಿಪತ್ತು ಎರಗಿತು. ಮಗ ಸತ್ತ ಆರು ತಿಂಗಳಲ್ಲಿ ಅವರ ಸುಂದರ ಪತ್ನಿ ಬೇನೆ ಬಿದ್ದಳು. ಅಷ್ಟು

ತ್ತಿಗೆ ತಮ್ಮ ಶೋಧದ ಅಮಲು ಡಾಕ್ಟರ್ ಬಾರಾದೂಕ್‌ರಿಗೆ ಎಷ್ಟು ಏರಿತ್ತೆಂದರೆ ಅವರು ಔಷಧದ ಪೆಟ್ಟಿಗೆ ತೆರೆಯುವ ಬದಲು ತಮ್ಮ ಕ್ಯಾಮೆರಾ ಸಿದ್ಧಮಾಡಿಕೊಳ್ಳಹತ್ತಿದರು. ಇದರ ಪರಿಣಾಮ ಹೆಂಡತಿಯ ಮೇಲೆ ವಿಪರೀತವಾಗಿ ಅವಳು ನಿಜವಾಗಿಯೂ ಸತ್ತೇ ಹೋದಳು. ಡಾಕ್ಟರರು ಅವಳ ಫೋಟೋಗಳನ್ನೂ ತೆಗೆದುಕೊಂಡರು. ಆದರೆ ಈ ದುಃಖದಾಯಕ ಘಟನೆಯಿಂದ ಜನ ಡಾಕ್ಟರರ ಶೋಧದ ಬಗ್ಗೆ ಮಾತಾಡಲು ಕೂಡ ಹಿಂಜರಿಯುತ್ತಿದ್ದರು.

ಕ್ಯಾಲಿಫೋರ್ನಿಯದ ಡಾ. ಎಫ್. ಎಫ್. ಸ್ಟ್ರಾರು ಈ ಪರಂಪರೆಯನ್ನು ಮುಂದುವರಿಸಿಕೊಂಡು ಬಂದು ಒಂದು ದಿನ ಜನರಿಗೆ ಈ ವಿಷಯದಲ್ಲಿ ಏನೂ ಸಂದೇಹವುಳಿಯದಂತೆ ಮಾಡಿದರು. ಅವರು ವೈಜ್ಞಾನಿಕರ ಮತ್ತು ನಾಗರಿಕರ ದೊಡ್ಡ ಸಭೆ ಕೂಡಿಸಿದರು. ಪತ್ರಿಕೆಗಳ ಫೋಟೋಗ್ರಾಫರರೂ ಇದ್ದರು. ವೇದಿಕೆಯ ಮೇಲೆ ೬೦ ವ್ಯಾಟ್ ಬಲ್ಬೊಂದು ಮಾತ್ರ ಉರಿಯುತ್ತಿತ್ತು. ಹಾಲ್‌ನಲ್ಲಿಯ ಉಳಿದೆಲ್ಲ ದೀಪಗಳನ್ನಾರಿಸಲಾಯಿತು. ನೆರೆದಿದ್ದವರಲ್ಲಿ ಒಬ್ಬ ಅಂಗಡಿಕಾರನನ್ನು ಪ್ರಯೋಗಕ್ಕೆ ಅಣಿ ಮಾಡಲಾಯಿತು. ಆತ ಹೋಗಿ ವೇದಿಕೆಯ ಮೇಲೆ ನಿಂತ.

ಎದೆಯ ಮೇಲೆ ಎರಡೂ ಕೈಗಳನ್ನಿಟ್ಟು ಅಂಗೈಯನ್ನು ತುಸು ಮುಂದಕ್ಕೆ ಮಾಡಿ ಆತ ಕಣ್ಮುಚ್ಚಿಕೊಂಡ. ಫೊಟೊಗ್ರಾಫರರು ತಮ್ಮ ಸಾಮಾನ್ಯ ಕ್ಯಾಮೆರಾಗಳ ಗುಂಡಿಯನ್ನೊತ್ತಿದರು. ಆಮೇಲವರು ತಾವು ತೆಗೆದ ಫೋಟೋಗಳನ್ನು ತೊಳೆದು ಮುದ್ರಿಸಿ ನೋಡಿದಾಗ ಪರಿಣಾಮ ಆಶ್ಚರ್ಯಕಾರಕವಾಗಿತ್ತು. ಏನೋ ರಹಸ್ಯಮಯ ಕಿರಣ ಮಂಡಲ ಮನುಷ್ಯನ ಸುತ್ತ ಇರುವುದು ನಿಜವೇ ಆಗಿತ್ತು. ಈ ಫೊಟೊ ತೆಗೆದುಕೊಳ್ಳುವಾಗ ಮೋಸವೇನೂ ನಡೆದಿರಲಿಲ್ಲವೆಂದು ವೈಜ್ಞಾನಿಕರೆಲ್ಲ ಏಕಕಂಠದಿಂದ ಹೇಳಿದರಾದರೂ ಈ ರಹಸ್ಯದ ಅರ್ಥ ಯಾರಿಗೂ ಆಗಲಿಲ್ಲ.

ಜಾಗತಿಕ ಯುದ್ಧದ ಗಡಬಿಡಿಯಲ್ಲಿ ಮತ್ತು ಆ ಮೇಲೆ ವೈಜ್ಞಾನಿಕರ ಗಮನ ಈ ವಿಷಯದಿಂದ ಬೇರೆಡೆ ಹೊರಳಿತು. ಅವರು ಪರಮಾಣು ಶಸ್ತ್ರ ಮತ್ತು ಅಂತರಿಕ್ಷ ಯಾತ್ರೆಯ ಶೋಧದಲ್ಲಿ ತೊಡಗಿದರು. ಆದರೂ ಸೂಕ್ಷ್ಮವಾದ ಪರಮಾಣು ಯಂತ್ರಗಳ ಸಹಾಯದಿಂದ ಮತ್ತೆ ವೈಜ್ಞಾನಿಕರು ಮೃತ್ಯುವಿನ ರಹಸ್ಯದ ಶೋಧಕಾರ್ಯದಲ್ಲಿ ತೊಡಗುವರೆಂಬ ಆಶೆಯಿದೆ. ಆತ್ಮವೆಂದರೆ ನಿಜವಾಗಿಯೂ ಏನು? ಅದು ಹೇಗಿದೆ? ಅದು ದೇಹದಲ್ಲಿ ಯಾಕೆ ಬರುತ್ತದೆ? ಯಾಕೆ, ಎಲ್ಲಿ, ಹೇಗೆ ಹೊರಟುಹೋಗುತ್ತದೆ ಎಂಬುದೆಲ್ಲ ತಿಳಿದು ಬರುವ ಸಂಭವವಿದೆ. *

## ಜೀವನ

ಜೀವನ ವಿಧಿಯ ಲೀಲೆ. —ಬ್ಲೆಕ್ ಲೊಕ್

ಜೀವನ ಅದ್ಭುತಗಳ ಮಾಲೆ. —ಎಮರ್‌ಸನ್

ಜೀವನವೆಂದರೆ ವಿಜಯವಲ್ಲ; ಕದನ. —ಹಿಚ್‌ಕೊಕ್

ಜೀವನವು ಒಂದು ಸಮುದ್ರಯಾನ. —ಹ್ಯೂಗೊ

ಜೀವನವೆಂದರೆ ಅಭ್ಯಾಸಗಳಿಂದ ಪೋಣಿಸಿದ ಮಾಲೆ. —ಎಮಿಯಲ್

ಜೀವನ ಹೂವಿನ ಹಾಸಿಗೆಯಲ್ಲ, ತುಂಬ ಕಂಟಕಗಳಿಂದ ತುಂಬಿದೆ.

—ಇಂಗ್ಲೀಷ್ ಗಾದೆ

ಸಂಗ್ರಹ: ಕೆ. ರಮೇಶ ಶೈ

ಅಂಚೆಯಾಳು ಜಾರಪ್ಪನ
ಹೃದಯ ಉದಾತ್ತ
ಮೋಸ ಮಾಡಿತು



# ಹಿಂತಿರುಗಿದ ಪತ್ರ

ಪರಮಾನಂದ

ಅಂಚೆಯಾಳು ಜಾರಪ್ಪ ಎಂದಿನಂತೆಯೇ ತನ್ನ ಕಾಗದ ತುಂಬಿದ ಚೀಲ ಹಿಡಿದು, ಹಳ್ಳಿಯತ್ತ ಹೊರಟ. ದಾರಿ ನಡೆಯುತ್ತ ತನ್ನ ಚೀಲದಿಂದ ಒಂದೊಂದೇ ಪತ್ರ ತೆಗೆದು ವಿಳಾಸ ಓದತೊಡಗಿದ, ಊರಿನ ಗಣ್ಯ ಶ್ರೀಮಂತರ ಹೆಸರೂ ತೀರ ಬಡವನ ಹೆಸರೂ ಆ ಪತ್ರಗಳಲ್ಲಿದ್ದುವು. ಪತ್ರಗಳನ್ನು ನೋಡಿ, ಅವನು ಹೋಗಬೇಕಾದ ಮನೆಗಳನ್ನೆಲ್ಲ ಲೆಕ್ಕ ಹಾಕಿದ. ಬೆಳಗಿನ ಕಾಫಿ ಸಿಗುವ ಮನೆಗೆ ಆರಂಭದಲ್ಲಿ ಅವನು ಹೋಗಬೇಕು; ಊಟ ಸಿಗುವ ಮನೆಗೆ ಕೊನೆಗೆ ಹೋಗಬೇಕು...ಇವೆಲ್ಲ ಅವನ ಲೆಕ್ಕ.

ಪೋಸ್ಟ್‌ಮನ್ ಕೆಲಸದಲ್ಲಿಯೇ ಅವನ ಗಡ್ಡ ಹಣ್ಣಾಗಿತ್ತು; ಹಲ್ಲು ಉದುರಿತ್ತು. ಹಳ್ಳಿಯ ಪ್ರತಿ ಮನೆಯೂ ಅವನಿಗೆ ಗೊತ್ತು. ಪ್ರತಿ ಮನೆಯ ಹುಡುಗರಿಗೂ ಅವನ ಗುರುತು. ಜಾರಪ್ಪನ ಖಾಕಿ ಪೇಟದ ತುದಿ ಕಂಡ ಕೂಡಲೇ ಹುಡುಗರೆಲ್ಲ, 'ಹೋ ಅಜ್ಜ ಬಂದ' ಎಂದು ಕೈ ತಟ್ಟಿ ಸಂತೋಷ ವ್ಯಕ್ತಪಡಿಸುವರು. ಆಗ ಜಾರಪ್ಪನಿಗೂ ಎಲ್ಲಿಲ್ಲದ ಆನಂದ. ಅವನು ತನ್ನ ಬಿಳಿ ಮೀಸೆಯ ಮೇಲೆ ಕೈಹಾಕಿ, ಸೊಂಟಕ್ಕೆ ಕೈಹಿಡಿದು, ಮೆಲ್ಲಗೆ ಹಾಡುತ್ತ ಕುಣಿದು ನಕ್ಕು ಬಿಡುವ. ಇದನ್ನು ಕಂಡು ಮಕ್ಕಳು ಇನ್ನಷ್ಟು ಉತ್ಸಾಹಗೊಂಡು ಅವನ ಮೀಸೆ ಎಳೆಯುವರು; ಕೊಡೆಯನ್ನು ಎಳೆದು, ಬಿಡಿಸಿ, ಚಕ್ರದಂತೆ ತಿರುಗಿಸುವರು; ಚೀಲವನ್ನು ಎತ್ತಿಕೊಂಡು ಓಡುವರು. ಆದರೂ ಜಾರಪ್ಪ ಮಾತನಾಡಲಾರ. ಹುಡುಗರ ಈ ಆಟ-ಪಾಟ ನೋಡುತ್ತ ನಿಂತುಬಿಡುವ. ಅಂಥ ಆಟಗಳನ್ನು ಕಂಡರೆ ಅವನಿಗೆ ಆನಂದ; ಮಕ್ಕಳನ್ನು ಕಂಡರೆ ಅಕ್ಕರೆ.

ಹೀಗೆ ಮಕ್ಕಳ ಆಟಪಾಟ ನೋಡುತ್ತ ನಿಂತಿರುವಾಗ ಅವನ ಹಿಂದಿನ ಜೀವನದ ನೆನಪಾಗಿ ಕಣ್ಣಿಂದ ಒಂದೆರಡು ಅಶ್ರು ಬಿಂದುಗಳು ಉದುರುವುದೂ ಉಂಟು; ಬಾಯಿಂದ ಏನಾದರೂ ಧ್ವನಿ ಹೊರಡುವುದೂ ಉಂಟು. ಇಂಥ ಸ್ಥಿತಿ

ಯನ್ನು ಕಂಡ ಹಳ್ಳಿಯ ಹೆಂಗಳೆಯರು 'ಪಾಪ, ಜಾರಪ್ಪಣ್ಣ ನಿತ್ಯ ದುಃಖಿಯಾಗಿ ಹೋದ' ಎಂದು ಮರುಕದಿಂದ ಮಾತನಾಡುತ್ತಿರುವುದೂ ಉಂಟು.

ಮಕ್ಕಳ ಆಟಪಾಟಗಳನ್ನು ನೋಡುತ್ತ ನಿಂತ ಜಾರಪ್ಪನ ಮನಸ್ಸು ಎತ್ತಲೋ ಓಡುವುದು. ಅವನ ಹಿಂದಿನ ಬಾಲ್ಯ, ವಿದ್ಯಾಭ್ಯಾಸ, ಕೆಲಸ, ಮದುವೆ, ಮಗು– ಎಂದೆಲ್ಲ ಸ್ಮೃತಿ ಪಟಲದ ಮೇಲೆ ಬಂದು ನಲಿಯುವುದು. ಆಗ ಅವನ ಹೃದಯ ಕೊತಕೊತನೆ ಕುದಿದು ನಿಡುಸುಯ್ಲು ಹೊರಹೊಮ್ಮುವುದು.

ಆ ಪುಟ್ಟ ಸುಂದರ ಸಂಸಾರ ಎಷ್ಟೊಂದು ಆನಂದದಿಂದ ಸಾಗುತ್ತಿತ್ತು! ದಿನದ ದಣಿವಿನ ಶ್ರಮವಾಗಲಿ, ದುಃಖದ ಕಾರ್ಮೋಡವಾಗಲಿ ಇಲ್ಲದೆ ಸುಂದರ ಸಂಜೆಯಂತೆ ಆನಂದಿತವಾಗಿತ್ತು. ಬೆಳಗಿಂದ ಸಂಜೆಯ ತನಕ ದುಡಿದು ಬಂದ ಜಾರಪ್ಪ ಪುಟ್ಟ ಹುಡುಗನೊಂದಿಗೆ ಆಡುತ್ತಿದ್ದ. ಅವನನ್ನು ಬೆನ್ನ ಮೇಲೆ ಕುಳ್ಳಿರಿಸಿ ಓಡುತ್ತಿದ್ದ. ತಲೆಯ ಮೇಲೆ ಕುಳ್ಳಿರಿಸಿ ಕುಣಿಯುತ್ತಿದ್ದ.

'ನೋಡೇ ನನ್ನ ಮೀಸೆ ಎಳೆಯುತ್ತಾನೆ ಕಳ್ಳ' ಎಂದು ಜಾರಪ್ಪ ಒಳಗೆ ಕೆಲಸ ಮಾಡುತ್ತಿದ್ದ ಹೆಂಡತಿಯ ಲಕ್ಷ್ಯವನ್ನು ತನ್ನೆಡೆಗೆ ಸೆಳೆಯಲು ಯತ್ನಿಸುತ್ತಿದ್ದ.

ಆಕೆ ಮಗನ ಆಟವನ್ನು ಕಂಡು, ಗಂಡನ ಸಂತಸವನ್ನು ಕಂಡು ಸಂತೋಷಿಸುತ್ತಿದ್ದಳು. ಆಕೆ ನುಡಿಯುತ್ತಿದ್ದಳು, 'ನಿಮಗೆ ಹಾಗೇ ಆಗಬೇಕು.'

ಒಳಗೆ ಜಾರಪ್ಪನ ಹೆಂಡತಿ ಅಡುಗೆ ಮಾಡುತ್ತಿರುವಾಗ ತಂದೆ-ಮಗ ಹೊರಗೆ ಮಾತನಾಡುತ್ತ ಕುಳ್ಳಿರುತ್ತಿದ್ದರು. 'ನಾನು ಡ್ರೈವಲನಾಗುತ್ತೇನೆ ಅಪ್ಪ. ನಿನ್ನನ್ನು 'ಬೂ'ವಿನಲ್ಲಿ ಕುಳ್ಳಿರಿಸಿ ಹಳ್ಳೀಲಿ ತಿರುಗಿಸುತ್ತೇನೆ...ನನ್ನಪ್ಪನ ಕಾಲು ನೋವು...ಪಾಪ' ಎಂದು ತನ್ನ ಪುಟ್ಟ ಕೈಗಳಿಂದ ಮೃದುವಾಗಿ ತಂದೆಯ ಕಾಲನ್ನು ಒತ್ತುತ್ತಿದ್ದ.

ಆ ಸುಖಸ್ಪರ್ಶದಿಂದ ಇಹಲೋಕವನ್ನೆ ಮರೆತ ಜಾರಪ್ಪ ಮಗುವನ್ನು ಬಿಗಿದಪ್ಪಿ, 'ಆಗಲಿ ನನ್ನ ಮಗು' ಎಂದು ಲೊಟಲೊಟನೆ ಚುಂಬಿಸುತ್ತಿದ್ದ.

ಆ ಒಂದು ದಿನ ಜಾರಪ್ಪ ತನ್ನ ಕೆಲಸ ಮುಗಿಸಿ, ಬೇಗನೆ ಮನೆಗೆ ಬಂದ. ಅಂಗಳಕ್ಕೇರುವಾಗಲೆ ಮನೆಯತ್ತ ನೋಡಿ ಅವನಿಗೂ ಎದೆ ಜುಂ ಅಂದಿತು. ಎಂದಿನಂತೆ ಮಗುವಿನ ನಗೆ ಕೇಳಲಿಲ್ಲ; ಹೆಂಡತಿಯ ಮಾತು ಕಿವಿಗೆ ಬೀಳಲಿಲ್ಲ. ಏನೊ ಒಂದು ಹೊಸ ತರಹ ಕಂಡಿತು. ಹೃದಯ ನಡುಗಿತು; ಧೈರ್ಯ ಉಡುಗಿತು; ಕಾಲು ನಡುಗತೊಡಗಿತು.

ಕುಸಿಯುತ್ತಿರುವ ಧೈರ್ಯಕ್ಕೆ ಸಮಾಧಾನ ಕೊಡುತ್ತ ಒಳಹೊಕ್ಕ. ಹೆಂಡತಿಯ ಮಡಿಲಲ್ಲಿ ಮಗು ಕಣ್ಣು ಮುಚ್ಚಿ ಮಲಗಿತ್ತು. ಆಕೆ ಅವರ ಬೆನ್ನಿಗೆ ಮೃದುವಾಗಿ ತಟ್ಟುತ್ತ, ಕಣ್ಣೀರಿಳಿಸುತ್ತ ಕುಳಿತಿದ್ದಳು.

ಜಾರಪ್ಪ ಮನೆಯಿಂದ ಹೋಗುವಾಗ ಸುಖವಾಗಿದ್ದ ಮಗು ಬರುವಾಗ ಹೀಗೆ ಮಲಗಿರುವುದನ್ನು ಕಂಡು ಅವನ ಎದೆ ಬಿರಿಯಿತು. 'ಏನಾಯಿತೇ ಮಗುವಿಗೆ?' ಎಂದು ಆರ್ತನಾಗಿ ಕೇಳಿದ

ಅಸಹಾಯಳಾಗಿ ಕುಳಿತ ಆಕೆಯ ಎದುರು ಸಹಾಯದ ನೆರಳು ಸುಳಿದ ಕೂಡಲೆ ಕಂಬನಿಗೆ ಹಾಕಿದ ಕಟ್ಟೆ ದಿಸಿಲ್ಲನೆ ಒಡೆಯಿತು. ಆಕೆ ಅಳುವುದೊಂದನ್ನು ಹೊರತು ಉಳಿದುದೇನನ್ನೂ ಮಾಡಲಿಲ್ಲ.

ಅಲ್ಲಿ ಮೌನವೇ ಮಾತಾಗಿತ್ತು; ಕಣ್ಣೀರೇ ವಿಷಯವನ್ನು ತಿಳಿಸಿತ್ತು.

ಹುಡುಗ ಜ್ವರದಿಂದ ಕುದಿಯುತ್ತಿದ್ದ.

'ಅಯ್ಯೊ ಕಂದಾ ಏನಾಯಿತು?' ಎಂದು ಜಾರಪ್ಪ ಎದೆಎದೆ ಹೊಡೆದುಕೊಂಡ.

ಮಗುವಿನ ಈ ಸ್ಥಿತಿಯ ಮುಂದೆ ಎರಡು ಮೂಕ ಜೀವಿಗಳು ಮುಂದೇನು ಮಾಡಬೇ

# ವನಸ್ಪತಿ

## ...ಭಾರತದಲ್ಲಿ ಆಹಾರಪದಾರ್ಥಗಳ ಶುದ್ಧತೆಯ ಆದರ್ಶ!

---

ನಮ್ಮ ದೇಶದಲ್ಲಿ ವನಸ್ಪತಿಯನ್ನು ಉಪಯೋಗಿಸುತ್ತಿರುವ ಲಕ್ಷೋಪಲಕ್ಷ ಜನರು ಅದರ ಶುದ್ಧತೆಯಲ್ಲಿ ಭರವಸೆಯಿಡುತ್ತಾರೆ. ಜನರ ಆರೋಗ್ಯರಕ್ಷಣೆಗಾಗಿ ಸರಕಾರದವರೂ ವನಸ್ಪತಿ ಉದ್ದಿಮೆಯವರೂ ವನಸ್ಪತಿಯು ಪರಿಪೂರ್ಣವಾಗಿ ಶುದ್ಧವಾಗಿರುವಂತೆ ಕಠಿಣ ನಿಯಮಗಳನ್ನು ವಿಧಿಸಿದ್ದಾರೆ. ಈ ನಿಯಮಗಳಿಗೆ ಸ್ವಲ್ಪವೂ ತಪ್ಪದಂತೆ ವನಸ್ಪತಿ ತಯಾರಿಸಲ್ಪಡುತ್ತದೆ... ಅದು ಉತ್ತಮವಾದ, ಪರಿಶುದ್ಧ ಸಸ್ಯ ಸ್ನಿಗ್ಧಪದಾರ್ಥವಾಗಿದೆ ಎಂದು ಖಚಿತಮಾಡಿಕೊಳ್ಳಲು ತಯಾರಿಕೆಯ ಪ್ರತಿಯೊಂದು ಸ್ಥಿತಿಯಲ್ಲಿಯೂ ಅದನ್ನು ಪರೀಕ್ಷೆಗೆ ಒಳಪಡಿಸಲಾಗುತ್ತದೆ!

ಉತ್ತಮ ಸಸ್ಯ ಎಣ್ಣೆಗಳನ್ನು ಶುದ್ಧೀಕರಿಸಿ, ಹೈಡ್ರೋಜನೇಶನ್ ಮೂಲಕ ಗಟ್ಟಿ ಮಾಡಿ, ವಾಸನೆ ತೆಗೆದು ಮತ್ತು ಅವುಗಳಿಗೆ ವಿಟಮಿನ್‌ಗಳನ್ನು ಸೇರಿಸಿಯೇ ವನಸ್ಪತಿ ತಯಾರಿಸಲ್ಪಡುತ್ತದೆ. ಅದರ ಪ್ರತಿ ಗ್ರಾಮ್‌ನಲ್ಲಿಯೂ 25 ಇಂಟರ್‌ನ್ಯಾಶನಲ್ ಯೂನಿಟ್ ವಿಟಮಿನ್ 'ಎ' ಮತ್ತು 2 ಇಂಟರ್‌ನ್ಯಾಶನಲ್ ಯೂನಿಟ್ ವಿಟಮಿನ್ 'ಡಿ' ಸೇರಿಸಲ್ಪಡುತ್ತದೆ. ಆದುದರಿಂದಲೆ ವನಸ್ಪತಿ ಅತ್ಯುತ್ತಮವಾದ ಗಟ್ಟಿ ಸ್ನಿಗ್ಧಪದಾರ್ಥದಷ್ಟೇ ಪುಷ್ಟಿಕರವಾಗಿದೆ ಮತ್ತು ಸಾಮಾನ್ಯ ಸಸ್ಯ ಎಣ್ಣೆಗಳಿಗಿಂತಂತೂ ನಿಶ್ಚಯವಾಗಿಯೂ ಹೆಚ್ಚು ಪುಷ್ಟಿಕರವಾಗಿದೆ. ಅಷ್ಟು ಮಾತ್ರವಲ್ಲದೆ, ಅದರ ಶುದ್ಧತೆ ಮತ್ತು ಪೌಷ್ಟಿಕತೆ ಸ್ವಲ್ಪವೂ ಕಡಿಮೆಯಾಗಿಲ್ಲವೆಂದು ಖಚಿತಪಡಿಸಲು ಅದನ್ನು ಸ್ವಚ್ಛತಾಪೂರ್ವಕವಾಗಿ ಡಬ್ಬಗಳಲ್ಲಿ ತುಂಬಿಸಿ ಸೀಲ್ ಮಾಡಲಾಗುತ್ತದೆ. ವನಸ್ಪತಿ ಶುದ್ಧ ಮತ್ತು ಉತ್ಕೃಷ್ಟವಾಗಿರುವುದು ಮಾತ್ರವಲ್ಲದೆ ಮಿತವ್ಯಯಕರವೂ ಆಗಿರುತ್ತದೆ. ಈ ರೀತಿಯಲ್ಲಿ ಒಂದು ಉತ್ತಮವಾದ ಅಡಿಗೆಯ ಸ್ನಿಗ್ಧಪದಾರ್ಥದಲ್ಲಿ ಮುಖ್ಯವಾಗಿ ಇರಬೇಕಾದ ಎಲ್ಲಾ ಗುಣಗಳು ವನಸ್ಪತಿಯಲ್ಲಿ ಇರುತ್ತವೆ.

ಈ ಕಾರಣಗಳಿಂದಾಗಿ ವನಸ್ಪತಿ ನಮ್ಮ ದೇಶದ ಸಾವಿರಾರು ಮನೆಗಳಲ್ಲಿ ಅಡಿಗೆಯ ಅತ್ಯಂತ ಜನಪ್ರಿಯ ಸಾಧನವಾಗಿದೆ. ಆದುದರಿಂದಲೆ 30 ವರ್ಷಗಳ ಹಿಂದೆ 30,000 ಟನ್‌ಗಳಷ್ಟು ಉಪಯೋಗಿಸಲ್ಪಡುತ್ತಿದ್ದ ವನಸ್ಪತಿ ಇಂದು 3,38,000 ಟನ್‌ಗಳಿಗಿಂತಲೂ ಹೆಚ್ಚು ಉಪಯೋಗಿಸಲ್ಪಡುತ್ತದೆ! ಕೃಷಿ, ವಿಜ್ಞಾನ ಮತ್ತು ತಾಂತ್ರಿಕ ಕಲಾಕೌಶಲ್ಯಗಳ ಸಹಯೋಗದಿಂದ ತಯಾರಾಗುವ ವನಸ್ಪತಿ ಭಾರತೀಯರಿಗೆ... ನಿಮಗೆ, ನಿಮ್ಮ ಕುಟುಂಬದವರೆಲ್ಲರಿಗೆ... ನಿತ್ಯದ ಅಡಿಗೆ ಮಾಡಲು ಆದರ್ಶವಾದ ಸ್ನಿಗ್ಧಪದಾರ್ಥವಾಗಿದೆ!

**ವನಸ್ಪತಿ ಮತ್ತು ಅಂತಹ ಸ್ನಿಗ್ಧಪದಾರ್ಥಗಳು ಜಗತ್ತಿನಲ್ಲೆಲ್ಲಾ ಉಪಯೋಗಿಸಲ್ಪಡುತ್ತವೆ!**

ಹೆಚ್ಚಿನ ವಿವರಗಳಿಗೆ ಈ ವಿಳಾಸಕ್ಕೆ ಬರೆಯಿರಿ:

**ದಿ ವನಸ್ಪತಿ ಮ್ಯಾನ್ಯುಫ್ಯಾಕ್ಚರರ್ಸ್ ಅಸೋಸಿಯೇಶನ್ ಆಫ್ ಇಂಡಿಯಾ**
ಇಂಡಿಯಾ ಹೌಸ್, ಫೋರ್ಟ್ ಸ್ಟ್ರೀಟ್,
ಬೊಂಬಾಯಿ–1

JWT VMA 4262

ಕಾಲವನ್ನು ಅರಿಯದೆ ಮಗುವನ್ನೇ ನೋಡುತ್ತ ಕೂತಿದ್ದುವು.

ಜಾರಪ್ಪನಿಗೆ ಏನು ತೋರಿತೊ. ಗಡಬಿಡಿಸಿ ಎದ್ದು, 'ನಾನು ಔಷಧಿ ತರುತ್ತೇನೆ. ಮಗುವಿಗೆ ಬಾಯಾರಿಕೆಗೆ ಬೇಕಾದರೆ ಕೊಡು' ಎಂದು ಹೇಳಿ ಹೊರಟೇಬಿಟ್ಟ.

*

ಬೆಳಗಿನ ಜಾವದ ತನಕ ಜಾರಪ್ಪ ಕಣ್ಣು ಮುಚ್ಚಲಿಲ್ಲ. ಮಗುವಿಗೆ ಔಷಧಿ ಕೊಟ್ಟಾಯಿತು, ವಿಭೂತಿ ಹಾಕಿಯಾಯಿತು, ಪಂಡಿತರ ಮಾತ್ರೆ ಅರೆದು ಕೊಟ್ಟಾಯಿತು. ಆದರೆ ಹುಡುಗ ಮಾತನಾಡಲೂ ಇಲ್ಲ; ಜ್ವರ ಬಿಡಲೂ ಇಲ್ಲ.

ಆಗಾಗ ಜಾರಪ್ಪ ಮಗುವನ್ನು ಕರೆದು, 'ಬಾಯಾರಿಕೆಗೆ ಬೇಕೆ?' ಎಂದು ಕೇಳುತ್ತಿದ್ದ. ಒಮ್ಮೆ ಕಣ್ಣು ಬಿಟ್ಟು ಸುತ್ತಲೂ ನೋಡಿದ ಮಗು ಪುನಃ ಹಾಗೆ ಮಲಗುತ್ತಿತ್ತು.

ಬೆಳಗಿನ ಹೊತ್ತಿನಲ್ಲಿ ಮಗುವಿನ ಮೈ ನೋಡುವಾಗ ಮೈ ದುಂಡಗಾಗಿ, ದಪ್ಪ ದಪ್ಪವಾಗಿ ತೋರುತ್ತಿತ್ತು. ಜಾರಪ್ಪ ಹೌಹಾರಿದ. ಬರಿ ಜ್ವರವಲ್ಲ, ಎಂದವನಿಗೆ ತೋರಿತು. ಹಳ್ಳಿಯ ಪಂಡಿತನನ್ನು ಕರೆ ತಂದ. ಔಷಧಿ ಕುಡಿಸಿದ.

ಆದರೆ ವಿಧಿ ಅವನಿಂದ ಹುಡುಗನ ಜೀವವನ್ನು ಕಸಿದುಕೊಂಡಿತು. ಎದೆಎದೆ ಹೊಡೆದುಕೊಂಡು ದಂಪತಿಗಳು ಅತ್ತರು. ಅಯ್ಯೋ ನನ್ನ ಕಂದಾ ಎಂದು ಜಾರಪ್ಪ ಹುಚ್ಚನಂತೆ ಕುಣಿದ.

ಆ ಮೇಲೆ ಜಾರಪ್ಪ ಎಂದಿನಂತೆ ಮನುಷ್ಯನಾಗಲಿಲ್ಲ. ಒಂದು ಮೂಲೆ ಸೇರಿ ಕುಳಿತು ಗೋಡೆಯ ಸುಣ್ಣದ ಗಾರೆ ನೋಡುತ್ತಿದ್ದ. ಅವನ ಹುಡುಗ ನಕ್ಕಂತೆ, ಅತ್ತಂತೆ, ಅಪ್ಪಾ ಎಂದಂತೆ ಅವನಿಗೆ ಕೇಳಿಸುತ್ತಿತ್ತು. ಕಣ್ಣುಜ್ಜಿ, ಕಿವಿಯಾನಿಸಿದರೆ ಅದೆಲ್ಲವೂ ಸ್ವಪ್ನವಾಗಿತ್ತು! ಊಟ ಬೇಡ, ಮಾತು ಬೇಡ, ಮನೆ ಬೇಡ- ಎನ್ನುವ ಸ್ಥಿತಿಗೆ ಅವನು ಬಂದ.

ಹಾಗೇ ಇರಲು ಸಾಧ್ಯವೇ? ಅವನ ರಜೆ ಮುಗಿದಿತ್ತು. ಕೆಲಸಕ್ಕೆ ಹೋಗಬೇಕು. ಕೆಲಸವೂ ತಪ್ಪುತಪ್ಪಾಗಿ ಮಾಡುತ್ತಿದ್ದ. ಹಿಡಿದ ದಾರಿಯೂ ತಪ್ಪುತ್ತಿತ್ತು. ನಗುನಗುತ್ತಿದ್ದ ಜಾರಪ್ಪನ ಮುಖ ಸುಕ್ಕುಗಟ್ಟ ತೊಡಗಿತ್ತು.

ವರ್ಷಗಳು ಸಂದವು. ಹೆಂಡತಿಯಿಂದ ಸಂತಸದ ಸುದ್ದಿ ಹೊರಬಿತ್ತು. ಆ ಮನೆ ತುಂಬಲು, ಒಡೆದ ಮನವನ್ನು ಸಜ್ಜುಗೊಳಿಸಲು ಹೊಸತೊಂದು ಜೀವ ಬರಲಿದೆ! ಆ ಕಹಿ ನೆನಪಿನಲ್ಲಿಯೂ ಈ ಸಿಹಿ ಸುದ್ದಿ ಜಾರಪ್ಪನ ಹೃದಯಕ್ಕೆ ಒಂದಿಷ್ಟು ಜಲ ಸಿಂಚನದಂತೆ ಆಯಿತು.

*

ಮತ್ತೊಂದು ಭೀತಿ ಜಾರಪ್ಪನನ್ನು ಕಾಡಿತು. ಮೂರು ದಿನಗಳಿಂದ ಹೆಂಡತಿ ನರಳುತ್ತಿದ್ದಾಳೆ. ಹೊಸ ಜೀವ ಹೊರ ಬರಲು ಒದ್ದಾಡುತ್ತಿದೆ. ಹೆಂಗಸರೆಲ್ಲ ಸುತ್ತುಗಟ್ಟಿದ್ದಾರೆ. ಅಲ್ಲಿನ ಗಂಭೀರ ಪರಿಸ್ಥಿತಿಯನ್ನು ಕಂಡ ಜಾರಪ್ಪ ಕೈಕೈ ಹಿಸುಕಿಕೊಳ್ಳುತ್ತಾನೆ. 'ದೇವರೇ, ಕಾಪಾಡು' ಎಂದು ಮೊರೆ ಇಡುತ್ತಾನೆ. ದೀನವಾಗಿ ಅಲ್ಲಿ ಕೂಡಿದ ಜನರನ್ನು ನೋಡಿ ಧೈರ್ಯ ತಂದುಕೊಳ್ಳಲು ಯತ್ನಿಸುತ್ತಾನೆ.

ಆದರೆ ಧೈರ್ಯ ಕಳಚಿತ್ತು. ಸಮಗ್ರ ನಾಲ್ಕು ದಿವಸಗಳ ಹೋರಾಟದ ಅನಂತರ ಆಕೆಯೂ ಕಣ್ಣು ಮುಚ್ಚಿದಳು.

ನಡುನೀರಲ್ಲಿ ಕೈಬಿಟ್ಟಂತೆ ಆಗಿತ್ತು ಜಾರಪ್ಪನಿಗೆ. ಕೇವಲ ಕೈಕಾಲು ಹೊಡೆಯುವುದು ಹೊರತು ಮತ್ತೇನೂ ಅವನು ಮಾಡಲಾರನಾದ. ಎಲ್ಲ ದುಃಖ ಮರೆಯಲು ಕೆಲಸವನ್ನೆ ಚೆನ್ನಾಗಿ ಹಚ್ಚಿಕೊಂಡ. ಹಳ್ಳಿಯ ಮನೆ ಮನೆಗೆ ಹೋಗಿ ಅಲ್ಲಿನ ಹೆಂಗೆಳೆಯರೊಡನೆ ಮಾತನಾಡಿದ; ಮಕ್ಕಳೊಡನೆ ಆಡಿದ; ಸಿಕ್ಕಲ್ಲಿ ಉಂಡ; ಹಳ್ಳಿ ಮಕ್ಕಳಿಗೆಲ್ಲ ತಿಂಡಿ ಹಂಚಿದ; ತಾನೂ ತಿಂದ– ಅದೇ ತೃಪ್ತಿ ಎಂದುಕೊಂಡ, ಅದೇ ತನ್ನ ಸುಖ ಎಂದು ತಿಳಿದ. ಹಾಗೆಯೆ ವರ್ಷಗಳು ಸಂದವು......

*

ಚೀಲದಲ್ಲಿ ಕೊನೆಯ ಪತ್ರವೊಂದು ನೂರಾರು ಮುದ್ರೆ ಹೊತ್ತುಕೊಂಡು, ಮುದ್ದೆಯಾಗಿ

ಬಿದ್ದಿತ್ತು. ಅದೊಬ್ಬ ಹಳ್ಳಿಯ ಹುಡುಗನ ಹೆಸರಿಗಿತ್ತು. ಯಾವುದೊ ಪತ್ರಿಕೆಯಲ್ಲಿ ಬಂದ ಸ್ಪರ್ಧೆಗೆ ಕಳುಹಿಸಿದ ಉತ್ತರ, ಅಂಚೆ ಚೀಟು ಸಾಲದೆ ಬೇರಿಂಗ್ ಆಗಿ ತಿರುಗಿ ಬಂದಿತ್ತು. ಎರಡು ಆಣೆ ಹುಡುಗನಿಂದ ಪಡೆದುಕೊಳ್ಳಬೇಕಿತ್ತು.

ಆ ಕಾಗದವನ್ನು ಹಾಗೆ ಹೀಗೆ ತಿರುಗಿಸಿ ನೋಡಿದ. ಮಕ್ಕಳ ಕಾಗೆಕಾಲು ಅಕ್ಷರ. ಏನೇನೋ ತಪ್ಪು ವಿಳಾಸ. ಅದನ್ನು ನೋಡಿ ಜಾರಪ್ಪನಿಗೆ ತೀರ ಹಿಂದಿನ ನೆನಪು ಬಂತು. ಸೀಸದ ಕಡ್ಡಿ ಹಿಡಿದು ಕಾಗದ ತುಂಬ ಗೀಚಿ ಗಂಭೀರವಾಗಿ ಅವನ ಮಗ ಹೇಳುತ್ತಿದ್ದ, 'ನೋಡಪ್ಪ ಲಾಮು... ಇಕೊಪ್ಪ ಲಕ್ಕಸ'— ಈ ಮಾತುಗಳು ಅವನ ಕಿವಿಗೆ ಕೇಳಿಸಿದಂತಾಯಿತು. ಒಮ್ಮೆ ಕಣ್ಣು ಒದ್ದೆಯಾಯಿತು. ಹಾಗೇ ನೋಡುತ್ತ ಜಾರಪ್ಪ ನಿಂತುಬಿಟ್ಟ.

ಆ ಕಾಗದವನ್ನು ಹುಡುಗನಿಗೆ ಕೊಡಬೇಕು. ಎರಡಾಣೆ ಪಡೆಯಬೇಕು. ನಿತ್ಯವೂ ಆ ಹುಡುಗ 'ಕಾಗದ ಉಂಟೇ ಅಜ್ಜಾ? ದುಡ್ಡು ಬಂದಿದೆಯೆ ಅಜ್ಜಾ?' ಎಂದು ಕೇಳುತ್ತಿದ್ದ. 'ಇಲ್ಲ ಮಗೂ' ಎಂದೇ ಜಾರಪ್ಪನ ಉತ್ತರ. ಆಗ ಹುಡುಗ ಮುಖ ಸಣ್ಣದು ಮಾಡಿ ನಿಲ್ಲುತ್ತಿದ್ದ. 'ಮದ್ರಾಸಿನಿಂದ ಕಾಗದ ಬರಲು ಎಷ್ಟು ದಿನ ಬೇಕಜ್ಜ?' ಎಂದು ಹುಡುಗ ಪುನಃ ಕೇಳುತ್ತಿದ್ದ.

"ನಾಲ್ಕು ದಿನ ಮಗೂ. ಏಕೆ, ಅಲ್ಲಿಂದ ಯಾರು ಕಾಗದ ಬರೆಯುತ್ತಾರೆ?' ಜಾರಪ್ಪ ಪ್ರಶ್ನಿಸಿದ್ದ.

'ಯಾರೂ ಇಲ್ಲ ಅಜ್ಜ. ಅಲ್ಲಿಂದ ಹಣ ಹೇಗೆ ಬರುತ್ತದೆ?' ಎಂದು ಕೇಳಿದ.

ಜಾರಪ್ಪ ಹಣ ಬರುವ ಕ್ರಮ, ಅದಕ್ಕೆ ಬೇಕಾದ ದಸ್ಕತು, ಹಾಗೆಲ್ಲ ಯಾಕೆ ಮಾಡುತ್ತಾರೆ— ಎಂದೆಲ್ಲ ವಿವರಿಸಿ ಹೇಳಿದ.

'ದಸ್ಕತು ನನ್ನದೇ, ಅಜ್ಜಯದೇ?' ಹುಡುಗ ಕೈತಟ್ಟಿ ಸಂತಸದಿಂದ ಕೇಳಿದ.

'ಯಾರ ಹೆಸರಿಗಿದೆಯೋ ಅವರದೇ' ಎಂದು ಜಾರಪ್ಪ ಹುಡುಗನ ಉತ್ಸಾಹವನ್ನು ಕಂಡು ಹೇಳಿದ್ದ.

ಆಗ ಹುಡುಗ ಚಪ್ಪಾಳೆ ತಟ್ಟುತ್ತ ಓಡುತ್ತಿದ್ದ.

ಇದು ಈಗ ಮೂರು ವಾರಗಳಿಂದ ನಡೆಯುತ್ತಲೇ ಇತ್ತು. ಈ ಹುಡುಗ ಯಾಕೆ ಹೀಗೆ ಕೇಳುತ್ತಾನೆ ಎಂದು ಜಾರಪ್ಪನಿಗಿಂದು ನಿಚ್ಚಳವಾಗಿ ತಿಳಿದಿತ್ತು. ಅವನು ಸ್ಪರ್ಧೆಗೆ ಉತ್ತರ ಕಳುಹಿದ್ದ. ಅದರಿಂದ ರೂಪಾಯಿ ಬರುತ್ತದೆಂದು ಹುಡುಗ ತಿಳಿದಿದ್ದ. ಆದರೆ ಈಗ ನಿರಾಶೆಯಿಂದ ಹುಡುಗನ ಮೊಗ ಬಿಳಿಚಿ ಹೋಗುತ್ತದೆ. ಅವನ ಮೊಗವನ್ನು ನಾನೇ ನೋಡಬೇಕೇ?

ಜಾರಪ್ಪ ವ್ಯಥೆಯಿಂದ ಕಂಗೆಟ್ಟ. ಯಾರು ಅವನಿಗೆ ಇಂಥ ಬುದ್ಧಿ ಇತ್ತರೋ? ಕೇವಲ ಬಡತನ ಇರಬಹುದು. ಅದರ ಒತ್ತಡ ಹುಡುಗರನ್ನೂ ಕೆಲಸಕ್ಕೆ ಕೈಹಚ್ಚಲು ಪ್ರೇರೇಪಿಸುತ್ತದೆ. 'ಪಾಪ......ಪಾಪ' ಎನ್ನುತ್ತ ಜಾರಪ್ಪ ಹುಡುಗನ ಮನೆಯತ್ತ ಸಾಗಿದ.

ಮನೆ ಸಮೀಪಕ್ಕೆ ಬಂದಂತೆ ಜಾರಪ್ಪನಿಗೆ ಇನ್ನಷ್ಟು ವ್ಯಥೆಯಾಯಿತು. ಆ ಹುಡುಗನ ಮಾತು ಅವನ ಕಿವಿಗೆ ಸುತ್ತಿಗೆ ಏಟಿನಂತೆ ಹೊಡೆಯುತ್ತಿತ್ತು.

'ಜಾರಪ್ಪಜ್ಜ ಇನ್ನೂ ಬರಲಿಲ್ಲ ಅಜ್ಜಿ. ಇಂದು ನೋಡು, ಖಂಡಿತ ರೂಪಾಯಿ ತರುತ್ತಾನೆ. ಆ ಮೇಲೆ ಎರಡು ದಿವಸವಾದರೂ ಹೊಟ್ಟೆ ತುಂಬ ಉಣ್ಣಬಹುದಲ್ಲವೇ ಅಜ್ಜಿ...'

'ನೀನೊಮ್ಮೆ ಸುಮ್ಮನಿರು ಮಗು. ಮನೆಯೊಳಗೆ ಒಂದು ಮುಷ್ಟಿ ಅಕ್ಕಿಯೂ ಇಲ್ಲ; ಒಂದು ಪೈಯೂ ಇಲ್ಲ. ಇನ್ನು ಹೊಟ್ಟೆ ತುಂಬ ಉಂಡಂತೆ......'

'ಅಲ್ಲಜ್ಜಿ, ಜಾ ರ ಪ್ಪ ಜ್ಜ ಊರಿನವರಿಗೆಲ್ಲ ದುಡ್ಡು ತಂದು ಕೊಡುತ್ತಾನೆ. ನನಗೂ ತಂದು ಕೊಡಲಾರನೆ? ......'

'ಕೊಡುತ್ತಾನೆ, ಕೊಡುತ್ತಾನೆ......'

ಜಾರಪ್ಪ ಅಂಗಳದಲ್ಲಿ ನಿಂತಿದ್ದ. ಅವನ ಹೃದಯ ಕೊರೆಯತೊಡಗಿತು. ಬೇರಿಂಗ್

# ಗ್ಲೂಕೋವಿಟಾ

ನಿಮಗೆ
ಅಧಿಕ
ಶಕ್ತಿಯನ್ನು...
ಅಧಿಕ
ಚೈತನ್ಯವನ್ನು...
ನೀಡುತ್ತದೆ

**ಗ್ಲೂಕೋವಿಟಾ**

**ಅತ್ಯುತ್ತಮ ಶಕ್ತ್ಯಾಹಾರ**

**ಪ್ರತಿದಿನವೂ ಇದನ್ನು ತೆಗೆದುಕೊಳ್ಳಿ**

ಗ್ಲೂಕೋವಿಟಾ ಎಂದರೆ ವಿಟಮಿನ್ 'ಡಿ' ಸೇರಿಸಲ್ಪಟ್ಟಿರುವ ಶುದ್ಧ ಗ್ಲುಕೋಸ್ ಪೌಡರ್. ಅದು ನಿಮಗೆ ಹೆಚ್ಚಿನ ಶಕ್ತಿಯನ್ನು ಶೀಘ್ರವಾಗಿ ಕೊಡುತ್ತದೆ! ಗ್ಲುಕೋವಿಟಾವನ್ನು ಪ್ರತಿದಿನವೂ ತಪ್ಪದೆ ತೆಗೆದುಕೊಂಡರೆ ಅದು ಎಲುಬುಗಳನ್ನೂ, ನರಗಳನ್ನೂ ದೃಢಪಡಿಸುತ್ತದೆ.

**ಕಾರ್ನ್ ಪ್ರಾಡಕ್ಟ್ಸ್ ಕಂ. (ಇಂಡಿಯಾ) ಪ್ರೈವೇಟ್ ಲಿ**

CPY. 4-KAN

---

# ಮೊಡವೆಗಳು ನನ್ನ ಸಮಸ್ಯೆ ಆಗಿಬಿಟ್ಟಿತ್ತು...

"ಅಡಕ್ಕೇಕೆ ಇಷ್ಟು ಚಿಂತೆ ಗೋಪೀ,
ಲಿಚ್ಚೆನ್ಸಾ ಬಳಕೆಗೆ ತೊಡುಗುವ
ತನಕ ನನಗೂ ಮೊಡವೆ
ತೊಂದರೆ ಇತ್ತು!"

"ಲಕ್ಷ್ಮೀ ಹೇಳಿದ್ದು ಸರಿ.
ಲಿಚ್ಚೆನ್ಸಾ ಮೊಡವೆಗಳನ್ನು ಬಲು
ಬೇಗ ಹುಟ್ಟಡಗಿಸಿ ಬಿಡುವುದು."

LICHENSA

DZ-929 KN

ಪತ್ರ ಅವನ ಕೈಯನ್ನು ಚುಚ್ಚತೊಡಗಿತು. ಆದರೆ ಅವನಿಗೇನು, 'ಗಂಡನು ನಾಳೆ ಬರುವನು ಎಂದು, ಅಯ್ಯೋ ಹೆಂಡತಿ ತೀರಿದಳೆಂದು, ಹಿಗ್ಗುವ–ತಗ್ಗುವ' ವರಿಗೆ ಕಾಗದ ಬಂದಿದೆ ಎನ್ನುವುದೇ ಗೊತ್ತಿಲ್ಲ.

'ಅಜ್ಜಾ ಕಾಗದ ಉಂಟೇ?' ಹುಡುಗ ಕೇಳಿದ.

ಅವನ ಉತ್ಸಾಹ ನೋಡಿ, ಮಿನುಗುವ ಕಣ್ಣುಗಳನ್ನು ನೋಡಿ ಜಾರಪ್ಪನ ಎದೆ ತುಡಿಯತೊಡಗಿತು. ಥೂ! ಇವನ ಉತ್ಸಾಹಕ್ಕೆ ಭಂಗವೇ ಎಂದು ತೋರಿತು.

'ಏ ಅಜ್ಜಾ, ನಿದ್ರೆ ಮಾಡುತ್ತೀಯಾ? ಕಾಗದ ಇದೆಯೆ?' ಎಂದು ಹುಡುಗ ಜಾರಪ್ಪನ ಮೆ ಕುಲುಕಿಸಿ ಕೇಳಿದ.

'ಆ?' ಜಾರಪ್ಪ ಫಕ್ಕನೆ ಎಚ್ಚರಾದವರಂತೆ ನುಡಿದ, 'ಉಂಟು ಮಗೂ!' ಎಂದು ಕಿಸೆಯಿಂದ ಪುಸ್ತಕ ತೆಗೆದು, ಐದು ರೂಪಾಯಿಯ ಎರಡು ನೋಟನ್ನು ಮಗುವಿನ ಕೈಗಿತ್ತು, 'ನೋಡು, ನಿನಗೆ ರೂಪಾಯಿ ಬಂದಿದೆ' ಎಂದು ಹೇಳಿದ.

'ಹೌದೇ...? ರೂಪಾಯಿ...ಅಜ್ಜ ರೂಪಾಯಿ ...ಏ ಅಜ್ಜ ಹೊಟ್ಟೆ ತುಂಬ ಅನ್ನ...' ಹುಡುಗ ಕುಣಿದಾಡಿದ.

ಜಾರಪ್ಪನಿಗೆ ಅತೀವ ಸಂತಸವಾಯಿತು. ಹುಡುಗನ ಸಂತಸ ಅವನ ಮೈಯಲ್ಲೂ ಹರಿದಾಡಿತು. ಅವನು ಹುಡುಗನನ್ನೆ ನೋಡುತ್ತ ನಿಂತುಕೊಂಡ.

ಹುಡುಗ ನೋಟನ್ನು ಹಿಡಿದುಕೊಂಡು ಅಜ್ಜಿಯ ಸನಿಹಕ್ಕೆ ನಡೆದ.

ಜಾರಪ್ಪ ಸಂತಸವಾಗಿ ತನ್ನ ದಾರಿ ಹಿಡಿದು ನಿಧಾನವಾಗಿ ನಡೆಯತೊಡಗಿದ.

ಹುಡುಗ ಅಜ್ಜಿಯೊಡನೆ ಹೇಳುತ್ತಿದ್ದ: "ಹತ್ತೇ ರೂಪಾಯಿ ಅಜ್ಜಿ. ಬಾಕಿ ರೂಪಾಯಿಯನ್ನು ಅಜ್ಜ ಕೊಡಲೇ ಇಲ್ಲ. ಅವನ ಪುಸ್ತಕದಲ್ಲಿ ಇಂಥಾ ರೂಪಾಯಿ ತುಂಬ ಇತ್ತು. ಅದನ್ನೆಲ್ಲ ಇನ್ನು ಅವನೇ ಕಾಫಿ ಕುಡಿದು ಮುಗಿಸುತ್ತಾನೆ..."

ಜಾರಪ್ಪನಿಗೆ ಆ ಮಾತು ಕೇಳಿಸಿತು. ನಿಡಿದಾದ ಉಸಿರೊಂದು ಮಾತ್ರ ಹೊರಬಿತ್ತು! *



ಯಜಮಾನ್ರು ಚೌಕಾಶಿಯಲ್ಲಿ ಎತ್ತಿದ ಕೈ. ಅವರು ಚೌಕಾಶಿ ಮಾಡದೆ ಯಾವ ವಸ್ತುವನ್ನೂ ತರುತ್ತಿರಲಿಲ್ಲ. ಆ ದಿನ ಎಂದಿನಂತೆಯೇ ವ್ಯಾಪಾರಕ್ಕೆ ಹೊರಟಿದ್ದರು.

ತೆಂಗಿನಕಾಯಿ ಬೇಕಾಗಿತ್ತು.

ಸರಿ, ವ್ಯಾಪಾರಿಯೊಂದಿಗೆ ಚೌಕಾಶಿ ಸುರು ಮಾಡಿದರು. ಕಾಯಿ ಒಂದಕ್ಕೆ ಆರಾಣೆಯಿಂದ ಮೂರುವರೆ ಆಣೆಗಳ ವರೆಗೂ ಬೆಲೆ ಚೌಕಾಶಿ ಮಾಡಿದಾಗ ವ್ಯಾಪಾರಿಯ ಸಹನೆ ಮೀರಿತು.

"ಸ್ವಾಮಿ, ಸುಮ್ಮನೆ ಚೌಕಾಶಿ ಮಾಡಬೇಡಿ, ಬೇಕಾದರೆ ಒಂದನ್ನು ಪುಕ್ಕಟೆ ಕೊಟ್ಟುಬಿಡುತ್ತೇನೆ."

ಆಗಲೂ ಯಜಮಾನರು ಚೌಕಾಶಿ ಬಿಡಲಿಲ್ಲ. ಹೇಳಿದರು: "ಏನೆಂದೆ, ಪುಕ್ಕಟೆ ಕೊಡುತ್ತೀಯಾ? ಕೊಡುವುದಾದದರೆ ಎರಡು ಕೊಡು."

—ಬಿ. ಆರ್. ರಘುಶೇಖರಾಚಾರ್

ಪ್ರಸಿದ್ಧ ಮನುಶ್ಯಾಸ್ತ್ರಜ್ಞ ಮ್ಯಾಕ್‌ಡೂಗಲ್ ಹೇಳಿರುವಂತೆ ಮಾನವನ ಸಹಜಗುಣಗಳಲ್ಲಿ ಸಂಗ್ರಹ ಪ್ರವೃತ್ತಿ ಉಳಿತಾಯ ಭಾವನೆಯೂ ಒಂದು. ಮಾನವನ ಜೀವನದ ಹೋರಾಟಕ್ಕೆ, ವಿಜಯಕ್ಕೆ, ಬೇಕಾದ ಎಲ್ಲಾ ಶಕ್ತಿ ಅವಶ್ಯಕತೆಗಳನ್ನು ಪರಮಾತ್ಮನು ಬಾಲ್ಯದಲ್ಲಿಯೇ ಬೀಜ ರೂಪದಲ್ಲಿ ಒದಗಿಸುವನು. ಅಂತೆಯೇ ಸಂಗ್ರಹ ಪ್ರವೃತ್ತಿಯು ಕೂಡಾ. ಇದನ್ನು ಚಿಕ್ಕ ಮಕ್ಕಳಲ್ಲಿ ನಾವು ಧಾರಾಳವಾಗಿ ಕಾಣಬಹುದು. ಪುಟ್ಟ ಬಾಲಕರು ತಮ್ಮ ಕುತೂಹಲ ವನ್ನು ಕೆರಳಿಸುವ ವಸ್ತುಗಳನ್ನು ಆಸ್ಥೆಯಿಂದ ಸಂಗ್ರಹಿಸುತ್ತಿರುವುದನ್ನು ನೋಡದವರಾರು ?

ಈ ಸಂಗ್ರಹಬುದ್ಧಿಯು ಅಭಿವೃದ್ಧಿಯೂ ಆಗಬಹುದು ; ಕುಂಠಿತಗೊಳ್ಳಲೂ ಬಹುದು. ಅದು ಸಂದರ್ಭ ಮತ್ತು ಅವಕಾಶಗಳನ್ನಾ-ಧರಿಸಿದೆ. ಯಾವುದೇ ಒಂದು ಕ್ರಿಯೆ ಮತ್ತೆ ಮತ್ತೆ ಆವರ್ತನಗೊಂಡಲ್ಲಿ ಅದು ಬಲಿತು ಅಭ್ಯಾಸವಾಗಿ ಮಾರ್ಪಡುವುದು— ಕುಶಲಕಲಾವಿದನ ಕೈಬೆರಳುಗಳು ಅವನಿಗೆ ತಿಳಿಯದೆಯೇ ಮುಂದು ಮುಂದಕ್ಕೆ ಚಲಿಸುವಂತೆ ಕೂಡಿಡುವ ಗುಣವೂ ಹಾಗೆಯೇ—

## ಉಳಿತಾಯದ ಪ್ರವೃತ್ತಿ ಬಲಿತು
## ಸ್ಥಿರ ಅಭ್ಯಾಸವಾಗಲು; ಸುಲಭ ಸಾಧ್ಯವಾಗಲು:

# -ಪಿಗ್ಮಿ

# ಸಿಂಡಿಕೇಟ್ ಬ್ಯಾಂಕ್

ದಿ ಕೆನರಾ ಇಂಡಸ್ಟ್ರಿಯಲ್ ಎಂಡ್ ಬ್ಯಾಂಕಿಗ್ ಸಿಂಡಿಕೇಟ್ ಲಿಮಿಟೆಡ್
ರಿಜಿಸ್ಟರ್ಡ್ ಆಫೀಸ್ : ಮುಕುಂದ ನಿವಾಸ : ಉಡುಪಿ.
ಸ್ಥಾಪನೆ : ೧೯೨೫



ಇವರಿರುವಷ್ಟು ಕಾಲ ಹಲಸಂಗಿ
ವಿಚಾರವಂತರಿಗೆ ಯಾತ್ರಾಸ್ಥಳವಾಗಿತ್ತು

# ಅನುಭಾವಿ ಕವಿ ಮಧುರ ಚೆನ್ನರು

ದ. ಬಾ. ಕುಲಕರ್ಣಿ

ಆಧುನಿಕ ಕರ್ನಾಟಕದ ಅನುಭಾವಿ ಕವಿ ಮಧುರಚೆನ್ನರು ಕಾಲವಾಗಿ ಒಂಭತ್ತು ವರುಷಗಳು ಗತಿಸಿದವು. ಆದರೂ ಅವರ ಆ ಕೃಶವಾದ ದೇಹಯಷ್ಟಿ, ಸೂಟಿಯಾಗಿ ಕಂಡರೂ ಆ ಚಪಲವನ್ನು ವಿಸ್ತರಿಸಲಾರದ ಅವರ ನಡಿಗೆ, ಔತ್ಸುಕ್ಯಪೂರ್ಣವಾದ ಮುಖದ ಕಾಂತಿ, ಆರ್ದ್ರವಾದ ನೋಟ-ಇದೆಲ್ಲದಕ್ಕೂ ಮಿಕ್ಕಿ ಅವರ ಆ ಮುಕ್ತಹಾಸ, ಕೈಮುಗಿವ ಆ ತುಂಬಿದೆದೆಯ ವಿನೀತಭಾವ ಇದಾವುದೂ ಮರೆಯದ ನೆನಪು.

ಹಲಸಂಗಿ ವಿಜಾಪೂರ ಜಿಲ್ಲೆಯ ಒಂದು ಕೊಂಪೆ—ಹಳ್ಳಿ. ಆದರೆ ಅಲ್ಲಿನ ನವಿಲ ಕುಣಿತವನ್ನು ಕಂಡವರು ಅಖಿಲ ಕರ್ನಾಟಕದ ದಶದಿಕ್ಕಿನ ವಿಚಾರವಂತರು. ಮಧುರಚೆನ್ನರಿರುವಷ್ಟು ಕಾಲ ಹಲಸಂಗಿ ಕನ್ನಡ ವಿಚಾರವಂತರಿಗೆ ಯಾತ್ರಾಸ್ಥಳವಾಗಿತ್ತು.

ನಾನು ಮೊದಲು ಸಲ ಹಲಸಂಗಿಗೆ ಹೋದದ್ದು ಮಧುರಚೆನ್ನರ ಹಿರಿಯ ಮಗಳು ಸರೋಜನಿಯ ಮದುವೆಗೆಂದು. ಸರೋಜನಿ ಮಗುವಾಗಿದ್ದಾಗ ತಂದೆಯನ್ನೇ ಆಡಿಸಿದ್ದಳು; ಅವರಿಂದ ಹಾಡಿಸಿದ್ದಳು.

ದೇವಲೋಕದ ಜಾಣೆ! ಭಾವಲೋಕದ
ರಾಣಿ
ಯಾವ ಲೋಕವ ನೋಡಿ ನಕ್ಕುನಲಿವೆ?
ಭಾವಗೀತೆಯ ಬೆಡಗೆ! ದೇವ
ಸಂಗೀತದಲಿ
ಹಾವಭಾವಗಳಿಂದ ಹಾಡಿ ಆಳುವೆ

ಮಧುರಚೆನ್ನರ ಮನೆಯ ಅಂಗಳಕ್ಕೆ ಚಪ್ಪರ ಹಾಕಿತ್ತು. ಅಲ್ಲೊಂದು ಅರವಿಂದರ ಚಿತ್ರ ವಿಟ್ಟಿತ್ತು. ವಾದಿರುಮ್ಮಾಲದವರು ಬರುತ್ತಿದ್ದರು. ಹೋಗುತ್ತಿದ್ದರು. ಚಂದ್ರಕಾಳಿ ಸೀರೆಯ ಸ್ತ್ರೀಯರ ಸುಳಿದಾಟ.

ಯಜಮಾನರಾದ ಮಧುರಚೆನ್ನರು ಚಪ್ಪರದ ಮಧ್ಯದಲ್ಲಿ ಉಕ್ಕುವ ಉತ್ಸಾಹದಿಂದ ಕುಳಿತು, ಬಂದವರನ್ನು ಸ್ವಾಗತಿಸುವರು, ಹೊರಟವರನ್ನು ಬೀಳ್ಕೊಡುವರು. ಚಹಾ ಕುಡಿಯಬೇಕಾದರೆ ಅರವಿಂದರಿಗೆ ಎಡೆ ಹಿಡಿದು ಕುಡಿಯುವರು. ಬಂದವರಿಗೆ, ಹೋಗುವವರಿಗೆ ಕೈ ಮುಗಿಯುವರು. ಅಣ್ಣ, ತಮ್ಮ, ಮಾವ, ಕಾಕಾ—ತಂಗಿ, ಅಕ್ಕ, ಅತ್ತೆ, ಅವ್ವ—ಎಲ್ಲರಿಗೂ ಬಳಗದ್ದೇ ಸಂಬೋಧನೆ.

ಆ ಗುಂಪಿನಲ್ಲಿ ಬೆರೆತು ಇರುವ ಮಧುರಚೆನ್ನರು ತೋರಿಕೆಗೆ ಸಮರಸರಾಗಿ ಕಂಡರೂ ಅವರ ಇರುವು ಬೇರೆಯೇ. ಅದೊಂದು ಬೇರೆಯೆ ಚೇತನ. ಮಗಳ ಮದುವೆ, ಇವರದೇ ಮನೆ; ಇವರು ಯಜಮಾನರು! ಆದರೂ ಅವರು ಹೊರ

ಗಿನಿಂದ ಬಂದ ಆತ್ಮೀಯ ಅತಿಥಿಯಂತೆಯೇ ಕಂಡರು. ಯಾಜಮಾನ್ಯದ ಗಡಸು ಇಲ್ಲ; ಗದ್ದಲವಿಲ್ಲ; ಅವಸರವಿಲ್ಲ. ಮಗಳು-ಅಳಿಯ, ಮಡದಿ-ಮಕ್ಕಳು, ಬಳಗದವರು, ದೈವದವರು, ಗೆಳೆಯರು—ಎಲ್ಲಾ ಅಷ್ಟೆ ಈ ಪುಣ್ಯಾತ್ಮನಿಗೆ.

ಈ ಭಾವನೆಗೆ ನಿರ್ಲಿಪ್ತ ಭಾವವೆನ್ನಬೇಕೆ? ಅವರಿಗೆ ಎಲ್ಲದರಲ್ಲಿ, ಎಲ್ಲರಲ್ಲಿ ಆಸಕ್ತಿ. ಆದರೆ ಅವರು ಯಾವುದರಲ್ಲೂ ಲಂಪಟರಲ್ಲ. ಅವರ ಲಂಪಟತನ ಅವರ ಅನುಭಾವದಲ್ಲಿ. ಆದರೆ ಅವರು ಕುಟುಂಬ ವತ್ಸಲರು. ಗೆಳೆಯರು--ಬಳಗದವರು ಎಲ್ಲರ ಕ್ಷೇಮ ಚಿಂತನೆ ಅವರ ಅನುದಿನದ ಕರ್ಮಕಾಂಡ, ಚಿಂತನೆ ಮಾತ್ರ. ಅವರ ಕ್ರಿಯಾಶೀಲತೆ ಯೋಚನಾಪರವಾದುದು. ಅದರ ದಾರಿ-ಗುರಿ ಅನುಭಾವ.

ಅವರ ಮಟ್ಟಿಗೆ ಅನುಭಾವ ಸಾಧನೆ ಭವ-ಸಾಧನೆ ಉಸಿರಾಡಿದಂತೆ ಸಹಜವಾಗಿತ್ತು. ಮುಂಚೆ ಅವರ ಅಂತರಿಕವಾಗಿ ಕುದಿದ, ತಳಮಳಿಸಿದ ಬೇಗೆಯ ಬಾಳನ್ನು ಅವರ "ನನ್ನನಲ್ಲ" ಸಾರುತ್ತದೆ. ಅಯ್ಯೋ—ಆ

"ಹದಿನಾಲ್ಕು ವರುಷದಾ ರಾಮರಾ
ವನವಾಸ
ಗರ್ಭಿಣಿಯು ವನವಾಸ ಮೃತ್ಯುಹಾಸ
ಕುದಿಕುದಿದು ಬೇಯುವಾ ಬರಗಾಲ
ದುಹವಾಸ
ಮರುಗುವಾ ವಿರಹಿಣಿಯು ಊರ್ಧ್ವ
ಶ್ವಾಸ"

—ಎಂದ ಅವರು "ಹಸಿವೀಗೆ ಮೊಲೆಯುಂಡೆ, ಕಸವೀಸಿಗೇಸುಳ್ಳೆ? ಮೊಲೆ ಸಾಕು ಮುದ್ದು ಕೊಡು ತಾಯಿ" ಎಂದು ಮಲಗಿರುವ ತಾಯಿ ಪೃಥಿವಿಯನ್ನು ಕರೆಯುವ ಕರುಣ ಕ್ರಂದನ ಯಾರನ್ನೂ ಕಂಗೆಡಿಸದಿರದು. ಆದರೆ "ಬಣ್ಣದಾ ಹಣ್ಣುಗಳ ತಿಂದು ತೇಗಲುಬಹುದೆ? ಚಿತ್ರದಾ ಮಲ್ಲಿಗೆಯ ಮೂಸಬಹುದೆ? ಹೊಗೆಯು ಹೊಳೆ ಯಾರಾರೆ ಈಸಬಹುದೆ?" ಎಂದವರು ಮುಂದೆ "ತೇಗಲುಬಹುದು, ಮೂಸಲುಬಹುದು; —ಈಸಲುಬಹುದು" ಎಂಬ ಘಟ್ಟಕ್ಕೆ ಬಂದು ತಲುಪಿದರು. ನಂತರ ಎಲ್ಲಾ ಸರಳ-ಸಹಜ-ಸ್ವಾಭಾವಿಕವಾಯಿತು.

ಮಧುರಚೆನ್ನ ಗೊಡ್ಡು ವೇದಾಂತಿಯಲ್ಲ. ರತ್ನಾಕರನ ಪಂಥ ಅವರದ್ದು. ಅವರು ರಸಿಕ-ಅನುಭಾವಿ. ಕೃಷ್ಣ ಪಾರಿಜಾತ, ಬಯಲಾಟ ಅವರಿಗೆ ನೋಡಿದಷ್ಟು ಸಲವೂ ನವನವೀನವಾಗಿ ಕಂಡಿತ್ತು. ಅಂದೊಂದು ದಿನ ಆಟ ನಡೆದಾಗ ಅಟ್ಟ ಹತ್ತಿ ಭಾಷಣ ಬಿಗಿದರು. "ಇದು ಬರಿಯ ಒಂದು ಬಿಚ್ಚುಮೊಗ್ಗೆಯ ಮಾತಿನ ಮಾಲೆಯಲ್ಲ. ಅಬಾಧಿತವಾದ ಬದುಕಿನ ಚಿರಂತನವಾದ ರಸ ಘಟ್ಟ" ಎಂದು ಹೇಳುತ್ತಾ "ನನ್ನ ಅನೇಕ ವಿಧದ ವೇದಾಂತ ಸಾಧನೆಯ ನಂತರ, ಆಧುನಿಕ ಜಗತ್ತಿನೊಡನೆ ಇರಿಸಿಕೊಂಡ ವೈಚಾರಿಕ ಸಂಬಂಧ ಸೂತ್ರಗಳೆಡೆಯಲ್ಲಿ ಮತ್ತು ಒಂದು ಗ್ರಂಥಮಾಲೆಯ ಹೊಣೆಗಾರ ಸಂಪಾದಕನಾಗಿ ನಾನು ಅಧಿಕಾರ ವಾಣಿಯಿಂದ ಹೇಳುತ್ತೇನೆ: ಕೃಷ್ಣ ಪಾರಿಜಾತ ಬರೀ ತೋರಿಕೆಯ ಕ್ರೀಡಾ-ವಿಲಾಸವಲ್ಲ, ಅದು ಬದುಕಿನ ಗಾಯತ್ರಿ" ಎಂದರು.

ಇಂಥ ಒಂದು ಜೀವ ಇರುವಾಗ ಆ ಹಳ್ಳಿ ಕೊಂಪೆ ಯಾತ್ರಾಸ್ಥಳವಾಗಲಾರದೆ? ಕಷ್ಟದ ಯಾತ್ರೆಗೆ ಫಲ ಹೆಚ್ಚು.

ಕಾರಂತರು ಹಲಸಂಗಿಯ ಗೆಳೆಯರಿಗೆ ಹೊಲಸಂಗಿಯವರೆಂದು ಕರೆದರು. ಅಲ್ಲಿನ ಆ ಅನಾಕರ್ಷಕವಾದ ಪರಿಸರ, ಬರಡು ಬಯಲಭೂಮಿ ಕಗ್ಗಾಡು ದಾರಿ-ನವನಾಗರೀಕತೆಯ ಸೋಂಕಿಲ್ಲದೆ ಉದ್ಭವ ಮೂರ್ತಿಗಳಂತಿರುವ ಆ ಜನರ ನಡುವೆ ಈ ಕನ್ನಡ ಕವಿ ಕೋಗಿಲೆ ನವ ವಸಂತದಲ್ಲಿ ಕುಳಿತಿತು. ಅದರ ಸ್ವರ ಹೃದಯವಂತರಿರುವಲ್ಲೆಲ್ಲ ಕೇಳಿತು. ಜನ ಬಂದು ಬಂದು ಮಧುರಚೆನ್ನರೊಡನೆ ಒಡನಾಡಿದರು. ಕೋಗಿಲೆಯದೇ ಸ್ವರೂಪ, ಸ್ವರ ಇಂಚರ.

ಯಾವುದು ಅಂದ? ಯಾವುದು ಚೆಂದ?

ಜೀವಕ್ಕೆ ಯಾವ ರೂಪ? ಹಿಗ್ಗಿಗೆ ಯಾವುದು ಪ್ರಚೋದನೆ? ಹೃದಯದ ಕರೆ ಯಾವುದು? ಯಾವ ಬಿಸುಪು? ಯಾವ ಭಾವಸಂವೇದನೆ?

ಈ ಹಲಸಂಗಿಯಲ್ಲಿ ಅಂದಿನಿಂದ ಇಂದಿನವರೆಗೆ ನವಿಲು ಕುಣಿಯುತ್ತಿದೆ. ಭಾರತದಲ್ಲಿ, ಕರ್ನಾಟಕದಲ್ಲಿ ಹಲಸಂಗಿಯಂಥ ಎಷ್ಟು ಹಳ್ಳಿ

ಕೊಂಪೆಗಳಿಲ್ಲ? ಎಲ್ಲಾ ಕಡೆಗೆ ಯಾಕೆ ನವಿಲು ಕುಣಿಯುವದಿಲ್ಲ?

ಹಲಸಂಗಿಯ ಜನಪದ ತುಂಬ ರಸಿಕ ಮನೋಭಾವ ಉಳ್ಳದ್ದು. ಆ ಸುತ್ತಿನ ಲಾವಣಿಕಾರರು ಬದುಕಿನ ರಸದ ಬುಗ್ಗೆಯನ್ನು ತಮ್ಮ ವಾಣಿಯಲ್ಲಿ, ತಮ್ಮದೇ ಆದ ಗತ್ತಿನಲ್ಲಿ, ಗಮ್ಮತ್ತಿನಲ್ಲಿ ಚಿಮ್ಮಿಸಿದರು. ಜನ ಇರುವಲ್ಲೆಲ್ಲ ಹಿಗ್ಗಿನ ಹೊನಲು ಹರಿಯುತ್ತಲೇ ಇರುತ್ತದೆ ಅದಕ್ಕೆ ಒಂದೊಂದು ಬಗೆಯ ಭಾವಾವಿಷ್ಕಾರವಿದ್ದೇ ಇರುತ್ತದೆ. ಆದರದನ್ನು ಅನುಭವಿಸಿದ ರಸಿಕರು ಆ ರಸವನ್ನು ದಿಕ್ಕುದಿಕ್ಕಿಗೆ ಹರಿಯಿಸುವ ಉದಾರ ಚೇತನರಾಗಿರುವುದು ವಿರಳ.

ಮಧುರಚೆನ್ನರಿಗೆ ಎಳಮೆಯಲ್ಲಿ ಹಲಸಂಗಿಯ ಪರಿಸರದಲ್ಲಿ ಇಂಥ ಲಾವಣಿಯ 'ಜೀವನ'ದ ಪಾಠ – ಎದ್ದಾಗ ನಟ್ಟಿತ್ತು! ಬೀಸುವ ಹಾಡು ಹಂತಿಯ ಹಾಡಿನಲ್ಲಿ ಅವರು ಜೀವ ಸಂಸ್ಕಾರ ಪಡೆದರು. ಪಾರಿಜಾತ ಅವರನ್ನು ರಮಿಸಿತು. ಮುಂದೆ ಬೆಳೆಯುವ ಅವರ ಮನಸ್ಸನ್ನು ವಚನಕಾರರು ಸೆರೆ ಹಿಡಿದರು. ನಂತರ ಅವರ ಔತ್ಸುಕ್ಯ ರಾಮಕೃಷ್ಣ ಪರಮಹಂಸರತ್ತ ವಾಲಿತು. ರವೀಂದ್ರರಾಯಿತು, ಅರವಿಂದರು ಅವರನ್ನು ಹಿಡಿದೇ ಬಿಟ್ಟರು.

ಹೀಗೆ ಹಂತಹಂತವಾಗಿ ವಿಕಸಿತವಾದ ಅವರ ಜೀವಚೇತನಕ್ಕೆ, ಸ್ಥಾಯಿಯಾದ ಒಂದು ಪೂರ್ವ ಸಂಸ್ಕಾರ ಇದ್ದೇ ಇರಬೇಕು. ಅವರೆಂದೂ ಕಣ್ಣು ಮುಚ್ಚಿ ಹೊಂಡಕ್ಕಿಳಿದವರಲ್ಲ. ಆದರವರದು ಭಕ್ತಿ ಪಂಥ. ಅದು ನಿಸ್ಸಹಾಯಕವಾದ ಭಕ್ತಿ ಮಾರ್ಗವಲ್ಲ ಮೂಲಭೂತವಾದ ಜೀವನ ಶ್ರದ್ಧೆ, ಅದನ್ನು ಪಲ್ಲಟಗೊಳಿಸದ ನಿಶ್ಚಲತೆ, ಯಾವ ಆಮಿಷಕ್ಕೂ ಆಕರ್ಷಿತರಾಗದ ಎಚ್ಚರ—ಇದನ್ನೆಲ್ಲ ಸಾಧಿಸುವ ಧೀಮಂತ ನಿಲುವು.

ಅವರು ಪಾಂಡಿಚೇರಿಯ ಯಾತ್ರೆ ಮಾಡುತ್ತಿದ್ದರೂ ಹಲಸಂಗಿಯನ್ನು ಬಿಡಲಿಲ್ಲ ಹಲಸಂಗಿಯ ಜನರನ್ನು ತಮ್ಮೊಂದಿಗೆ ಪಾಂಡಿಚೇರಿಯ ಯಾತ್ರೆಗೆ ಅಣಿಗೊಳಿಸಿದರು.

ಅಂತೇ ಮಧುರಚೆನ್ನರದು ದೃಷ್ಟಿ ವಿಕಾಸವಾದರೂ ಸಮಷ್ಟಿಯ ಬದುಕು. ಧರ್ಮರಾಯ ತನ್ನನ್ನು ನೆಚ್ಚಿ ಬಂದ ನಾಯಿಯನ್ನೂ ಬಿಟ್ಟು ಸ್ವರ್ಗ ಪ್ರವೇಶಮಾಡಲಿಲ್ಲ. ತನ್ನ ಮಡದಿ, ತಮ್ಮಂದಿರಿಗಿಲ್ಲದ ಸುಖ ತನಗೆ ಬೇಡವೆಂದ.

ಗರತಿಯ ಹಾಡಿನ ಒಂದು ನುಡಿಯಲ್ಲಿ ಕಂಡ ಚೆಲುವನ್ನು ತಾನೊಬ್ಬನೆ ಸವಿದು ಸುಖಿಸಲಾರದ ಮನಸ್ಸವರದು. ರತ್ನಾಕರನ ಯೋಗಭೋಗ ಸಮನ್ವಯ ತನ್ನೊಬ್ಬನ ಸೊತ್ತಾಗುವುದು ಅವರಿಗಾಗದು. ರಾಮಕೃಷ್ಣ, ವಚನಕಾರರ ಅನುಭಾವ ಮಾರ್ಗ ತನ್ನ ಸಾಧನೆಯ ಹೆದ್ದಾರಿಯಾಗಿರಬಹುದಾದರೂ ತಾನು ನೆಚ್ಚಿದವರನ್ನು ಆ ದಾರಿಯಿಂದ ಕೊಂಡೊಯ್ಯುವ ಚಪಲ ಅವರದು. ಅದರಿಂದ ದರ್ಶನದ ಫಲ ತನ್ನಮಟ್ಟಿಗಾದರೆ ಸಾಲದವರಿಗೆ.

ಧರ್ಮರಾಯನನ್ನು ಮಡದಿ, ತಮ್ಮಂದಿರು ನೆಚ್ಚಿದ್ದರು. ಅವನೂ ಅವರನ್ನು ನೆಚ್ಚಿದ್ದ. ಆದರೆ ಮಧುರಚೆನ್ನರು ತನ್ನನ್ನು ಯಾರಾದರೂ ನೆಚ್ಚುವ ಗೊಡವೆಯನ್ನೇ ಇಟ್ಟುಕೊಳ್ಳಲಿಲ್ಲವೇನೋ! ತಾನು ನೆಚ್ಚಿದ್ದನ್ನು ಅವರೆಂದೂ ಬಿಟ್ಟುಕೊಡಲಿಲ್ಲ.

ಪ್ರತಿ ಸ್ಪಂದನದ ಗೊಡವೆ ಅವರಿಗಿದ್ದೇ ಇಲ್ಲವೇನೋ!

ಆ ಕೊಂಪೆಯಲ್ಲಿದ್ದು ಮಧುರ ಚೆನ್ನರು ಓದಿದ್ದು ಮುಲ್ಕೀ ಪರಿಕ್ಷೆ. ಮುಂದೆ ಪಂಡಿತ ಪರೀಕ್ಷೆಗೆ ಓದಬೇಕೆಂದವರು ಅದನ್ನು ಬಿಟ್ಟುಕೊಟ್ಟು ವಿಜಾಪುರಕ್ಕೆ ಹೋಗಿ ಶ್ರೀ ಕೊಣ್ಣೂರ ಮಾಸ್ತರರಲ್ಲಿ ಖಾಸಗಿಯಾಗಿ ಇಂಗ್ಲಿಷ್ ಓದಿದ್ದು ಬಹು ಸ್ವಲ್ಪಕಾಲ. ಮನೆಯಿಂದ ಫಲಶೋಧನದ ಒತ್ತಾಯದ ಕರೆ ಬಂತು. ತಂದೆಯನ್ನು ಚಿಕ್ಕಂದು ಕಳೆದುಕೊಂಡು ತಾಯ ಕಣ್ಣರಿಕೆಯಲ್ಲಿ ಬೆಳೆದು,ಬಳಗದ ಹುಡುಗೆಯನ್ನು ಮದುವೆಯಾಗಿ, ಮಡದಿ ಮನೆಗೆ ಬರುವಂತಾದಾಗ ಇಂಗ್ಲಿಷ್ ವ್ಯಾಸಂಗವನ್ನು ಬಿಡಬೇಕಾಗಿ ಬಂದಾಗ—

"ನನ್ನ ಜೀವವೆ ನನ್ನ ಗಿಣಿರಾಮನಾ
ಜೀವ
ನಾನಿನ್ನು ಬದುಕಲೇತಕೆ ನನ್ನ
ಹಕ್ಕಿಯನು
ಕೊಂದು? ನನಗೀ ಜಗವು
ಶೂನ್ಯವಾಯಿತು—"

—ಎಂದು ಹಾಡಿಕೊಂಡು ಅತ್ತದ್ದು ಆಗಲೇ.

ಆದರೆ ಅವರ ಅಭ್ಯಾಸಪ್ರವೃತ್ತಿ ಸುಮ್ಮನಿರಗೊಡಲಿಲ್ಲ. ಕುಳಿತಲ್ಲೇ ಶಿಲಾಲಿಪಿಗಳನ್ನು ಓದಲು ಕಲಿತರು. ಊರೂರು ಅಲೆದು ಶಾಸನಗಳನ್ನೋದಿ ಇತಿಹಾಸ ಅರಿತರು. ರೂಢಿಯ ಕಡೆಗೆ ವ್ಯತಿರಿಕ್ತವಾಗಿದ್ದ ಆಧಾರಗಳನ್ನು ಕಂಡು ಕ್ರಾಂತಿಕಾರಿ ಲೇಖನಗಳನ್ನು ಬರೆದರು.

ಹನ್ನೆರಡರ ಪ್ರಾಯದಲ್ಲೇ 'ದೇವರಾಯನ ಹೆಸರು' ಕೇಳಿದ್ದು. ಮುಂದೆ ಗುರೂಪದೇಶ ಪಡೆದು ಸಾಧನೆಗೈದರೂ ಅರಿವು ಮೂಡದೆ–ತಳಮಳಿಸಿ 'ನಾನೇಕೆ ನಂಜ ನುಂಗಿದನೆ ತಾಯೀ' ಎಂದು ಪರಿತಪಿಸಿದ್ದು. 'ಮನೆ ಹತ್ತಿ ಉರಿದಲ್ಲಿ ದೂರ ಸರಿಯಲುಬಹುದು, ಮನ ಹತ್ತಿ ಉರಿದರೆಲ್ಲೋಡಬಹುದೇ?' ಎಂದದ್ದು. ;ಮನೆಯ ಹಕ್ಕಿನ ಮಲ್ಲಿಕಾರ್ಜುನ ದೇವರ ಜಾತ್ರೆಯನ್ನು ವಿರೋಧಿಸಿ ನಾಸ್ತಿಕನೆಂದು ಹೆಸರಾದರು. ಕುಂಭಸೇವೆಯನ್ನು ಒತ್ತಾಯದಿಂದ ಸಲ್ಲಿಸುವಾಗ ಆತ್ಮಸಾಕ್ಷಿ ಒಪ್ಪದೆ ಕೊಪ್ಪರಿಸಿಕೊಂಡು ಬಿದ್ದು ಬೋಧೆ ತಪ್ಪಿಸಿಕೊಂಡು ದಿನಗಟ್ಟಲೆ ಉಪಚಾರ ಹೊಂದಬೇಕಾಯಿತು.

ಗಡ್ಡದ ಶಿವರಾಮ ಕಾರಂತರನ್ನು ಕಂಡು ದೇವರೆಲ್ಲಿ? ಎಂದು ಕೇಳಿದ್ದೂ ಅದೇ ಉಮ್ಮಳದ ಅವಸ್ಥೆಯಲ್ಲಿ. ಅದರಿಂದಾದ ಪರಿಣಾಮ ಕಾರಂತರ ಆತ್ಮಸಾಕ್ಷಿ ಕೆಣಕಿ ಗಡ್ಡಾಪಹಾರವಾಯಿತು!

ಮನಸ್ಸಿನ ಎಳೆದಾಟ ಅವರ ಆರೋಗ್ಯಭಾಗ್ಯವನ್ನು ಯಾವಾಗಲೂ ಕಸಿಯುತ್ತಲೇ ಬಂತು. 'ನನ್ನನಲ್ಲ'ದ ದರ್ಶನದಿಂದ ಬಾಗಿಲಿಲ್ಲದ ಕೋಟೆ ಬಾಗಿಲುಕೋಟೆಯಾಯಿತು. ಆ ಪರಿಶುದ್ಧಾನಂದದಲ್ಲಿ ಮಿಂದು ಆರೋಗ್ಯ

ಸುಧಾರಿಸಿತು

ಹಲಸಂಗಿಯಲ್ಲಿ ಕುಳಿತೇ ಮಧುರಚೆನ್ನರು ಭಾರತದ ಅನೇಕ ಭಾಷೆಗಳನ್ನು ಕಲಿತರು. ಇಂಗ್ಲಿಷ್ ಅರಿತರು, ಅವರ ಭಾಷಾಭ್ಯಾಸ ತುಂಬ ಕೌತುಕಪೂರ್ಣವಾದುದು. ಬೈಬಲ್ಲಿನ ವಿವಿಧ ಭಾಷಾಂತರಗಳನ್ನು ಹೋಲಿಸಿ ಅವರು ಲಿಪಿ–ಭಾಷೆಗಳನ್ನರಿತದ್ದು. ಮುಂದೆ ಅಭ್ಯಾಸಕ್ಕೆ ಕೋಶಗಳ ನೆರವನ್ನು ಪಡೆದರು. ನನ್ನೊಬ್ಬ ಮಿತ್ರರು ಔಷಧ ಕಂಪನಿಗಳ ಜಾಹಿರಾತು ಓದಿ ಬಂಗಾಲಿ ಕಲಿತದ್ದನ್ನು ಇಲ್ಲಿ ನೆನೆಯಬೇಕೆನಿಸುತ್ತದೆ ವಿಶ್ವದ ಅನುಭಾವಿ ಮಾರ್ಗದ ಪರಿಚಯ ಪಡೆದರು. ವಿಚಾರಪಂಥ ಲೆಕ್ಕಿಸಿದರು. ಆದರವು ಅದನ್ನೆಲ್ಲಾ ತನ್ನ ಮೂಸೆಯಲ್ಲಿ ಪರಿಷ್ಕರಿಸದೆ ಪರಿಗ್ರಹಿಸಲಿಲ್ಲ.

ಅವರ ತಾದಾತ್ಮ್ಯವೆಲ್ಲ ಅರವಿಂದ ಪಂಥದ್ದು. 'ಚೆನ್ನಮಲ್ಲಪ್ಪನವರು ಬಹುಭಾಷಾ ವಿಶಾರದರು' ಎಂದು ಯಾರಾದರೂ ಅಂದರೆ ಅವರ ಹತ್ತಿರದ ಗೆಳೆಯರೇ ವಿನೋದಕ್ಕೆ ಹೇಳುವುದು: ಅರವಿಂದ ವಾಙ್ಮಯವನ್ನು ಮಾತ್ರ ಯಾವ ಭಾಷೆಯಲ್ಲಿದ್ದರೂ ಅವರು ಓದಬಲ್ಲರು ಎಂದು ಇರಬಹುದು. ಅವರದು ನೆಚ್ಚಿನ ಒಂದು ಹೆದ್ದಾರಿ. ಪರಮ ಸತ್ಯದ ಮುಖ ಒಂದೇ. ಭಾಷೆಗಳು ಅದರ ಮುಖವಾಡ. ಮಧುರ ಚೆನ್ನರು ಓದುತ್ತಿದ್ದುದು ಈ ಬಾಹ್ಯ ವೇಷದ ಆಚೆಗಿನ ತಿರುಳನ್ನು. ತಿರುಳಿಗೆ ಯಾವ ಭಾಷೆ? ದ್ರೌಪದಿ ಪರಮಪುರುಷನನ್ನು ಅನನ್ಯಭಾವದಿಂದ ಸ್ತುತಿಸಿದಳು. ಭೀಷ್ಮರು ಸವಾಲು ಹಾಕಿ ಶ್ರೀಕೃಷ್ಣನನ್ನು ನಾಚಿಸಿದರು. ದಾಸರು 'ನೀನ್ಯಾಕೋ ನಿನ್ನ ಹಂಗ್ಯಾಕೋ' ಎಂದರು. ಮಹಾದೇವಿಯಕ್ಕ, ಮೀರಾ ಭಗವಂತನನ್ನು ನಲ್ಲನನ್ನಾಗಿ ಕಂಡು ಸಾಯುಜ್ಯ ಪಡೆದರು. ಮಧುರ ಚೆನ್ನರು 'ಇದ್ದಲ್ಲೆಲ್ಲಾ ಕಾಣಿಸಿಕೊಂಡರೆ ಹೋಗುವ ಗಂಟೇನು?' ಎಂದು ಸಲ್ಲಾಪಗೈದರು. ಪ್ರತಿಭೆಗೆ 'ನೀನೀಸುದಿನವೆಲ್ಲಿದ್ದಿ? ಮತ್ತೆ ಹೇಗಿಲ್ಲಿಗೆ ಮರಳಿ ಬಂದೆ?' ಎಂದರು. 'ದಾನಮ್ಮ ನೀನೊಲಿಯೆ ಕೊರಡು ಕೊನರುವದೆಂದೆ, ಬರಡು ಹಯನಾಗಲೂ ಬಲ್ಲದೆಂದೆ' ಎಂದು ವಚನಕಾರರ ತಾದಾತ್ಮ್ಯಭಾವವನ್ನು ಮೆರೆದರು.

ವರಕವಿ ಬೇಂದ್ರೆ ಅವರ ನಿಕಟ ವರ್ತಿಗಳು. ಮಧುರಚೆನ್ನರು ಶಾಸನಗಳನ್ನು ಬೆಂಬತ್ತಿದಾಗಿನಿಂದ, ಮರಪಂಡಿತನಾಗಿ, ಕವಡುಗಂಟು ಸುಡಿಯಲ್ಲಿ, ಮುಂದೆ ಹಣ್ಣಾಗಲಿದ್ದ ಅವರ ಕಸುಗಾಯ ಒಗರನ್ನು ಕಂಡವರು ಬೇಂದ್ರೆ. 'ಪಟ್ಟದ ಮರಿ' ಎಂದು ಕರೆದು 'ಪಡೆದಪ್ಪನಾಗು' ಎಂದು ಹರಸಿದವರು ಪಡೆದಪ್ಪನಾದುದನ್ನು ಕಂಡರು.

ಹಾಗೆ ಮಧುರ ಚೆನ್ನರೂ ಬೇಂದ್ರೆಯವರಿಗೆ ಸಕಲ ದೇವತೆಗಳಿಂದ ಹರಕೆ ಕೋರಿ ಹಾಡಿದರು. ಬೇಂದ್ರೆಯವರ ಮಾತಿನ ಧಾಟಿಯಲ್ಲಿ ಬರುವ 'ಅದೇಅಲ್ಲ' ಎಂಬುದನ್ನು ಮೆಚ್ಚಿಕೊಂಡು ನಲ್ನುಡಿದರು.

ಬೇಂದ್ರೆಯವರು ಮತ್ತು ಮಧುರಚೆನ್ನರು ಪರಸ್ಪರ ಹಾಡಿ ದಣಿಯರು–ಕೂಡಿ ದಣಿಯರು, ನೋಡಿ ದಣಿಯರು, ಆಡಿ ದಣಿಯರು. ಇಬ್ಬರೂ ಪರಸ್ಪರ ರಚಿಸಿ ಹಾಡಿದ ಹತ್ತಾರು ಪದ್ಯಗಳೇ ಈ ಏಕೀಭಾವಕ್ಕೆ ಸಾಕ್ಷಿ ನುಡಿಯುತ್ತಿವೆ.

ಮಧುರಚೆನ್ನರ ದೇಹ ಆ ಆತ್ಮದ ಸೆಳೆತಕ್ಕೆ ಎಂದೋ ಮುಗ್ಗರಿಸಿತ್ತು. ದೇವನ ಅಸ್ತಿತ್ವ ಅರಿಯದೆ ನಾಸ್ತಿಕನೆಂಬ ಬಿರುದನ್ನು ಬೇರೆ ಪಡೆದಿದ್ದ ಅವರು ಮಾನಸಿಕ ಹೋರಾಟದಿಂದ ಆರೋಗ್ಯ








ಭಾಗ್ಯವನ್ನು ಅಂದೇ ಕಳೆದುಕೊಂಡರು. 'ನನ್ನ ನಲ್ಲ' ದರ್ಶನ ಪಡೆದಾಗ ಅವರ ಜಾಡ್ಯಬಿಟ್ಟಿತು. ಆದರೆ ಮತ್ತೆ ಮತ್ತೆ ಹೊಸ ಹೊಸ ಸೆಳೆತಗಳಿಗೆ ತುತ್ತಾಗಿ ಅದು ಮುಗ್ಗರಿಸುತ್ತಲೇ ಬಂತು. ಸುಖ ಅವರನ್ನು ದಣಿಸಿದಂತೆ ದುಃಖ ದುಮ್ಮಾನಗಳೂ ಅವರನ್ನು ದಣಿಸಿದವು. ಅವರ ಆಂತರಿಕ ವಿಪ್ಲವ ಸದಾ ಕೆರಳಿಕೊಂಡೇ ಇರುತ್ತಿತ್ತು. ಯಾವುದೋ ಒಂದು ನಿಲುಗಡೆ ಕಂಡಾಗ ಅವರು ತಾತ್ಪೂರ್ತಿಕವಾಗಿ ಚೇತರಿಸಿಕೊಳ್ಳುವರು. ಮತ್ತವರ ಆತ್ಮ ಪಿಪಾಸೆ ಉರಿದೇಳುವುದು. ರಾಮಕೃಷ್ಣರ ಅಭ್ಯಾಸದಲ್ಲಿ ಅವರೊಮ್ಮೆ ಪುಳಕಿತರಾದರು ಅರವಿಂದರ ಮಹಾದರ್ಶನದಂದು ಬೋಧೆ ತಪ್ಪಿ ಭಾವಸಮಾಧಿಯಲ್ಲಿ ಧನ್ಯತೆ ಪಡೆದರು. ಮತ್ತೆ ಮತ್ತೆ ದರ್ಶನ ಲಾಭ ಪಡೆದರೂ ಪ್ರಥಮ ದರ್ಶನದ ಅಗಾಧತೆ ಅವರಿಗೆ ಎಂದೆಂದಿಗೂ ಪ್ರೇರಕ ಶಕ್ತಿಯಾಗಿ ನೆಲೆನಿಂತಿತ್ತು. ಮುಂದೆ ಮುಂದೆ ಅವರು ತಮ್ಮ ಅನುದಿನದ ಸಹಜ ಇರುವಿಕೆಗೂ ಅರವಿಂದ ಪ್ರೇರಣೆಯನ್ನವಲಂಬಿಸಿದರು. ಮಾತೆಯ ಶಿಶುವಾಗಿ ಅವರ ನಿರ್ದೇಶನವಿಲ್ಲದೆ ಯಾವೊಂದು ಕ್ರಿಯೆಯನ್ನೂ ಮಾಡದಾದರು.

ಎಲ್ಲಾ ಸಾಧನ ಪಥದಲ್ಲಿ ಮಧುರ ಚೆನ್ನರ ಪ್ರಥಮ ಬಲವೆಂದರೆ ಸರ್ವಾರ್ಪಣ ಭಾವ. ತಾವು ಕಾಲಕಾಲಕ್ಕೆ ನೆಚ್ಚಿಕೊಂಡು ಬಂದ ಸತ್ಯಕ್ಕೆ ತಮ್ಮನ್ನು ಸಂಪೂರ್ಣವಾಗಿ ಕೊಟ್ಟುಕೊಂಡು ಆ ಸಾಕ್ಷಿಯ ಬೆಳಕಿನಲ್ಲಿ ನಡೆದರು. ಆ ಸಾಕ್ಷಿಯ ಪ್ರೇರಣೆಗೆ ಅಂಗಲಾಚಿದರು. ಆ ಪರದೈವ ಆತ್ಮಸಾಕ್ಷಿ ಮೆಚ್ಚದ್ದನ್ನು ಅವರೆಂದೂ ಮಾಡಹೋಗಲಿಲ್ಲ.

ಆದರೆ ಈ ಕುದಿತ ಅವರ ಸಂಯಮವನ್ನು ಕೆಣಕಿದ್ದುಂಟು. ಸೋತ ಅವರು ಕೆರಳಿದ್ದುಂಟು; ಭಯಗೊಂಡದ್ದೂ ಉಂಟು. ಅವರ ಮಡದಿ ಬಸಪ್ಪಕ್ಕನವರು ಅವರಿಗೆ ಧೈರ್ಯ ಹೇಳಬೇಕಾಗಿ ಬಂದದ್ದೂ ಉಂಟು. ಸೋಲಿನಿಂದ ಸಂಶಯದಿಂದ ಸೋಲು. ಇದರ ವಿಶ್ಲೇಷಣೆಗೆ ಕಂಗೆಟ್ಟಾಗ ಮಡದಿ-ಮಕ್ಕಳು-ಗೆಳೆಯರು ಯಾರಿಂದಲಾದರೂ ಸಾಂತ್ವನ ಸಮಾಧಾನಬಂದರೂ ಅವರು ಅದನ್ನು ತಾವು ನಂಬಿದ ದೈವವೆಂದೇ ಶರಣಾಗತರಾಗಿ ಬಿಡುವರು. ತರ್ಕದ ಡೊಂಬರಾಟವನ್ನವರು ಅರಿಯರು. ವಾದಕ್ಕೆ ಸೋತವರೂ ಅಲ್ಲ ಅವರು, ಅವಹೇಳನವನ್ನು ಸಹಿಸಿದವರೂ ಅಲ್ಲ; ಅವರು ಒಪ್ಪುವುದು ನಿರಾಡಂಬರವಾದ ಹೃದಯದ ಮಾತನ್ನ. ರಾಜಕೀಯ, ಸಮಾಜಸೇವೆಯ ಪುರುಷಾರ್ಥಗಳನ್ನವರು ಪ್ರಶ್ನಿಸುತ್ತಿದ್ದುದು ತಮ್ಮ ಅರಿತ, ತಾವು ನುರಿತ ಭಾವನೆಗಳಿಂದಲೇ. ಬರಿಯ ಬಾಹ್ಯಕ್ರಿಯೆಗೆ ಅವರು ಮನತೆತ್ತವರಲ್ಲ—ಎಂದಿಗೂ.

ಅವರ ದೇಹಯಂತ್ರ ಕೊಂಕುತ್ತಲೇ ಇತ್ತು.

ಕುಸಿಯುತ್ತಲೇ ಇತ್ತು. ಅಮೃತಸ್ಪರ್ಶ ಅವರನ್ನು ಚೇತರಿಸುತ್ತಲೇ ಬಂತು.

ಈ ಏರಿಳಿತಗಳಿಂದ ಕೊನೆಗೊಮ್ಮೆ ಅವರ ದೇಹ ಸೌಖ್ಯ ಉಲ್ಬಣಿಸಿತು. ಕರುಳಿಗೆ ಕ್ಯಾನ್ಸರ್ ಹಿಡಿಯಿತು. ಅದರ ರಾಕ್ಷಸೋಪಚಾರಕ್ಕೆ—ಶಸ್ತ್ರಕ್ರಿಯೆಗೆ—ದೇಹದ ಶಕ್ತಿ ಸಾಲದಾಗಿತ್ತು.

ಆಯ್ತು; ಭೀಷ್ಮರು ಉತ್ತರಾಯಣಕ್ಕೆ ಕಾಯ್ದಂತೆ ಮಧುರಚೆನ್ನರು ಶ್ರೀ ರಾಮಕೃಷ್ಣರ ಪುಣ್ಯದಿನಕ್ಕೆ, ಶ್ರೀ ಅರವಿಂದರ ಜಯಂತಿ ದಿನಕ್ಕೆ, ಭಾರತ ಸ್ವಾತಂತ್ರ್ಯೋದಯದ ಪರ್ವಣಿಯ ದಿನಕ್ಕೆ ಕಾಯ್ದು ಅಂದು ನಿರ್ವಾಣವನ್ನೈದಿದರು (೧೫–೮–೧೯೫೩).

ಬುದ್ಧನಂತೆ ಹುಟ್ಟು ಸಾವುಗಳ ತಿಥಿ–ಮಿತಿಗಳನ್ನು ಸಮನ್ವಯದಿಂದ ಸಾಧಿಸಿ ಅಮರರಾದರು (ಸಿರಿಯಾಳ ಷಷ್ಠಿ).

ಅವರು ಬದುಕಿದ್ದ ಕಾಲ ಸರಿಯಾಗಿ ಅರ್ಧ ಶತಮಾನ.

*

ಮಧುರಚೆನ್ನರು ಹೊರಟು ಹೋದರು. ಆದರೆ ಅವರು ಬಿಟ್ಟು ಹೋದ ಮಧುರಸ್ಮೃತಿ ಮಾಸದಂಥದು. ಅವರ ಸರಳ ಬದುಕು, ಔತ್ಸುಕ್ಯದ ಮುಖಮಂಡಲ, ಮಗುವಿನ ಅಟ್ಟಹಾಸ, ಕೈಮುಗಿತ, ಬಾಗು ನಿಲುಮೆ ಆ ಹಸಿಹಸಿ ಕಣ್ಣಾಲಿಗಳ ಕಾಂತಿ— ಇದೆಲ್ಲದರ ಮಾಜದ ನೆನಪನ್ನು ಅವರು ನಮಗೆ ಬಿಟ್ಟು ಹೋಗಿದ್ದಾರೆ.

ಸಾಧಕರಿಗೆ ಅವರ ಅನುಭವ, ಅನುಭಾವ ಕಥನಗಳಾದ 'ಪೂರ್ವರಂಗ', 'ಕಾಳರಾತ್ರಿ', 'ಬೆಳಗು', 'ಆತ್ಮಶೋಧನೆ'ಗಳು ಅನುಗೋಲಾಗಿವೆ.

ಕಾವ್ಯ ರಸಿಕರಿಗೆ, ಸದಮಲಾಂತಃಕರಣಿಗಳಿಗೆ ಅವರ 'ನನ್ನ ನಲ್ಲ'ವಿದೆ; 'ಮಧುರಗೀತ'ವಿದೆ; 'ದೇವತಾಪೃಥಿವಿ' ಇದೆ.

ಮಿತ್ರ ಲಿಂಗಣ್ಣನವರಿಗೆ ಅವರು ಬಂಡಿಯ ಜೋವನಾಗಿದ್ದರಂತೆ. ಅಣ್ಣ ಬೇಂದ್ರೆಯವರಿಗೆ ಅವರು ಬಸವಣ್ಣನಾಗಿದ್ದರಂತೆ. ಬೇಂದ್ರೆ ಮಧುರಚೆನ್ನರಿಗೆ ಪ್ರಭುದೇವ!

ಅಂತ್ಯ ದರ್ಶನಕ್ಕೆ ಬಂದ ಈ ಆಪ್ತರನ್ನು ಕಂಡು ಮಧುರಚೆನ್ನರ ಮಡದಿ ಬಸವ್ವಕ್ಕ 'ಅರ್ಜುನಾ, ನಿನ್ನ ಶ್ರೀಕೃಷ್ಣನೆಲ್ಲಿ? ಪ್ರಭುದೇವರೇ, ನಿಮ್ಮ ಬಸವಣ್ಣನೆಲ್ಲಿ?' ಎಂದು ಬೊಬ್ಬಿರಿದಾಗ— ಅದನ್ನೆದುರಿಸುವ ಎಂಟೆದೆ ಯಾರದು? ಆ ನೆರಳಿಗೆ ಯಾವುದು ಬೆಳಕಾದೀತು?

ಮಧುರಚೆನ್ನರು ಮನೆಯವರಿಗೂ ಅರವಿಂದ ಪಾರಮ್ಯದ ದೀಕ್ಷೆ ಇತ್ತವರು. ಹಲಸಂಗಿಯ ಗಾಳಿಯಲ್ಲಿ ಪಾಂಡಿಚೇರಿಯ ಉಸಿರನ್ನು ಊದಿದ ಅವರು ತಮ್ಮ ಮನೆಯಲ್ಲಿ ಆಶ್ರಮದ ಗ್ರಂಥ-ಮಾಲೆಗಳ ಪರಿಮಳ ಬೀರಿದ್ದಾರೆ.

ಅವರ ಮಕ್ಕಳಿಬ್ಬರು ಈಗ ಅರವಿಂದಾಶ್ರಮವಾಸಿಗಳು! *



## ನಿದ್ರೆ

ಹಗಲು ಹಾಸಿಗೆ ಹಾಸಿ
ಇರುಳು ಹಚ್ಚಡ ಹೊದ್ದು
ಕಾಲ ನಿದ್ರಿಸುತಿಹನು ಬೆಚ್ಚಗಲ್ಲಿ.

— ಅಂಬಿಕಾ ಪರ್ವತೀಕರ

ಪ್ರಸಿದ್ಧ ಉರ್ದು ಲೇಖಕ ಕೃಷ್ಣಚಂದ್ರರ ಮಾರ್ಮಿಕ ಕಥೆ

# ನಾಯಿಗಳ ಕುಟುಂಬ ನಿಯೋಜನೆ

ಅನು: ಪಿ. ನಾಗೇಶರಾವ್ ಶೇಡಬಾಳ

"ಇವತ್ತಿನ ವರ್ತಮಾನ ಪತ್ರಿಕೆಯನ್ನು ಓದಿದ್ದೀರಾ?" ಉಪಮಂತ್ರಿವರ್ಯರು ಕುಟುಂಬ ನಿಯೋಜನ ಖಾತೆಯ ಮಂತ್ರಿ ಮಹಾಶಯರಿಗೆ ಕೇಳಿದರು. "ಇವತ್ತಿನ 'ಟ್ಯಾಮ್ಸ್'ನ ಏಳನೇ ಪುಟದಲ್ಲಿ ಒಂದು ಮಹತ್ವದ ಸುದ್ದಿ ಇದೆ."

ಚಿರೂಟಿನ ಒಂದು ದೀರ್ಘ ಜುರುಕೆಯನ್ನು ಎಳೆದು ಮಂತ್ರಿ ಮಹಾಶಯರು ಮಾತಾಡಿದರು: "ನನ್ನ ಭಾಷಣ ಮುದ್ರಿಸಿ ಬಂದಾಗ ಮಾತ್ರ ನಾನು ವರ್ತಮಾನ ಪತ್ರ ನೋಡುತ್ತಿರುತ್ತೇನೆ. ಕಳೆದ ಎರಡು ದಿನಗಳಲ್ಲಿಯಂತೂ ನಾನು ಎಲ್ಲಿಯೂ ಉದ್ಘಾಟನಕ್ಕೆ ಹೋಗಿಲ್ಲ ಮತ್ತು ನನ್ನ ಸತ್ಕಾರ ಸಮಾರಂಭ ಎಲ್ಲಿಯೂ ಆಗಿಲ್ಲ."

ಉಪಮಂತ್ರಿವರ್ಯರಿ ಆ ಸುದ್ದಿಯನ್ನು ಓದಿ ತೋರಿಸಿದರು. "ಜಾಮನಗರದಿಂದ ಒಂಭತ್ತು ಮೈಲು ದೂರದಲ್ಲಿರುವ ಅಲಿಆಬಾದ ಎಂಬಲ್ಲಿ ಒಂದು ಸಂಶೋಧನೆ ನಡೆದಿದೆ. ನಾಯಿಗಳಲ್ಲಿ ಕುಟುಂಬ ನಿಯೋಜನೆ ಎಷ್ಟರ ಮಟ್ಟಿಗೆ ಯಶಸ್ವಿಯಾದೀತು ಎಂದು ನೋಡುವುದು ಈ ಸಂಶೋಧನೆಯ ಮುಖ್ಯ ಹೇತು. ಈ ವಿಭಾಗದಲ್ಲಿ ಜನರು ಅಹಿಂಸಾವಾದಿಗಳಾಗಿರುವುದರಿಂದ ನಾಯಿಗಳ ಸಂಹಾರ ಮಾಡಲು ತಯಾರಾಗಲಿಕ್ಕಿಲ್ಲ. ಆದ್ದರಿಂದ ಆರೋಗ್ಯ ವಿಭಾಗ, ವೆಟರ್ನರಿ ವಿಭಾಗದ ಸಹಾಯದಿಂದ ಈ ಯೋಜನೆಯನ್ನು ಅಮಲಿನಲ್ಲಿ ತರಲು ಪ್ರಯತ್ನಿಸುವವರಿದ್ದಾರೆ. ಶಸ್ತ್ರಕ್ರಿಯೆಯನ್ನು ಮಾಡಿ ನಾಯಿಗಳ ಗಂಡಸುತನವನ್ನೆ ತೆಗೆಯುವವರಿದ್ದಾರೆ."



"ಮೂರ್ಖರು!" ನಿಯೋಜನ ಮಂತ್ರಿಗಳು ಉದ್ಗರಿಸಿದರು. "ಇಲ್ಲಿ ಮನುಷ್ಯರಲ್ಲಿ ಸಂತತಿ ನಿಯಮನ ಯಶಸ್ವಿಯಾಗಲಿಲ್ಲ. ಈ ಜಾಣರು ನಾಯಿಗಳ ಕುಟುಂಬ ನಿಯೋಜನೆ ಮಾಡಲು ಹೊರಟಿದ್ದಾರೆ. ಜನತೆಯ ಹಣವನ್ನು ಪುಕ್ಕಟೆ ನೀರಿನಲ್ಲಿ ಹಾಕುತ್ತಾರೆ ಆಯ್ತು."

'ನೀವು ಹೇಳಿದ್ದು ನಿಜ'ವೆಂದು ತಲೆದೂಗಿ ಉಪ ಮಂತ್ರಿವರ್ಯರು ಮುಂದುವರೆಸಿದರು: "ನನಗೂ ಮೊದಲು ಹೀಗೇ ಅನಿಸಿತು. ಆದರೆ ನಮ್ಮ ಕಡೆಯಂತೂ ಕುಟುಂಬ ನಿಯೋಜನೆ ಅಸಫಲವಾಗಿದೆ. ಮುಂದಿನ ವರ್ಷದ ಬಜೆಟಿನ ವೇಳೆಯಲ್ಲಿ ಏನಾದರೂ ಆಕರ್ಷಕ ಯೋಜನೆಯನ್ನು ಜನತೆಯ ಮುಂದೆ ಇಡುವುದು ಅಗತ್ಯವಾಗಿದೆ. ಆದ್ದರಿಂದ ನನಗೆ ಅನ್ನಿಸಲಿಕ್ಕೆ ಹತ್ತಿದೆ, ಇವತ್ತಿನ ಈ ಸುದ್ದಿಯಲ್ಲಿ ಏನಾದರೂ........."

"ಹಾಂ!" ಎಂದು ಮಂತ್ರಿವರ್ಯರು ವಿಚಾರ ಮಾಡಿ ಮಾತಾಡಲಿಕ್ಕೆ ಹತ್ತಿದರು.

"ವಿಚಾರ ಅಂತಹ ಅಯೋಗ್ಯವೇನಿಲ್ಲಾ. ನಮ್ಮ ಪ್ರಾಂತದಲ್ಲಿಯೂ ನಾಯಿಗಳು ಕಮ್ಮಿ ಇಲ್ಲ. ಈ ಬಾಬತ್ತಿನಲ್ಲಿ ನಾವು ಚೀಫ್‌ಸೆಕ್ರೆಟರಿಯವರೊಡನೆ ಚರ್ಚೆ ಮಾಡೋಣ."

ಕೂಡಲೇ ಚೀಫ್ ಸೆಕ್ರೆಟರಿಯವರಿಗೆ ಫೋನ್ ಮಾಡಿ ಕರೆಯಲಾಯಿತು. ಚೀಫ್ ಸೆಕ್ರೆಟರಿಯವರು ಸುದ್ದಿಯನ್ನು ಓದಿ ಯೋಜನೆಯನ್ನು ಕೇಳಿ ಆಶ್ಚರ್ಯಚಕಿತರಾದರು. ಯಾವುದೇ ಪ್ರಶ್ನೆಗೂ ಉತ್ತರಿಸಬೇಕಾದರೆ ಅವರಿಗೆ ಸ್ವಲ್ಪ ಹೊತ್ತು ವಿಚಾರ ಮಗ್ನರಾಗಿರಬೇಕಾಗುತ್ತಿತ್ತು. ದೀರ್ಘ ಮೌನದ ನಂತರ ಮಾತಾಡಹತ್ತಿದರು: "ನನಗೂ ನಾಯಿಗಳ ಸಂಬಂಧ ಬಹಳ ಬಂದಿಲ್ಲ. ಯಾಕೆಂದರೆ ನನಗೆ ಮೊದಲಿನಿಂದಲೂ ಬರಿ ಗಿಳಿಗಳನ್ನು ಸಾಕುವ ಹಾಬಿ. ಈ ವಿಷಯದಲ್ಲಿ ನಾವು ಜಾಯಿಂಟ್ ಸೆಕ್ರೆಟರಿಯವರ ವಿಚಾರ ಕೇಳುವುದು ಲೇಸು. ಅವರ ಮನೆಯಲ್ಲಿ ಐದು ನಾಯಿಗಳಿವೆ."

ಮೇಲಿನ ಯೋಜನೆಯನ್ನು ಕೇಳಿ ಜಾಯಿಂಟ್ ಸೆಕ್ರೆಟರಿಯವರೂ ಆಶ್ಚರ್ಯಚಕಿತರಾದರು. ಅವರು ಹೇಳಿದರು, "ಸಾಹೇಬರೆ, ನನ್ನ ಹತ್ತಿರ ನಾಯಿಗಳು ಇರುವುದು ನಿಜ... ಆದರೆ ಅವೆಲ್ಲಾ ಜಾತಿ ನಾಯಿಗಳಿರುತ್ತವೆ. ಸಭ್ಯವಿರುವುದರಿಂದ ಸಂಯಮಿಗಳಾಗಿವೆ. ನಾನು ಅವುಗಳ ಸಲುವಾಗಿ ಒಬ್ಬ ಖಾಸಾ ನೌಕರನನ್ನು ಇಟ್ಟಿರುತ್ತೇನೆ. ನನ್ನ ನಾಯಿಗಳು ವೇಳೆಗೆ ಸರಿಯಾಗಿ ಮಲಗುತ್ತವೆ. ಮತ್ತು ಏಳುತ್ತವೆ. ಯೋಗ್ಯ ವೇಳೆಗೆ ಊಟ, ಸ್ವಚ್ಛ ಸ್ನಾನ ಮಾಡಿಸಲಾಗುತ್ತದೆ. ನಿಯಮಿತವಾಗಿ ತಿರುಗಾಡಲು ಒಯ್ಯಲಾಗುತ್ತದೆ. ಒಟ್ಟಿಗೆ ಅವು ಮನುಷ್ಯರಂತೆ ಇವೆ. ಮತ್ತು ಇಂಥಾ ಜಾತಿ ನಾಯಿಗಳ ನಿಯೋಜನವೆಂದರೆ ಸುಮ್ಮನೆ ದುಬಾರಿ ಖರ್ಚಾಗುವುದು."

"ನಾವು ಬಂಗಲೆಯಲ್ಲಿಯ ನಾಯಿಗಳ ಸಲುವಾಗಿ ಹೇಳಲಿಕ್ಕೆ ಹತ್ತಿಲ್ಲ" ಉಪಮಂತ್ರಿಗಳು ಹೇಳಿದರು.

"ಬಂಗಲೆಯಲ್ಲಿರುವ ಪ್ರಾಣಿಗಳಿಗೆ ನಿಯೋಜನದ ಜರೂರೇ ಇಲ್ಲ. ಇದು ಎಲ್ಲರಿಗೆ ಗೊತ್ತಿದೆ. ಮತ್ತು ನಾಯಿ ಇರಲಿ, ಮನುಷ್ಯರಿರಲಿ, ಬಂಗ್ಲೆಯಲ್ಲಿ ಇರುವವು ಈ ಯೋಜನೆಯೊಳಗೆ ಬರುವುದೆ ಇಲ್ಲ. ನಾನು ಹೇಳುವುದು ಸರ್ವ ಸಾಧಾರಣ ಕಂತ್ರಿ ನಾಯಿಗಳ ಬಗ್ಗೆ."

ಜಾಯಿಂಟ್ ಸೆಕ್ರೆಟರಿಯವರು ಹೇಳಿದರು, "ಈ ಬಾಬತ್ತಿಗೆ ನಾವು ಅಸಿಸ್ಟಂಟ್ ಸೆಕ್ರೆಟರಿಯವರನ್ನು ಕರೆಸೋಣ. ನಾನು ಸಿವಿಲ್ ಲೈನ್ಸ್‌ನಲ್ಲಿ ಇರುತ್ತೇನೆ. ಅವರು ಊರೊಳಗೆ ಇರುತ್ತಾರೆ. ಆದ್ದರಿಂದ ಇಂಥಾ ನಾಯಿಗಳ ಬಗ್ಗೆ ಅವರಿಗೆ ಮಾಹಿತಿ ಇರಬೇಕು."

ಈಗ ಕೋರಂ ಭರ್ತಿಯಾಯ್ತು. ಅಸಿಸ್ಟಂಟ್ ಸೆಕ್ರೆಟರಿಯವರಿಗೆ ಯೋಜನೆ ಕೇಳಿದ ಕೂಡಲೇ ಬಹಳ ಆನಂದವಾಯ್ತು. ಕಾರಣ ಅವರು ಬಹಳ ಸಲ ನಾಯಿಗಳಿಂದ ತೊಂದರೆಪಟ್ಟಿದ್ದರು. ಒಂದು ಸರ್ತಿ ಮಿಠಾಯಿ ಅಂಗಡಿಯವನ ನಾಯಿ ಕಚ್ಚಿದ್ದರ ಗಾಯ ಇನ್ನೂ ಮಾಯ್ದಿರಲಿಲ್ಲ. "ನಮ್ಮ ಈ ಪಟ್ಟಣದಲ್ಲಿ ಎರಡು ಲಕ್ಷ ಗಂಡು ನಾಯಿಗಳಾದರೂ ಇರಬೇಕೆಂದು ನನ್ನ ಅಂದಾಜಿದೆ ಮತ್ತು ಅಷ್ಟಕ್ಕೆ ಸನಿಯ ಸನಿಯ ಹೆಣ್ಣು ನಾಯಿಗಳಾದರೂ ಇರಬೇಕು. ಒಂದು ವರ್ಷಕ್ಕೆ ಒಂದು ಹೆಣ್ಣುನಾಯಿಗೆ ಐದು ಮರಿಗಳಾದರೆ, ಅದರಲ್ಲಿ ಮೂರು ಜೀವಂತ ಉಳಿದರೆ, ಒಂದೆ ವರ್ಷದಲ್ಲಿ ನಾಯಿಗಳ ಸಂಖ್ಯೆ ಎರಡು ಪಟಾ

ಯಿತು. ಈ ರೀತಿ ನಮ್ಮ ಊರಲ್ಲಿ ನಾಯಿಗಳ ಸಂಖ್ಯೆ ಏರುತ್ತಾ ಹೋದರೆ ಹತ್ತು ವರ್ಷಗಳಲ್ಲಿ ಜನ ಸಂಖ್ಯೆಗಿಂತ ನಾಯಿಗಳ ಸಂಖ್ಯೆಯೆ ಜಾಸ್ತಿ ಆದೀತು. ಇದನ್ನು ತಡೆಯುವ ಸಲುವಾಗಿ ಏನಾದರೂ ಉಪಾಯವನ್ನು ಕೂಡಲೇ ಕೈ-ಕೊಳ್ಳಬೇಕು. ಇಷ್ಟು ಲಕ್ಷಗಟ್ಟಳೆ ನಾಯಿಗಳಿಂದ ಅನ್ನಧಾನ್ಯ ಎಷ್ಟೋ ನಾಶವಾಗುತ್ತದೆ. ಎಷ್ಟೋ ರೋಗ ರುಜಿನಗಳು ಹರಡುತ್ತವೆ. ರಸ್ತೆಗಳು ಹೊಲಸಾಗುತ್ತವೆ. ಎಷ್ಟೋ ಜನರು ನಾಯಿ ಕಡಿದು ಸಾಯುತ್ತಾರೆ. ನನ್ನ ಮತದಲ್ಲಿ ನಾಯಿಗಳಲ್ಲಿ ಕುಟುಂಬ ನಿಯೋಜನ ಸುರು ಮಾಡಿದರೆ ಮಾನವರು ನಿಯೋಜನ ಮಾಡಿಕೊಳ್ಳುವ ಅವಶ್ಯಕತೆಯೆ ಉಳಿಯುವುದಿಲ್ಲ."

"ಹಿಯರ್! ಹಿಯರ್!" ಮಂತ್ರಿ ಮಹಾಶಯರು ಚಪ್ಪಾಳೆ ತಟ್ಟುತ್ತಾ ಹೇಳಿದರು. ಈಗ ಕೂಡಲೇ ನಾಯಿಗಳ ಕುಟುಂಬ ನಿಯೋಜನ ಕೈಕೊಳ್ಳಬೇಕು. ಈ ವಿಚಾರವನ್ನು ದೃಷ್ಟಿಯ ಮುಂದಿಟ್ಟುಕೊಂಡು ಒಂದು ಯೋಜನೆಯನ್ನು ನಿಶ್ಚಯಿಸಿರಿ. ಸುರುವಿಗೆ ಒಂದು ಮಾಹಿತಿ ಪತ್ರಿಕೆಯನ್ನು ಛಾಪಿಸಿರಿ, ಅದರಲ್ಲಿ ಒಂದು ಬದಿಯಲ್ಲಿ ನನ್ನ ಫೋಟೋ ಕೂಡ ಇರಬೇಕು."

"ಮತ್ತು ಇನ್ನೊಂದು ಬದಿಗೆ ನಾಯಿಯದು" ಉಪಮಂತ್ರಿಗಳು ಸೂಚಿಸಿದರು.

"ಅದರದ್ದೇನೂ ಅಗತ್ಯ ಇಲ್ಲ. ನನ್ನದಷ್ಟೆ ಫೋಟೊ ಇರಲಿ." ಉಪಮಂತ್ರಿಗಳ ಕಡೆ ಕಣ್ಣು ಕಿಸಿಯುತ್ತಾ ಹೇಳಿದರು ಮಂತ್ರಿವರ್ಯರು. "ಆದರೆ ಬರಿ ಮಾಹಿತಿ ಪತ್ರಕದಿಂದ ಕೆಲಸವಾಗಲಿಕ್ಕಿಲ್ಲಾ." ವಿಚಾರ ಮಾಡುತ್ತಾ ಮಂತ್ರಿವರ್ಯರು ಹೇಳಿದರು. "ಇದರ ಸಲುವಾಗಿ ನಾವು ಹೊಸ ಅಂದಾಜು ಪತ್ರಿಕೆ ತಯಾರುಮಾಡಬೇಕು. ಹೊಸ ಜನರನ್ನು ಕೆಲಸಕ್ಕೆನೇಮಿಸಲಿಕ್ಕೆ ಬೇಕು ಸದ್ಯ ಕುಟುಂಬ ನಿಯೋಜನ ಖಾತೆಯಲ್ಲಿ ಕೆಲಸ ಮಾಡುವವರಿಂದ ಈ ನಾಯಿಗಳ ನಿಯೋಜನೆಯಲ್ಲಿ ಕೆಲಸ ಮಾಡಲು ಸಾಧ್ಯವಾಗಲಿಕ್ಕಿಲ್ಲ. ಕಾರಣ ಎಲ್ಲರಿಗೂ ಗೊತ್ತಿದೆ. ನಾಯಿಗಳ, ಮನುಷ್ಯರ ರೀತಿ-ನೀತಿಗಳು ಬೇರೆ ಬೇರೆ ಇವೆ."

"ಹಾಗೆ ಬಹಳ ಏನೂ ಬೇರೆ ಬೇರೆ ಇಲ್ಲಾ" ಉಪಮಂತ್ರಿಗಳು ಮಧ್ಯದಲ್ಲಿ ಹೇಳಿದರು. "ತಮಗಿಂತ ದುರ್ಬಲರನ್ನು ನೋಡಿ ಇಬ್ಬರೂ ಗುರುಗುಟ್ಟುತ್ತಾರೆ. ತಮಗಿಂತ ಸಬಲರ ಮುಂದೆ ಬಾಲ ಅಲ್ಲಾಡಿಸುತ್ತಾರೆ."

"ಛೆ! ಛೆ!" ಮಂತ್ರಿಗಳು ಹೇಳಿದರು, "ನಮಗೆ ಇದರ ಸಲುವಾಗಿ ಬೇರೆನೇ ಅಂದಾಜು ಪತ್ರಿಕೆಯನ್ನು ತಯಾರು ಮಾಡಲಿಕ್ಕೇಬೇಕು. ಜಾಸ್ತಿ ಜನರನ್ನು ನೇಮಿಸಬೇಕಾದೀತು. ಮತ್ತು ಈ ಯೋಜನೆಯ ಮೇಲೆ ಪ್ರಮುಖನಾಗಿ ಒಬ್ಬ ಶ್ವಾನ ತಜ್ಞರನ್ನು ನೇಮಿಸಬೇಕು."

ಅಸಿಸ್ಟಂಟ್ ಸೆಕ್ರೆಟರಿಯವರು ಕೂಡಲೇ ಹೇಳಿದರು: "ನನ್ನ ತಂಗಿಯ ಮಗನೊಬ್ಬನಿದ್ದಾನೆ."

ಜಾಯಿಂಟ್ ಸೆಕ್ರೆಟರಿಯವರು ಹೇಳಿದರು: "ನನ್ನ ಅಣ್ಣನ ಮಗನೊಬ್ಬನಿದ್ದಾನೆ."

ಚೀಫ್ ಸೆಕ್ರೆಟರಿಯವರು ಹೇಳಿದರು: "ನನ್ನ ಹೆಂಡತಿಯ ತಮ್ಮನೊಬ್ಬನಿದ್ದಾನೆ."

ಮಂತ್ರಿ ಮಹಾಶಯರು ಹೇಳಿದರು: "ನನ್ನ ಅಳಿಯ ಒಬ್ಬ ಖಾಲಿ ಇದ್ದಾನೆ."

ಕೂಡಲೇ ಎಲ್ಲರ ಬಾಯಿ ಬಂದಾಯಿತು. ಮಂತ್ರಿವರ್ಯರು ಸತ್ಯವನ್ನೇ ಹೇಳಿದ್ದರು. ಮತ್ತು ಯಾವಾಗಲೂ ಕಡೆಗೆ ಸತ್ಯಕ್ಕೆ ಜಯವಾಗುವುದಿಲ್ಲವೆ!

*

ನಾನು ಮಂತ್ರಿವರ್ಯರ ಅಳಿಯನಿರುವುದರಿಂದ ಈ ಕೆಲಸ ಸಿಕ್ಕಿತು ಅಂತ ಸುಮ್ಮನೆ ಜನರು ಟೀಕಿಸುತ್ತಾರೆ. ನಿಜವಾಗಿ ನೋಡಿದರೆ ಈ ಕೆಲಸಕ್ಕೆ ನಾನೇ ಯೋಗ್ಯನಿರುತ್ತೇನೆ. ಯಾಕೆಂದರೆ ನಾ-ನೋರ್ವ ಪಶುವೈದ್ಯನಿರುತ್ತೇನೆ. ಪ್ರಾಣಿಗಳ ಭಾಷೆಗಳೂ ನನಗೆ ಗೊತ್ತು! ಇಬ್ಬರು ಆರ್ಡರ್ಲಿ, ಇಬ್ಬರು ಸಿಪಾಯಿಗಳು, ಇಬ್ಬರು ಕಂಪೌಂ-ಡರರು ಮತ್ತು ಸಂಚಾರದ ಒಂದು ಆಪರೇಶನ್

ನಿಮ್ಮ ಟಾರ್ಚಿನಲ್ಲಿ

ಎಸ್ಟ್ರೆಲಾ

ರಾತ್ರಿಯನ್ನು ದಿನವಾಗಿ ಮಾರ್ಪಡಿಸುತ್ತದೆ

112
ESTRELA
YOUR GUIDE
IN DARKNESS

ESTRELA
BRIGHT LIGHT
LONG LIFE




ಎಸ್ಟ್ರೆಲಾ

ಫ್ಲಾಶ್‌ಲೈಟ್ ಸೆಲ್ಸ್ ಮತ್ತು ಬ್ಯಾಟರಿಗಳು
ಟಾರ್ಚ್ ಮತ್ತು ಬಲ್ಬುಗಳು

ಗಾತಿ ಇಷ್ಟು ಸರಂಜಾಮಿನಿಂದ ಒಂದು ಗಲ್ಲಿಯ ಕೊನೆಯಲ್ಲಿ ಒಂದು ನಾಯಿಗೆ ನಾನು ಭೇಟಿ ಯಾದೆ. ಈ ನಾಯಿ ಒಂದು ಹೆಣ್ಣುನಾಯಿಯೊಂದಿಗೆ ಪ್ರಿಯಾರಾಧನೆಯನ್ನು ನಡೆಸಿತ್ತು.

ನಾಯಿಯು ನಮ್ಮೆಲ್ಲರ ಕಡೆ ದೃಷ್ಟಿ ತಿರುಗಿಸಿ ಅದರ ಜತೆಯಲ್ಲಿ ಮಾತಾಡುವ ಯೋಗ್ಯತೆ ನನ್ನೊಬ್ಬನಲ್ಲಿ ಇದೆಯೆಂದರಿತು ನನ್ನನ್ನು ಕೇಳಿತು: "ಏನು ಕೆಲಸವಿದೆ ನಿಮ್ಮದು?"

"ನಾನು ನಿನ್ನ ಮೇಲೆ ಶಸ್ತ್ರಕ್ರಿಯೆ ಮಾಡುವವನಿದ್ದೇನೆ."

"ಯಾಕೆ"

"ಅಂದರೆ ನಿನ್ನಿಂದ ಹೊಸ ನಾಯಿಗಳು ಜನ್ಮ ತಾಳಲಿಕ್ಕಿಲ್ಲ."

"ನಮ್ಮ ಮರಿಗಳಿಗೂ ನಿಮಗೂ ಏನು ಸಂಬಂಧ?" ಆ ನಾಯಿ ವಿಚಾರಿಸಿತು.

"ದಿನೇ ದಿನೇ ಬಲಿಯುತ್ತಿರುವ ನಿಮ್ಮ ಲೋಕ ಸಂಖ್ಯೆಗೆ ನಾವು ಖಾದ್ಯಸರಬರಾಯಿಯನ್ನು ಎಲ್ಲಿಂದ ತರುವುದು? ಇಲ್ಲಿ ನೋಡು. ಈ ಊರಿನಲ್ಲಿ ಎರಡು ಲಕ್ಷ ನಾಯಿಗಳು ಇರಬಹುದು. ಬರುವ ಐದು ವರ್ಷದಲ್ಲಿ ಈ ಲೆಕ್ಕ ಹತ್ತು ಲಕ್ಷ ವಾಗಬಹುದು. ಇಷ್ಟು ನಾಯಿಗಳಿಗೆ ನಾವು ಆಹಾರ ಸರಬರಾಯಿಯನ್ನು ಎಲ್ಲಿಂದ ತರುವುದು?"

"ಮಾಡಿರಲ್ಲ, ನನ್ನ ವಿರೋಧವಿಲ್ಲ. ನಾಯಿಗಳ ವಂಶನಾಶದಿಂದ ಮಾನವಜಾತಿ ಸುಖಿಯಾಗುತ್ತಿದ್ದರೆ ನಾವು ಮಾನವರ ಸಲುವಾಗಿ ಬಲಿ ವೇದಿಕೆಗೆ ಏರಲು ತಯಾರಿದ್ದೇವೆ. ಆದರೆ ನೀವು ಈ ಪುಕ್ಕಟೆ ಚಿಂತೆ ಯಾಕೆ ಮಾಡುತ್ತಿದ್ದೀರಿ? ನಾಯಿಗಳ ಶತ್ರುತ್ವವನ್ನು ಯಾಕೆ ಕಟ್ಟಿಕೊಳ್ಳುತ್ತೀರಿ? ನಾಯಿಗಳು ನಾಶವಾದರೆ ನಿಮಗೆ ಲಾಭ ಇಲ್ಲ."

"ಅದು ಹೇಗೆ?"

"ನಾಯಿಗಳ ನಾಶವಾದರೆ ಬೆಕ್ಕುಗಳ ಸಂಖ್ಯೆ ಏರುತ್ತದೆ. ನಾವು ಹೇಳಿಕೇಳಿ ನಾಯಿಗಳು. ಮ್ಮ ಎಂಜಲಿನಿಂದ ನಾವು ನಿರ್ವಾಹ ಮಾಡುತ್ತೇವೆ. ಆದರೆ ಈ ಮಾರ್ಜಾಲಗಳು ಸರಳವಾಗಿ ನಿಮ್ಮ ಅಡಿಗೆಮನೆಗೆ ನುಗ್ಗುತ್ತವೆ. ಮತ್ತು ಕದ್ದು ಹಾಲು ಕುಡಿಯುತ್ತವೆ. ಇಷ್ಟನ್ನು ಸಹಿತ ನೀವು ಮರೆತುಬಿಟ್ಟಿರಾ?"

ನಾಯಿಯ ಈ ಮಾತು ನಿಜವಿರುವುದರಿಂದ ನಾನು ವರಿಷ್ಠ ಅಧಿಕಾರಿಗಳ ಕಿವಿಗೆಹಾಕಿದೆ. ವಿಚಾರವಿನಿಮಯದ ನಂತರ ಅವರಿಗೂ ಅದು ನಿಜವೆನಿಸಿತು.

ನಾಯಿಗಳ ಕುಟುಂಬ ಯೋಜನೆಯ ಯೋಜನೆ ಇಲ್ಲಿಗೆ ಸಮಾಪ್ತಿಯಾಯ್ತು.

ಈಗ ಬೆಕ್ಕುಗಳ ಮೇಲೆ ಹಲ್ಲೆ ಮಾಡಲು ನಿಶ್ಚಯಿಸಲಾಯ್ತು. ಅರ್ಥಾತ್, ನನಗೇ ಹೊಸ ಆದೇಶ, ಹೊಸ ಕರ್ಮಚಾರಿಗಳ ತಂಡ ಕೊಡಲಾಯ್ತು. ಅಧಿಕ ಹಣವನ್ನು ಮಂಜೂರು ಮಾಡಲಾಯ್ತು. ಪುನಃ ಹೊಸ ಜಾಹೀರು ಪತ್ರಿಕೆಯನ್ನು ತೆಗೆಯಲಾಯ್ತು. ಎಂಟು ಹತ್ತು ದಿವಸದ ನಂತರ ಒಂದು ಗಂಡು ಬೆಕ್ಕನ್ನು ಹಿಡಿದೆವು. ಸಂತಾಪದಿಂದ ನನಗೆ ಹೇಳಿತು. "ಮಹಾಶಯಾ, ನಿಮಗೆ ಏನು ಗೊತ್ತಿದೆ? ನನ್ನ ಗೆಳತಿ ಯಾರಂತಿ? ಅವಳು ಶಿಕ್ಷಣ ಮಂತ್ರಿಗಳು ಸಾಕಿದವಳಿದ್ದಾಳೆ. ನಿಮಗೆ ನೌಕರಿ ಬೇಕಾಗಿದ್ದರೆ ನನ್ನ ಗೋಜಿಗೆ ಬರಬೇಡಿರಿ."

ನಾನು ಸಿಟ್ಟಿಗೆದ್ದೆ. "ಎಲೆ ಬೆಕ್ಕೆ, ನಾನು ಪ್ರತ್ಯಕ್ಷ ಮಂತ್ರಿವರ್ಯರ ಅಳಿಯನಿದ್ದೇನೆ, ಅಳಿಯ ತಿಳಿಯಿತೆ? ನಾನು ನಿನ್ನ ಮಂತ್ರಿಗಳ ತಾಟಿನ ಕೆಳಗಿನ ಬೆಕ್ಕಲ್ಲ!"

ಇಷ್ಟು ಹೇಳಿದ ಕೂಡಲೇ ಬೆಕ್ಕಿನ ಸೊಕ್ಕು ಸ್ವಲ್ಪ ಇಳಿಯಿತು. ಕಡೆಗೆ ನನಗೆ ಕೇಳಿತು: "ನಿಮಗೆ ಬೇಕಾದ್ದಾದರೂ ಏನು?" ನಾನು ಅದಕ್ಕೆ ಸರ್ವಯೋಜನೆಯನ್ನು ಸಮಜಾಯಿಸಿ ತಿಳಿಸಿದೆ. ಯೋಜನೆಯನ್ನು ಕೇಳಿ ಮಾರ್ಜಾಲ ಹೇಳಿತು. "ಹೀಗೋ? ಅಂದರೆ ನೀವು ಮಾನವರ ಕುಟುಂಬನಿಯೋಜನೆಯನ್ನು ನಾಯಿಗಳಿಗೆ ಬದಲಾಯಿಸಿದಿರಿ. ಈಗ ನಮ್ಮ ಮರಿಗಳು ನಿಮ್ಮ ಅನ್ನ ತಿನ್ನಬಾರದೆಂದು ನಮ್ಮ ಮಾರ್ಜಾಲ

ಗಳಿಗೆಲ್ಲಾ ಕುಟುಂಬ ನಿಯೋಜನೆಯನ್ನು ಸೂಚಿಸುತ್ತಿದ್ದೀರಿ."

"ನಾವು ನಿಮ್ಮನ್ನು ಜೀವಂತ ಕೊಲ್ಲುವುದಿಲ್ಲ. ಬರೆ ಶಸ್ತ್ರಕ್ರಿಯೆ ಮಾಡುತ್ತೇವೆ."

"ಒಳ್ಳೇದು" ಮಾರ್ಜಾಲ ಹೇಳಿತು "ಮಾನವರ ಸುಖ ಭವಿಷ್ಯದ ಸಲುವಾಗಿ ನಾವು ನಮ್ಮ ಮರಿಗಳ ಭವಿಷ್ಯದ ಮೇಲೆ ಬೆಂಕಿ ಇಡಲು ತಯಾರಿದ್ದೇವೆ. ಆದರೂ, ಇಷ್ಟುಮಾತ್ರ ಲಕ್ಷ್ಯದಲ್ಲಿರಲಿ. ನಮ್ಮ ಬಲಿದಾನದಿಂದ ನಿಮ್ಮ ಮಕ್ಕಳು ಮರಿಗಳ ಜೀವನಕ್ಕೆ ಜಾಸ್ತಿ ತೊಂದರೆಯಾದೀತು."

"ಆಂ, ಇದು ಹೇಗೆ?" ನಾನು ಗಾಬರಿಯಾಗಿ ಮಾರ್ಜಾಲವನ್ನು ಕೇಳಿದೆ.

"ಹೇ ಮೂರ್ಖಮನುಷ್ಯನೆ, ಇಷ್ಟೂ ನಿನಗೆ ತಿಳಿಯುವುದಿಲ್ಲವೆ? ಜಗತ್ತಿನಲ್ಲಿ ಬೆಕ್ಕುಗಳು ಇಲ್ಲವಾದರೆ ಇಲಿಗಳ ಸಂಕಟದಿಂದ ನಿಮ್ಮನ್ನು ಯಾರು ಪಾರುಮಾಡುವವರು? ಈಗ ಮನುಷ್ಯನ ಅನ್ನದ ಒಂದು ಚತುರ್ಥಾಂಶವನ್ನು ಇಲಿಗಳು ತಿಂದುಹಾಕುತ್ತಿವೆ ಮತ್ತು ಇದರ ಸಲುವಾಗಿ ಅವುಗಳಿಂದ ನಿಮಗೆ ಏನು ಸಿಗುತ್ತದೆ? ಪ್ಲೇಗಿನಂತಹ ಕೆಟ್ಟ ರೋಗರುಜಿನಗಳು. ಬೆಕ್ಕುಗಳು ಇಲ್ಲವಾದಲ್ಲಿ ಒಂದು ವರ್ಷದಲ್ಲಿ ಇಲಿಗಳ ಸಂಖ್ಯೆ ಕೋಟಿಗಟ್ಟಳೆ ಏರೀತು."

"ನೀನು ಹೇಳಿದ್ದು ನಿಜವೆನಿಸುತ್ತದೆ ನನಗೆ" ನಾನು ಕಬೂಲಿ ಜವಾಬನ್ನು ಕೊಟ್ಟೆ.

"ಹಾಗಾದರೆ ನಿಮಗೆ ಪ್ರಾಣಿಗಳ ಕುಟುಂಬ-ನಿಯೋಜನೆ ಮಾಡುವುದಿದ್ದರೆ ನೀವು ಇಲಿಗಳ ಕಡೆ ಲಕ್ಷ್ಯ ಪೂರೈಸಬೇಕಾದೀತು"

ನಾನು ಮಂತ್ರಿಮಹಾಶಯರ ಕಿವಿಯಲ್ಲಿ ಇದನ್ನು ಹಾಕಿದಕೂಡಲೇ ಅವರು ಖುರ್ಚಿಯಲ್ಲಿ ಟಣಕ್ಕನೆ ಜಿಗಿದು ಹೇಳಿದರು. "ಕರೆಕ್ಟ್. ನನಗೂ ಇದೇ ಅನ್ನಿಸಲಿಕ್ಕೆ ಹತ್ತಿತ್ತು!"

ಪುನಃ ಯೋಜನೆಯನ್ನು ಬದಲಾಯಿಸಿ ಹೊಸ ನೌಕರವರ್ಗವನ್ನು ನೇಮಿಸಿದೆವು. ಪಬ್ಲಿಕ್ ಅಕೌಂಟ್ ಕಮಿಟಿಯ ಟೀಕೆಗೆ ಹೆದರದೆ ಜಾಸ್ತಿ ಹಣವನ್ನು ಅಂದಾಜ ಪತ್ರಿಕೆಯಲ್ಲಿ ಮಂಜೂರ ಮಾಡಿಕೊಂಡೆವು. ಇನ್ನೊಂದು ಮಾಹಿತಿಪತ್ರಿಕೆಯನ್ನು ಛಾಪಿಸಿದೆವು. ಈಗ ಮಾತ್ರ ನಮ್ಮೆಲ್ಲರಿಗೂ ಖಾತ್ರಿ ಆಗಿತ್ತು, ನಾವು ಯೋಗ್ಯಮಾರ್ಗದಲ್ಲಿ ನಡೆದಿದ್ದೇವೆಂದು. ಆದರೆ ಸ್ವಲ್ಪ ದಿವಸದಲ್ಲೆ ನಮಗೆ ಭ್ರಮನಿರಸನವಾಯ್ತು. ಸುರುವಿಗೆ ನಗರ ಸಭೆಯ ನೌಕರರ ಜತೆಯಲ್ಲಿ ಜಗಳವಾಯ್ತು. ಆಪರೇಶನ್ ಸಲುವಾಗಿ ನಾವು ಇಲಿಗಳನ್ನು ಹಿಡಿಯಲು ಹೊರಟೊಡನೆ ನಗರದಲ್ಲಿರುವ ಎಲ್ಲಾ ಇಲಿಗಳ ಮೇಲೆ ನಗರ ಸಭೆಯ ಕಮೀಟಿಯ ಅಧಿಕಾರವಿದೆಯೆಂದು ತಿಳಿಯಿತು. ನಗರ ಸಭೆಯ ಕಮೀಟಿಯವರ ಸಮ್ಮತಿ ಸಿಗದ ತನಕ ಒಂದೂ ಇಲಿಯ ಮೇಲೆ ಶಸ್ತ್ರಕ್ರಿಯೆಯನ್ನು ಮಾಡಲು ಸಾಧ್ಯವಿದ್ದಿಲ್ಲ. ನಮ್ಮ ವಿಭಾಗದ ಮಂತ್ರಿವರ್ಯರು ನಗರ ಸಭೆಯ ಅಧ್ಯಕ್ಷರಿಗೆ ಪತ್ರ ಬರೆದರು. ನಾಲ್ಕಾರು ತಿಂಗಳು ಪತ್ರವ್ಯವಹಾರ ನಡೆಯಿತು. ನಗರ ಸಭೆಯ ಅಧಿಕಾರಿ ವರ್ಗದವರು ನಮ್ಮ ಕಡೆ ಇಲಿಗಳನ್ನು ಕೊಡಲು ತಯಾರಿದ್ದಿಲ್ಲ. ಇಲಿಗಳನ್ನು ನೇರವಾಗಿ ಯಮಸದನಕ್ಕೆ ಅಟ್ಟಬೇಕೆಂಬ ಮತದವರು ಅವರಿದ್ದರು. ನಾವು ಇಲಿಗಳನ್ನು ಕೊಲ್ಲುವುದಕ್ಕಿಂತ ಶಸ್ತ್ರಕ್ರಿಯೆಯನ್ನು ಮಾಡಿದರೆ ಇಲಿಗಳ ಸಂಖ್ಯೆಯು ಕಮ್ಮಿಯಾದೀತು ಎಂಬ ವಿಚಾರದಲ್ಲಿದ್ದೆವು. ವರ್ಷ ಎರಡು ವರ್ಷದವರೆಗೆ ಈ ಜಗಳ ಹಾಗೆ ನಡೆದು ನಿರ್ಣಯ ಹೊರಬಿತ್ತು. ನಗರ ಸಭೆಯ ಅಧಿಕಾರಿಗಳು ಪ್ರಥಮವಾಗಿ ಇಲಿಗಳನ್ನು ಕೊಲ್ಲುವುದು. ನಂತರ ನಾವು ಶಸ್ತ್ರಕ್ರಿಯೆ ಮಾಡುವುದು.

ಈಗ ಕೊಂದನಂತರ ನಾವು ಶಸ್ತ್ರಕ್ರಿಯೆ ಮಾಡುವುದು ಏನು ನಮ್ಮ ತಲೆಯೊ! ಕಡೆಗೆ ನಮ್ಮ ಯೋಜನೆಗೆ ತಿಲಾಂಜಲಿ ಬಿಟ್ಟಂತೆ ಆಗಿತ್ತು. ಅಂತಿಮವಾಗಿ ನಮ್ಮ ಮಂತ್ರಿವರ್ಯರು ನನ್ನನ್ನು ಕರೆದು ಹೇಳಿದರು. "ಜಗಳವಾಡಿ ಏನು ಲಾಭ? ನಗರ ಸಭೆಯ ಅಧ್ಯಕ್ಷರು ನಮ್ಮವರೇ ಇದ್ದಾರೆ. ಇದನ್ನು ಅವರು ತಮ್ಮ ಪ್ರತಿ

Brooke Bond

Café

BRAND

French coffee

NETT WEIGHT WHEN PACKED 100 gms.
BROOKE BOND INDIA PRIVATE LIMITED
COIMBATORE
CODE NO. C.L



ತಾಜಾ
ಸ್ವಾದ ಭರಿತ
ತೃಪ್ತಿದಾಯಕ

# ಕೆಫೆ ಬ್ರ್ಯಾಂಡ್ ಫ್ರೆಂಚ್ ಕಾಫಿ

ಇದು ಒಂದು ಬ್ರೂಕ್ ಬಾಂಡ್‌ನವರ ತಯಾರಿಕೆ

JWTBB 433

ಷ್ಠೆಯ ಪ್ರಶ್ನೆಯನ್ನಾಗಿ ಮಾಡಿದ್ದಾರೆ. ನಗರದಲ್ಲಿಯ ಇಲಿಗಳನ್ನು ಅವರು ಕೊಡುವುದಿಲ್ಲವಾದರೆ ಬೇಡ, ನೀನು ಹಳ್ಳಿಗೆ ಹೋಗು. ಅಲ್ಲಿಯೂ ಇಲಿಗಳಿವೆಯಂತೆ"

"ಇರುತ್ತವೆ ನಿಜ. ನಗರದ ಇಲಿಗಳಿಗಿಂತ ಎರಡುಪಟ್ಟು ದಪ್ಪವಾಗಿರುತ್ತವೆ. ಅವು ಜಗಳಗಂಟಿ ಸ್ವಭಾವದವು. ಆದ್ದರಿಂದ ನನಗೆ ಇದರ ಸಲುವಾಗಿ ಜಾಸ್ತಿ ನೌಕರವರ್ಗ ಬೇಕು."

"ಕರಕೊಂಡು ಹೋಗು" ಮಂತ್ರಿವರ್ಯರು ಆರ್ಡರ್ ಮಾಡಿದರು.

"ಹಳ್ಳಿಗಳಿಗೆ ಹೋಗಲು ಎರಡು ಜೀಪ್ ಬೇಕಾದೀತು."

"ಅದೂ ಕೂಡಾ ಕೊಡೋಣ. ಆದರೆ ನಗರದ ಇಲಿಗಳ ವಿಚಾರ ಬಿಟ್ಟು ಹಳ್ಳಿಗಳ ಕಡೆ ನಿಮ್ಮ ಮೋಟಾರ್ ತಿರುಗಲಿ ಆಯ್ತು."

ನಾನು ಹೇಳಿದೆ. "ನಗರದ ಇಲಿಗಳು ಬಹಳ ಸಭ್ಯವಿರುತ್ತವೆ. ಅವುಗಳಿಗೆ ನಿಯೋಜನೆಯ ಯೋಜನೆ ತಿಳಿಸಿ ಹೇಳಿದರೆ ಬೇಗ ತಿಳಿಯುತ್ತಿತ್ತು. ಆದರೆ ಹಳ್ಳಿಯ ಇಲಿಗಳ ಸಲುವಾಗಿ ಜಾಸ್ತಿ ಪ್ರಚಾರ ಮಾಡಬೇಕಾಗುತ್ತದೆ."

"ಒಂದು ಹೊಸ ಜಾಹೀರಾತನ್ನು ತೆಗೆಯಿರಿ. ಸದ್ಯದಲ್ಲಿ ತೆಗೆದ ನನ್ನ ಫೋಟೊ ಒಂದು ಪ್ರಸಿದ್ಧಿಯಾಗಿದೆ" ಮಂತ್ರಿವರ್ಯರು ಪ್ರೀತಿಯಿಂದ ನನಗೆ ತಿಳಿಸಿದರು.

ನಾವು ನಮ್ಮ ಎಲ್ಲ ಸಾಮಾನು ಸರಂಜಾಮನ್ನು ತೆಗೆದುಕೊಂಡು ಇಲಿಗಳ ಯೋಜನೆಯ ಸಲುವಾಗಿ ಒಂದು ಹಳ್ಳಿಗೆ ಕಲ್ಲು ಮುಳ್ಳು ತುಳಿಯುತ್ತಾ ಹೋದೆವು. ಆದರೆ ಹಳ್ಳಿಯ ಜನರು ನಮ್ಮನ್ನು ಹೊಲದ ಒಡ್ಡಿನತನಕ ಹೋಗಲು ಬಿಡಲಿಲ್ಲ. ಕೈಯ್ಯಲ್ಲಿ ಕೊಡಲಿ, ಬಡಿಗೆ ತೆಗೆದುಕೊಂಡು ನಮ್ಮನ್ನು ಅಲ್ಲೆ ಅಡ್ಡ ಕಟ್ಟಿ ನಿಂತರು. ಅವರ ಪ್ರಮುಖ ಹೇಳಿದ: "ಇಲಿಗಳ ಕುಟುಂಬ ನಿಯೋಜನವಂತೆ ನಿಯೋಜನ! ಒಂದು ಪಕ್ಷ ಇಲಿಗಳು ಇಲ್ಲವಾದಲ್ಲಿ ಅರ್ಧ ಬೆಳೆಯನ್ನೇ ಕ್ರಿಮಿಕೀಟಗಳು ತಿಂದು ನಾಶಮಾಡಬಹುದು. ಇಲಿಗಳು ನಮ್ಮ ಹೊಲದಲ್ಲಿ ಬಿಲ ಮಾಡಿಕೊಂಡು ಇರುತ್ತಾ ಕ್ರಿಮಿ ಕೀಟ ಮಿಡತೆಗಳನ್ನು ತಿನ್ನುತ್ತಿರುತ್ತವೆಯೆಂದು ಆಹಾರ ಧಾನ್ಯ ಎಷ್ಟೊ ಉಳಿಯುತ್ತದೆ. ನಾವು ಇಲಿಗಳ ಕುಟುಂಬ ನಿಯೋಜನೆಯನ್ನು ಏನಾದರೂ ಮಾಡಲಿಕ್ಕೆ ಬಿಡುವುದಿಲ್ಲ. ಒಳ್ಳೆ ಮಾತಿನಿಂದ ಇಲ್ಲಿಂದ ಕಂಬಿ ಕೀಳಿರಿ."

ಈಗ ಬಂತು ನಿಜವಾದ ಸಂಕಟ. ನಾಯಿಗಳ ನಿಯೋಜನೆ ಮಾಡೋಣ, ಬೆಕ್ಕುಗಳು ಜಾಸ್ತಿಯಾಗುತ್ತವೆ. ಬೆಕ್ಕಿನದು ಮಾಡಿದರೆ ಇಲಿಗಳು ಜಾಸ್ತಿಯಾಗುತ್ತವೆ. ಇಲಿಯದು ಮಾಡಿದರೆ ಕ್ರಿಮಿ ಕೀಟ ಮಿಡತೆಗಳು ಜಾಸ್ತಿಯಾಗುತ್ತವೆ.

ಈಗ ನಾವು ಕ್ರಿಮಿ ಕೀಟಗಳ ನಿಯೋಜನವನ್ನು ಸುರು ಮಾಡುವವರಿದ್ದೇವೆ. ಆದರೆ ಈಗಲೆ ನಮ್ಮ ವಿರೋಧಕರು ತೋಳೇರಿಸಿದ್ದಾರೆ. ಕೃಷಿ ವಿಭಾಗದಿಂದ ಈಗಲೇ ಒಂದು ನಿವೇದನೆ ಬಂದಿದೆ, ಯಾವುದೇ ಪರಿಸ್ಥಿತಿಯಲ್ಲಿ ರೇಶಿಮೆಯ ಹುಳಗಳಿಗೆ ಈ ಯೋಜನೆ ಸುರು ಮಾಡಲು ಮಂಜೂರು ಕೊಡಲಾಗುವುದಿಲ್ಲೆಂದು. ಎಷ್ಟೋ ಸರಕಾರಿ ಅಧಿಕಾರಿಗಳ ಅಭಿಪ್ರಾಯವೂ ಇದೇ ಇರುತ್ತದೆ. ಆದರೆ ಯಾರ ಹೆದರಿಕೆಯಿಂದೇನಾದರೂ ನಮ್ಮ ಯೋಜನೆಯ ಕೆಲಸ ನಿಲ್ಲುವದೆ? ಇಲ್ಲ. ಈಗ ನಾವು ಪುನಃ ಹೊಸ ಜಾಹೀರು ಪತ್ರಿಕೆಯನ್ನು ಹೊರಡಿಸಿದೆವು. ಹೊಸ ಅಂದಾಜ ಪತ್ರಿಕೆಯನ್ನು ಮಂಜೂರು ಮಾಡಿಕೊಂಡೆವು. ಜಾಸ್ತಿ ನೌಕರ ವರ್ಗವನ್ನು ನೇಮಿಸಿಕೊಂಡಿದ್ದೇವೆ. ಹಾಗೆ ನನ್ನ ಸಂಬಳ ಕೂಡ ಈಗ ಜಾಸ್ತಿ ಮಾಡಿಕೊಂಡಿದ್ದೇನೆ. ಯಾಕೆಂದರೆ ನನ್ನ ಮನೆಯಲ್ಲಿ ಬೇಗನೆ ತೊಟ್ಟಿಲು ತೂಗುವುದಿದೆ. *






ಅಮೇರಿಕನ್ ದಂಪತಿಗಳಿಬ್ಬರು ಆಗ್ರಾದ ತಾಜಮಹಲ್ ಕಟ್ಟಡವನ್ನು ನೋಡಲು ಬಂದಿದ್ದರು—ಹೆಂಗಸು ಕಟ್ಟಡದ ಭವ್ಯತೆಯನ್ನು ನೋಡಿ ಬೆರಗಾಗಿ, "ಅಲ್ಲಾ, ಈ ಭಾರತೀಯರು ವಿದೇಶೀ ಧನ ಸಹಾಯದ ಸುಳಿವೇ ಇಲ್ಲದಾಗ ಇದನ್ನೆಲ್ಲಾ ಹ್ಯಾಗೆ ಕಟ್ಟಿದರೊ ಅಂತೇನೆ!" ಎಂದು ಆಶ್ಚರಿಪಟ್ಟಳಂತೆ.

—ಬಿ. ಸಚ್ಚಿದಾನಂದ ಹೆಗ್ಡೆ

*

ಪ್ರಾಣಿ ಸಂಗ್ರಹಾಲಯಕ್ಕೆ ಬಂದಿದ್ದ ಗೃಹಸ್ಥರೊಬ್ಬರಿಗೆ ಅದರ ವ್ಯವಸ್ಥಾಪಕ ಪ್ರಾಣಿಗಳನ್ನು ತೋರಿಸುತ್ತ ನಡೆದಿದ್ದ: ಒಂದು ಪಂಜರದಲ್ಲಿ ಒಂದು ಹುಲಿ ಮತ್ತು ಒಂದು ಆಡು ಇದ್ದುದನ್ನು ಕಂಡು ಆ ಗೃಹಸ್ಥರು ಆಶ್ಚರ್ಯದಿಂದ "ಛೆ! ಛೆ! ಅದ್ಭುತ! ಇದು ಸಹಜೀವನಕ್ಕೆ ಅತ್ಯುತ್ತಮವಾದ ಉದಾಹರಣೆಯೇ ಸರಿ. ಈ ಚಮತ್ಕಾರವನ್ನು ನೀವು ಹೇಗೆ ಸಾಧಿಸಿದಿರಿ?" ಎಂದು ಕೇಳಿದ.

ಆಗ ಆ ವ್ಯವಸ್ಥಾಪಕ "ನಾವು ಪ್ರತಿನಿತ್ಯ ಒಂದೊಂದು ಆಡನ್ನು ಪಂಜರದಲ್ಲಿಡುತ್ತೇವೆ." ಎಂದುತ್ತರವಿತ್ತ.

*

ರೋಗಿ— ಡಾಕ್ಟರರೇ, ನನಗೆ ತುಂಬಾ ಹೆದರಿಕೆಯಾಗುತ್ತಿದೆ. ನಾನು ಶಸ್ತ್ರ ಚಿಕಿತ್ಸೆ ಮಾಡಿಸಿ ಕೊಳ್ಳುತ್ತಿರುವುದು ಇದೇ ಮೊದಲನೆಯ ಸಲ.

ಡಾಕ್ಟರ— ನಾನೂ ಹಾಗೆಯೆ. ಶಸ್ತ್ರ ಚಿಕಿತ್ಸೆ ಮಾಡುತ್ತಿರುವುದು ಇದೇ ಮೊದಲನೆಯ ಸಲ. ಆದರೆ ನನಗೆ ರವಷ್ಟು ಭಯ ಕೂಡ ಇಲ್ಲ. ನಿಮಗೇಕೆ ಭಯ?

*

ಅತ— ಯಾವ ದಿನ ನಾನು ನನ್ನ ಹೆಂಡತಿಯನ್ನು ಹೊಗಳುತ್ತೇನೊ ಆ ದಿನ ಅವಳು ಚೆನ್ನಾಗಿ ಅಡಿಗೆ ಮಾಡುತ್ತಾಳೆ.

ಈತ— ಇಷ್ಟೇನೇ? ಯಾವ ದಿನ ನಾನು ನನ್ನ ಹೆಂಡತಿಯನ್ನು ಹೊಗಳುತ್ತೇನೊ ಆ ದಿನ ಅವಳೇ ಅಡಿಗೆ ಮಾಡುತ್ತಾಳೆ.

— ದಯಾನಂದ ಕಾರ್ಕಳ

*

ಒಬ್ಬ ವ್ಯಾಪ್ಯಾರಿ (ಬಹು ಜಂಭದಿಂದ)— "ನಾನು ಬೆಂಕಿಯ ಅನಾಹುತದಿಂದ ವಿಮಾ ಕಂಪನಿಯಿಂದ ೫೦,೦೦೦ ರೂಪಾಯಿಗಳನ್ನು ಗಳಿಸಿದ್ದೇನೆ."

ಮತ್ತೊಬ್ಬ— "ನಾನು ಕೂಡ ಮೊನ್ನೆ ನೆರೆಯ ಅನಾಹುತದಿಂದ ಒಂದು ಲಕ್ಷ ರೂಪಾಯಿ ಗಳಿಸಿದ್ದೇನೆ."

ಮೊದಲ ವ್ಯಾಪಾರಿ ಬಹಳ ಹೊತ್ತು ಯೋಚಿಸಿ, ಯೋಚಿಸಿ ಕೊನೆಗೆ— "ಅದು ಸರಿ. ಅಂದ ಹಾಗೆ ನೀನು ನೆರೆಯನ್ನು ಹೇಗೆ ಉಂಟುಮಾಡುವೆ?"

—ಕೆ. ರಮೇಶ ಪೈ

*

ಒಂದು ಪರೀಕ್ಷೆಯಲ್ಲಿ, ಈ ರೀತಿಯ ಒಂದು ಪ್ರಶ್ನೆ ಬದ್ದಿತ್ತು.

'ಇದಕ್ಕೆ ಒಂದು ಅಖಂಡ ಪದವನ್ನು ಬರೆಯಿರಿ: 'ಕಾಲಿನಿಂದ ನಡೆಯುವವನು.'

ಒಬ್ಬ ಬುದ್ಧಿವಂತ ಹುಡುಗ ಉತ್ತರ ಬರೆದಿದ್ದ: 'ವಿನೋಬಾ.'

*

ಪ್ರೊಫೆಸರರು ಭಾವನಾ ಪರವಶರಾಗಿ ಬೀದಿಗುಂಟ ಸಾಗುತ್ತಿದ್ದಂತೆಯೇ ಒಮ್ಮೆಲೇ ಎದೆ ಜಬಕ್ ಎಂದಿತವರಿಗೆ. "ಅರೆ! ಮನೆಯಿಂದ ಹೊರಬಿದ್ದಾಗ ಸರೀ ಇದ್ದೆನಲ್ಲಾ! ಕಾಲುಗಳಿಗೆ ಏನೂ ಆಗಿರಲಿಲ್ಲ. ಮತ್ತೆ ಈಗೇನಾಯಿತು? ನಾನೇಕೆ ಕುಂಟುತ್ತಾ ನಡೆಯುತ್ತಿದ್ದೇನೆ? ಇದ್ದಕ್ಕಿದ್ದಂತೆಯೇ ನನ್ನ ಬಲಗಾಲು ಚಿಕ್ಕದಾಗಿ ಹೋಗುವುದೆಂದರೆ ......?" ಎಂದು ಆಕಾಶ ನೋಡಿ ಆಲೋಚನೆ ಮಾಡಿ ಮತ್ತೆ "ಇದು ಬರಿಯ ಭ್ರಮೆ ಇರಬೇಕು" ಎಂದಂದುಕೊಂಡು ಮುಂದೆ ಸಾಗಿದರು. ಆದರೆ ಮತ್ತೂ ಅದೇ ಅವಸ್ಥೆ! ಬಲದ ಕಾಲು ಚಿಕ್ಕದು, ಎಡದ ಕಾಲು ದೊಡ್ಡದು. ಪ್ರೊಫೆಸರರು ಹೆದರಿದರು. ಅಷ್ಟಕ್ಕೆ ಸರಿಯಾಗಿ ಕಾರೊಂದು ಹಿಂದಿನಿಂದ ಹಾರ್ನ್ ಬಾರಿಸಿತು. ಪ್ರೊಫೆಸರರು ಬದಿಗೆ ಸರಿದರು. ಈಗ ತನ್ನ ಕಾಲು ಸರಿಯಾದುದನ್ನು ಕಂಡು ಅವರಿಗೆ ಆಶ್ಚರ್ಯವಾಯಿತು.

ಪರಿಸ್ಥಿತಿ ಪ್ರೊಫೆಸರರಿಗೆ ಅರ್ಥವಾಗಲು ಹೆಚ್ಚು ಹೊತ್ತು ತಾಗಲಿಲ್ಲ.

ಇಷ್ಟು ಹೊತ್ತಿನವರೆಗೆ ಅವರು ಎಡಗಾಲನ್ನು ಫುಟ್‌ಪಾತಿನ ಮೇಲೂ ಬಲಗಾಲನ್ನು 'ಟಾರ' ರೋಡಿನ ಮೇಲೂ ಇಟ್ಟು ಹಾಗೆಯೇ ನಡೆದು ಬರುತ್ತಿದ್ದರು.

—ಶ್ರೀನಿವಾಸ

ನ್ಯಾಯಾಧಿಕಾರಿ— "ಏನಯ್ಯಾ ಆತನನ್ನು ಹೊಡೆದು ಗಾಯಗೊಳಿಸಿದೆಯಂತೆ?"

ಆತ— "ಅವನು ನನ್ನನ್ನು 'ಹಿಪ್ಪೊಪೋಟಿಮಸ್' ಎಂದು ಕರೆದ ಸ್ವಾಮಿ."

"ಯಾವಾಗ?"

"ಆರು ತಿಂಗಳ ಹಿಂದೆ."

"ಇದೇನಾಶ್ಚರ್ಯ!" ನ್ಯಾಯಾಧಿಕಾರಿ ಚಕಿತನಾಗಿ ಕೇಳಿದನು. "ಆತ ನಿನ್ನನ್ನು ಆರು ತಿಂಗಳ ಹಿಂದೆ ಹಿಪ್ಪೋಪೋಟಿಮಸ್ ಎಂದು ಕರೆದಿದ್ದಕ್ಕೆ, ನೀನು ಕೆಲವೇ ದಿವಸಗಳ ಹಿಂದೆ ಆತನನ್ನು ಹೊಡೆದೆಯಲ್ಲಾ?"

"ಅದುವರೆಗೂ ನಾನು ಹಿಪ್ಪೋಪೋಟಿಮಸ್ (ನೀರ್ಕುದುರೆ) ಅನ್ನೋದನ್ನ ನೋಡಿಯೇ ಇರಲಿಲ್ಲ ಸ್ವಾಮಿ."

—ಎಂ. ಎಸ್. ಶ್ರೀಹರಿ



ಮನೆ ಮಾಲಿಕ: ನಾನು ಹೆಣ್ಣುಮಕ್ಕಳೊಂದಿಗ ಸ್ವಾಮಿ. ರೂಮೇನೋ ಇದೆ. . . . ಆದ್ರೆನಾನು ರೂಂ ಕೊಡೋದು ನಮ್ಮ ಜಾತೀ ವಿದ್ಯಾರ್ಥಿಗಳಿಗೆ ಮಾತ್ರ.

ದಾರಿಯಿಲ್ಲದ ಮಳಲ ಬಯಲಲ್ಲಿ ಅವರು
ಶೋಧ ಕಾರ್ಯ ಮಾಡುತ್ತಾರೆ

# ಮರುಭೂಮಿಯ ಮಹಾ ಶೋಧಕರು

ಗಂಗಾಧರ

ಮರುಭೂಮಿಯ ನಿವಾಸಿಗಳಾದ ಅರಬರು ಕೂಡ ವಾಸಿಸಲು ಅಂಜುವ ಸೌದಿ ಅರೇಬಿಯದ ಮರುಭೂಮಿಯಲ್ಲಿ ಈಗೊಂದು ಸಾವಿರ ವರ್ಷಗಳಿಗಿಂತಲೂ ಹೆಚ್ಚುಕಾಲ ಮುರಾ ಜನಾಂಗ ತನ್ನ ಒಂಟೆ ಮತ್ತು ಆಡುಗಳ ಪರಿವಾರದೊಂದಿಗೆ ಸಂಚಾರಿ ಜೀವನವನ್ನು ಸಾಗಿಸುತ್ತ ಬಂದಿದೆ. ಈ ಕಠಿಣ ಜೀವನವು ಅವರಿಗೆ ಜಗತ್ತಿನಲ್ಲಿ ಇನ್ನಾವ ಜನರಿಗೂ ಅವಗತವಿಲ್ಲದ, ಕಠಿಣಸಾಧ್ಯವಾದ ಕಲೆಯೊಂದನ್ನು ವರವಾಗಿತ್ತಿದೆ. ಮುರಾ ಜನರು ಅತ್ಯಂತ ಕಠಿಣ ಸ್ಥಿತಿಯಲ್ಲೂ ಹೆಜ್ಜೆಯ ಗುರುತುಗಳಿಂದ ಪ್ರಾಣಿ ಮತ್ತು ಮನುಷ್ಯರ ವಿಚಾರಗಳನ್ನು ಸರಿಯಾಗಿ ಹೇಳಬಲ್ಲರು. ಆದ್ದರಿಂದಲೇ ಇಂದು ಸೌದಿ ಅರೇಬಿಯದ ಪ್ರತಿಯೊಂದು ಪೋಲೀಸ ಕಚೇರಿಯಲ್ಲೂ ಒಬ್ಬಲ್ಲ ಒಬ್ಬ ಮುರಾ ತಜ್ಞ ಇದ್ದೇ ಇರುತ್ತಾನೆ, ಕಳ್ಳರನ್ನು ಶೋಧಿಸುವುದಕ್ಕಾಗಿ.

ಇವರಲ್ಲಿರುವ ಈ ಶಕ್ತಿ ಅದ್ಭುತವಾಗಿದೆ. ಮರುಭೂಮಿಯ ಉಸುಕಿನಲ್ಲಿ ಅಸ್ಪಷ್ಟವಾಗಿರುವ ಒಂಟೆ ಹೆಜ್ಜೆಯ ಗುರುತುಗಳನ್ನು ನಿರೀಕ್ಷಿಸಿ ಮುರಾ ಮನುಷ್ಯ ಆ ಒಂಟೆಯ ವಯಸ್ಸು ಲಿಂಗ ಮತ್ತು ಬಣ್ಣಗಳನ್ನು ಹೇಳಬಲ್ಲ. ಹೆಣ್ಣು ಒಂಟೆಯಾದರೆ ಅದು ಗಬ್ಬಿವಿಡೆಯೆ, ಇದ್ದರೆ ಎಷ್ಟು ತಿಂಗಳಾಗಿದೆ ಎಂದು ಕೂಡ ಹೇಳಬಲ್ಲ. ಹೆಜ್ಜೆಯ ಗುರುತುಗಳ ಮೇಲಿಂದ ಒಂಟೆ ಒಂದು ಕಣ್ಣಿನಲ್ಲಿ ಕುರುಡಾಗಿದೆಯೆ ಎಂದು ಕೂಡ ಗುರುತಿಸಬಲ್ಲ.

೧೯೫೬ ರಲ್ಲಿ ರಫೇಕ ಎಂಬಾತ ಹೆಜ್ಜೆಯ ಗುರುತುಗಳ ಮೇಲಿಂದ ಮೂವರು ಕೊಲೆಗಡಕರನ್ನು ಹಿಡಿದುಕೊಟ್ಟ. ಘಟನೆ ಅತ್ಯಂತ ಸ್ವಾರಸ್ಯಪೂರ್ಣವಾಗಿರುವಂತೆ ಮುರಾ ಜನರ



ಅದ್ಭುತ ಸಾಮರ್ಥ್ಯಕ್ಕೆ ಪ್ರಬಲ ಸಾಕ್ಷಿಯೂ ಆಗಿದೆ. ೧೯೫೬ ರ ಜುಲೈ ತಿಂಗಳಲ್ಲಿ ಅಲಿ ಎಂಬ ಒಂಟೆ ಕಾಯುವವ ಪವಿತ್ರ ಮಕ್ಕಾನಗರದ ಸಮೀಪದಲ್ಲಿ ಒಂಟೆಗಳನ್ನು ಮೇಯಿಸುತ್ತಿದ್ದಾಗ ಒಂದು ಗಿಡಗಂಟಿಯ ನೆರಳಿನಲ್ಲಿ ಅಡ್ಡಾಗಿ ನಿದ್ದೆ ಹೋಗಿದ್ದ. ಹಠಾತ್ತಾಗಿ ಗುಂಡು ಹಾರಿದ ಸಪ್ಪಳ ಕೇಳಿಸಿತು. ಅಲಿಯ ಸಮೀಪದಲ್ಲಿ ಉಸುಕು ಮೇಲಕ್ಕೆ ಹಾರಿತು. ಅಲಿ ತನ್ನ ಬಂದೂಕಿಗೆ ಕೈಹಾಕುತ್ತಿದ್ದಂತೆಯೆ ಇನ್ನೊಂದು ಗುಂಡು ಬಂದು ಅವನ ಎದೆಯಲ್ಲಿ ನಾಟಿತು. ಅಲಿ ಉರುಳಿದವ ಮತ್ತೆ ಮೇಲಕ್ಕೇಳಲಿಲ್ಲ.

ಗುಂಡಿನ ಸಪ್ಪಳದಿಂದ ಅಂಜಿದ ಒಂಟೆಗಳು ದಿಕ್ಕಾಪಾಲಾಗಿ ಓಡಿ ಎರಡು ತಾಸುಗಳ ನಂತರ ತಮ್ಮ ಒಡೆಯ ಮಹಮ್ಮದ ಬಿನ್ ಖಾಸಿಮನ ಡೇರೆಯ ಬಾಗಿಲಿಗೆ ಬಂದವು.

ರಾತ್ರಿಯಾದರೂ ಅಲಿ ಬಾರದ್ದನ್ನು ಕಂಡು ಅವನಿಗೆ ವಿವಂಚನೆಯಾಯಿತು. ಮರುದಿನ ಮುಂಜಾನೆ ಅವನು ಮಕ್ಕಾದ ಅಮೀರ ನಿಗೆ ಅಲಿ ಕಾಣೆಯಾದ ವಿಚಾರ ತಿಳಿಸಿದ. ಅಮೀರ ಕೂಡಲೆ ಕ್ರಮ ತೆಗೆದುಕೊಂಡ. ಪೋಲೀಸ ಕ್ಯಾಪ್ಟನ್ ಮಹಮೂದ ಮತ್ತು ರಫೀಕ ಎಂಬ ಮುರಾ ಹೆಜ್ಜೆ ತಜ್ಞ ಅಲಿಯ ಶೋಧಕ್ಕೆ ಹೊರಟರು.

ಒಂಟೆಗಳು ಮೇಯುತ್ತಿದ್ದ ಸ್ಥಳಕ್ಕೆ ಅವರು ಜೀಪಿನಲ್ಲಿ ಬಂದಾಗ ಅಲ್ಲಿ ಅಲಿಯ ಸುಳಿವೇನೂ ಇರಲಿಲ್ಲ. ಅವನ ದೇಹ ಮಾಯವಾಗಿತ್ತು. ರಫೀಕ ಜೀಪಿನಿಂದ ಇಳಿದು ಅಲ್ಲಿಂದ ಒಂಟೆಯ ಹೆಜ್ಜೆ, ಮನುಷ್ಯರ ಹೆಜ್ಜೆಗಳನ್ನು ಅತ್ತಿತ್ತ ಅಡ್ಡಾಡಿ ಪರೀಕ್ಷಿಸತೊಡಗಿದ. ಒಂದೆಡೆ ಆತ ಮೊಣಕಾಲೂರಿ ಕುಳಿತು ನೆಲವನ್ನು ದಿಟ್ಟಿಸಿ ನೋಡಿದವನೇ ಹೇಳಿದ. "ಮೂವರು ಬೆಡ್ವಿನ್ ಅರಬರು ಆ ಗಿಡಗಂಟಿಯ ಮರೆಯಲ್ಲಿ ಅಡಗಿದ್ದರು. ಅವರಲ್ಲಿ ಇಬ್ಬರ ಬಳಿ ಬಂದೂಕುಗಳಿದ್ದವು. ಅವರು ಅಲಿಗೆ ಗುಂಡು ಹಾಕಿದರು. ಆ ಮೂವರಲ್ಲಿ ಇಬ್ಬರು ಎತ್ತರದ ಬೀಸು ಆಳುಗಳು. ಮೂರನೆಯವ ಬಡಕಲು ಮನುಷ್ಯ. ಅವನ ಒಂದು ಕಣ್ಣು ಸರಿಯಾಗಿ ಕಾಣಿಸುವುದಿಲ್ಲ. ಒಂಟೆಗಳನ್ನು ಕದಿಯುವ ಅವರ ಇಚ್ಛೆ ಅವು ಓಡಿಹೋದದ್ದರಿಂದ ಸಾಧ್ಯವಾಗಿಲ್ಲ."

ಆ ಮೇಲೆ ಆತ ಜೀಪನ್ನೇರಿ ಅದನ್ನು ಬಿಡುವಂತೆ ಹೇಳಿದ. "ಈಗ ಬಲಕ್ಕೆ, ಈಗ ಮುಂದಕ್ಕೆ" ಎನ್ನುತ್ತ ಮಾರ್ಗನಿರ್ದೇಶನ ಮಾಡಿದ. ಸುಮಾರು ಸಾವಿರ ಗಜ ದೂರ ಹೋಗುವಷ್ಟರಲ್ಲಿ ಮೂವರ ಹೆಜ್ಜೆ ಗುರುತುಗಳು ಸ್ಪಷ್ಟವಾಗಿ ಕಾಣಿಸಿದವು. ಬರಬರುತ್ತ ಮೃದು ಉಸುಕು ನೆಲದ ಬದಲು ಕಲ್ಲು-ಬಂಡೆಗಳ ಬಯಲು ಹತ್ತಿತು. ಪೋಲೀಸ ಕ್ಯಾಪ್ಟನ್ ಮಹಮೂದ ರಫೀಕನನ್ನು ಮೊಣಕೈಯಿಂದ ತಿವಿದು "ಈಗ ಯಾವ ಕಡೆ?" ಎಂದು ಕೇಳಿದ.

ರಫೀಕ ಜೀಪಿನಿಂದ ಕೆಳಜಿಗಿದು ನೋಡತೊಡಗಿದ. ಆತ ಜೀಪಿನ ಎಡಗಡೆ ದೂರದಲ್ಲಿ ನಿಂತು ಕೈಬೀಸಿ ಹೇಳಿದ: "ಇಲ್ಲ, ಅವರು ದಕ್ಷಿಣಾಭಿಮುಖವಾಗಿ ಹೋಗಿದ್ದಾರೆ."

ಈಗ ಗತಿ ಮಂದವಾಯಿತು. ಜೀಪಿನ ಬಾನೆಟ್ಟಿನ ಮೇಲೆ ಕುಳಿತು ಪದಾಘಾತದಿಂದ ಚಲ್ಲಾಪಿಲ್ಲಿಯಾದ ಕಲ್ಲುಗಳನ್ನು ರಫೀಕ ನೋಡುತ್ತಲಿದ್ದ. ಒಂದು ತಾಸಿನ ನಂತರ ಅವರು ಒಂದು ನೀರಿನ ಹೊಂಡದ ಬಳಿ ಬಂದರು. ಅಲ್ಲಿ ಒಂದಿಷ್ಟು ಬಾಡಿದ ಈಚಲು ಗಿಡಗಳಿದ್ದವು.

ಅಲ್ಲಿ ರಫೀಕ ಹೆಜ್ಜೆಯ ಗುರುತುಗಳ ಮೇಲೆ ಹೇಳಿದ್ದಂತೆ ಮೂವರು ಅರಬರಿದ್ದರು. ಇಬ್ಬರು ಎತ್ತರದ ಬೀಸಾಳುಗಳು. ಮೂರನೆಯವ ಬಡಕಲಾಗಿ ಒಕ್ಕಣ್ಣನಾಗಿದ್ದ. "ಅಸ್ಸಲಾಂ ಅಲೈಕುಂ, ನಿಮಗೆ ಶಾಂತಿ ಲಭಿಸಲಿ" ಜೀಪಿನ ಮೇಲಿನ ಸರಕಾರಿ ಚಿಹ್ನವನ್ನು ಕಂಡ ಅವರು ಆಗಂತುಕರನ್ನು ಅಭಿನಂದಿಸಿದರು: "ಪವಿತ್ರ ಮಕ್ಕಾದ ಕಣ್ಣಳವಿನಲ್ಲಿ ಅಲಿಯನ್ನು ಕೊಂದ ನಿಮಗೆ ಇನ್ನು ಶಾಂತಿಯೆಂಬುದಿರಲಾರದು" ಎಂದುತ್ತರವಿತ್ತ ರಫೀಕ.

"ಹಾ ಹಾ! ಧಾರ್ಮಿಕ ಯಾತ್ರಿಕರೊಡನೆ

ಹೀಗೆಲ್ಲ ಕುಚೇಷ್ಟೆಗೈಯಬಾರದು. ನಮಗೆ ಕೊಲೆಗಿಲೆಯ ವಿಚಾರವೇನೂ ತಿಳಿಯದು. ನಮ್ಮನ್ನು ಈ ರೀತಿ ಅಪಮಾನ ಮಾಡಿದ್ದಕ್ಕಾಗಿ ಅಮೀರರಲ್ಲಿ ದೂರಿಕೊಳ್ಳುತ್ತೇವೆ" ಎಂದ ಒಕ್ಕಣ್ಣ ಮಹಾಶಯ.

"ಸರಿ. ನಿಮಗೆ ಆ ಸಂಧಿಯನನ್ನು ಒದಗಿಸಿ ಕೊಡಲೆಂದೇ ಬಂದಿದ್ದೇನೆ. ಹತ್ತಿ ಜೀಪನ್ನು." ಕ್ಯಾಪ್ಟನ್ ಮಹಮೂದ ಗರ್ಜಿಸಿದ.

ಆದರೆ ಮಕ್ಕಾ ಪೋಲೀಸ ಜೇಲಿನಲ್ಲಿ ಎರಡು ದಿನಗಳ ವರೆಗೆ ಅವರನ್ನು ಒಂದೇ ಸವನೆ ಪ್ರಶ್ನಿಸಿದರೂ ಪ್ರಯೋಜನವಾಗಲಿಲ್ಲ. "ನಮಗೇನೂ ಗೊತ್ತಿಲ್ಲ" ಎಂಬುದೊಂದೇ ಅವರ ಉತ್ತರವಾಗಿತ್ತು.

ಆಗ ಪೋಲೀಸ ಪ್ರಮುಖ ಮೇಜರ್ ಶರಾಫ್ ಸಂದಿಗ್ಧಕ್ಕೊಳಗಾದ. ರಫೇಕನಲ್ಲಿ ಸಂದೇಹ ಪಡುವಂತಿರಲಿಲ್ಲ. ಆದರೆ ಈ ಸಲ ಆತ ತಪ್ಪಿರಬೇಕು ಎಂದು ಅನಿಸುವಂತಾಗಿತ್ತು. "ರಫೇಕ, ಇವರು ನಿರಪರಾಧಿಗಳೆಂದು ಕಾಣುತ್ತದೆ. ಅಲಿ ಸತ್ತಿದ್ದಾನೋ ಇಲ್ಲವೋ ಎಂದು ಕೂಡ ಖಚಿತವಿಲ್ಲ, ಅವನ ಹೆಣ ಸಿಕ್ಕಿಲ್ಲವಲ್ಲ" ಎಂದ ಮೇಜರ ಶರಾಫ್.

ರಫೇಕ ತನ್ನ ತೋಳು ಬೀಸಿದ. "ನಾನಂದದ್ದು ಸುಳ್ಳಾದರೆ ನನ್ನ ಈ ಕೈಯನ್ನೆ ಕತ್ತರಿಸಿ ಹಾಕಿ" ಎಂದನಾತ.

ರಫೇಕ ಛಲದಿಂದ ಹೀಗೆ ಮಾತಾಡುವವನಲ್ಲ, ಶರಾಫನಿಗೆ ಗೊತ್ತು.

ಮೇಜರ್ ಶರಾಫ್ ಬೇರೊಂದು ಹಂಚಿಕೆ ಮಾಡಿದ. ಆತ ಬಂಗಾರದಂಚಿನ ನಿಲುವಂಗಿ, ಸುಂದರವಾದ ಪಾದತ್ರಾಣ, ಒಂದು ಚೀಲದ ತುಂಬ ಬಂಗಾರದ ಮೋಹರುಗಳನ್ನು ತರಿಸಿದ. ಆಮೇಲೆ ಒಕ್ಕಣ್ಣ ಅರಬನನ್ನು ತನ್ನ ಕಚೇರಿಗೆ ಕರೆಸಿದ.

ಅವನು ಬಂದೊಡನೆ "ಈತ ಇನ್ನೂ ಯಾಕೆ ಜೇಲಿನಲ್ಲಿದ್ದಾನೆ?" ಎಂದು ಮೇಜರ್ ಅಬ್ಬರಿಸಿದ. ಒಕ್ಕಣ್ಣ ಅರಬನ ಗಂಟು ಕಟ್ಟಿದ್ದ ಮುಖದಲ್ಲಿ ಆಶ್ಚರ್ಯ ಮೂಡಿದ್ದನ್ನು ಗಮನಿಸಿದ ಶರಾಫ ಅವನನ್ನುದ್ದೇಶಿಸಿ ನುಡಿದ. "ನಿನ್ನನ್ನು ನಿನ್ನೆಯೆ ಬಿಡುಗಡೆ ಮಾಡಬೇಕಿತ್ತು. ನಿನಗೆ ಈ ಹಣ ಮತ್ತು ಅರಿವೆಗಳನ್ನು ಕೊಡಲೂ ನಿನ್ನನ್ನು ಬಂಧಿಸಿದ ತಪ್ಪಿಗಾಗಿ ಕ್ಷಮೆ ಕೇಳಲೂ ಅಮೀರರು ಹೇಳಿದ್ದಾರೆ. ಆದರೆ ಒಂದು ಮಾತು. ಇನ್ನು ಮುಂದೆ ಜೊತೆಗಾರರನ್ನಾರಿಸಿಕೊಳ್ಳುವಾಗ ತುಸು ಎಚ್ಚರದಿಂದಿರು. ನಿನ್ನ ಈಗಿನ ಮಿತ್ರರಿಬ್ಬರೂ ಅಪರಾಧವನ್ನೊಪ್ಪಿಕೊಂಡು ಬಿಟ್ಟಿದ್ದಾರೆ."

"ಆದರೆ ಯಾರ ಮುಂದೆಯೂ ಒಡನುಡಿಯದಿರಲು ನಾವು ಪ್ರತಿಜ್ಞೆ ಮಾಡಿದ್ದೆವು. ನೀನೇನಾದರೂ ಬಾಯಿಬಿಟ್ಟರೆ ನಿನ್ನ ನಾಲಿಗೆಯನ್ನೇ ಕತ್ತರಿಸುವುದಾಗಿ ಅವರು ನನಗೆ ಬೆದರಿಕೆ ಹಾಕಿದ್ದರು." ಒಕ್ಕಣ್ಣ ಹೇಳಿದ.

"ನೀನು ನಮಗೊಂದು ಸಹಾಯ ಮಾಡಬಹುದಲ್ಲ. ಅಲಿಯ ಹೆಣ ಎಲ್ಲಿದೆ ತೋರಿಸು."

ಒಕ್ಕಣ್ಣ ಉಗುಳು ನುಂಗಿದ. "ಅವರು ಅವನ ಕತ್ತು ಕತ್ತರಿಸಿ ಒಂದೆಡೆ ರುಂಡವನ್ನೂ ಇನ್ನೊಂದೆಡೆ ಮುಂಡವನ್ನೂ ಹೂಳಿದ್ದಾರೆ."

"ತಲೆ ಎಲ್ಲಿದೆ ತೋರಿಸು."

ಅಂದು ಮಧ್ಯಾಹ್ನ ಕ್ಯಾಪ್ಟನ್ ಮಹಮೂದ ಅಲಿಯ ರುಂಡವನ್ನು ತಂದ. ಅದನ್ನು ಕೋಣೆಯ ಬಾಗಿಲಿಗೆ ಮುಖವಾಗುವಂತೆ ತನ್ನ ಮೇಜಿನ ಮೇಲಿಟ್ಟುಕೊಂಡು ಮೇಜರ್ ಶರಾಫ್ ಉಳಿದಿಬ್ಬರು ಅಪರಾಧಿಗಳನ್ನು ಕರೆಸಿದ. ಆ ರುಂಡವನ್ನು ಕಂಡೊಡನೆ ಅವರಿಬ್ಬರೂ ಅಪರಾಧವನ್ನೊಪ್ಪಿಕೊಂಡರು. ತತ್‌ಕ್ಷಣವೇ ಮರಣ ದಂಡನೆ ವಿಧಿಸಲ್ಪಟ್ಟಿತು.

ಮುರಾ ಜನರ ಈ ವಿದ್ಯೆ ವಂಶಪರಂಪರಾಗತವಾಗಿ ಬಂದದ್ದು. ತಂದೆ ಮಗನಿಗೆ ಹೇಳಿಕೊಡುತ್ತಾನೆ. ಮುರಾ ಜನರ ಭಾಷೆಯಲ್ಲಿ ಒಂದು ಸಾವಿರ ಶಬ್ದಗಳಿರಬಹುದು ಅಷ್ಟೆ. ನಿತ್ಯ ವ್ಯವಹಾರಕ್ಕೆ ಇದು ಸಾಲುವುದಾದರೂ ಒಂದು ವಿದ್ಯೆಯನ್ನು ವಿವರಿಸಿ ಹೇಳುವುದಕ್ಕೆ ಸಾಲದು.



# ನ್ಯಾಷನಲ್ ಎಕ್ಕೋ ರೇಡಿಯೋ

## ಇದ್ದರೆ ವರ್ಷವಿಡೀ ಉತ್ಸವ!

ಮನೆಯಲ್ಲಿ ಒಂದು ನ್ಯಾಷನಲ್-ಎಕ್ಕೋ ರೇಡಿಯೋ ಇದ್ದರೆ ಉತ್ಸವ-ಸ
ರಂಭಗಳು ಕಳೆದು ಹೋದ ಮೇಲೆ ಕೂಡ ಮನೆಮಂದಿಗಳೆಲ್ಲ ಇಡೀ ವರ
ಆನಂದದಿಂದಿರಬಹುದು. ಅದು ನಿಮ್ಮ ಮನೆಯಲ್ಲಿ ಮೋಹಕ ಸಂಗೀತ
ಹಾಗೂ ಮನೋರಂಜನೆಯ ಹೊಸದೊಂದು ಲೋಕವನ್ನೆ ಸೃಷ್ಟಿಸುವು
ನಿಮ್ಮ ಮೆಚ್ಚಿಕೆಗೆ ಪಾತ್ರವಾಗುವಂತಹ ರಚನೆ, ನಿಮಗೆ ಅನುಕೂಲವಾ
ವಂತಹ ಬೆಲೆ! ರೂ. 125.00ರಿಂದ ರೂ. 725.00ರ ವರೆಗಿನ ಬೆಲೆಗಳ
ಸುಂದರ ಮಾಡೆಲ್ಲುಗಳು! ನಿಮ್ಮ ಹತ್ತಿರದ ನ್ಯಾಷನಲ್-ಎಕ್ಕೋ
ರೇಡಿಯೋ ವ್ಯಾಪಾರಿಯೊಡನೆ ಉಚಿತವಾಗಿ ಹಾಕಿ ತೋರಿಸುವಂತೆ ಹೇ



ಮಾಡೆಲ್ ಯು-764 : 5 ವಾಲ್ವ್‌ಗಳು, 3 ಬ್ಯಾಂಡ್‌ಗಳು, ಸುಂದರ ಪ್ಲಾಸ್ಟಿಕ್ ಕ್ಯಾಬಿನೆಟ್. ರೂ. 265.00



ಮಾಡೆಲ್ ಯು-755 : 6 'ನೋವಲ್' ವಾಲ್ವ್‌ಗಳು, 3 ಬ್ಯಾಂಡ್‌ಗಳು. ಸುಂದರ ಕ್ಯಾಬಿನೆಟ್. ರೂ. 355.00





ಮಾಡೆಲ್ 768 : 9 ವಾಲ್ವ್‌ಗಳ ಕೆಲಸಮಾಡು
6 'ನೋವಲ್' ವಾಲ್ವ್‌ಗಳು, 8 ಬ್ಯಾಂಡ್‌ಗಳು.
ಮರದ ಕ್ಯಾಬಿನೆಟ್. ರೂ. 570.00



ಮಾಡೆಲ್ ಬಿ-764 : ಡ್ರೈ ಬ್ಯಾಟರಿ ಸೆಟ್.
4 ವಾಲ್ವ್‌ಗಳು, 3 ಬ್ಯಾಂಡ್‌ಗಳು. ಪ್ಲಾಸ್ಟಿಕ್
ಕ್ಯಾಬಿನೆಟ್. ರೂ. 265.00



ಮಾಡೆಲ್ ಯು-756 : 3 'ನೋವಲ್'
ವಾಲ್ವ್‌ಗಳು, 2 ಬ್ಯಾಂಡ್‌ಗಳು. ಕಡಿಮೆ ಬೆಲೆಗೆ
ಬೆಲೆಬಾಳುವ ರೇಡಿಯೋವಿನ ಉತ್ಕೃಷ್ಟತೆ!
ಅಂದವಾದ ಪ್ಲಾಸ್ಟಿಕ್ ಕ್ಯಾಬಿನೆಟ್.
ರೂ. 125.00



ಮಾಡೆಲ್ ಎ-744 : 4 ಬ್ಯಾಂಡ್‌ಗಳು, 8 ವಾಲ್ವ್
ಗಳ ಕೆಲಸ ಮಾಡುವ 6 'ನೋವಲ್' ವಾಲ್ವ್‌ಗಳು.
ಆಕರ್ಷಕ ಕ್ಯಾಬಿನೆಟ್. ರೂ. 405.00



ಮಾಡೆಲ್ ಬಿ-755 : ಡ್ರೈ ಬ್ಯಾಟರಿ ಸೆಟ್.
5 'ನೋವಲ್' ವಾಲ್ವ್‌ಗಳು, 3 ಬ್ಯಾಂಡ್‌ಗಳು.,
ಆಕರ್ಷಕ ಕ್ಯಾಬಿನೆಟ್. ರೂ. 355.00



ಮಾಡೆಲ್ ಎ-767 : 7 ವಾಲ್ವ್‌ಗಳು, 8
ಬ್ಯಾಂಡ್‌ಗಳು. ದೊಡ್ಡ, ಸುಂದರ ಕ್ಯಾಬಿನೆಟ್.
ರೂ. 725.00

ಎಲ್ಲಾ ಬೆಲೆಗಳಲ್ಲಿ ಎಕ್ಸೈಜ್
ಡ್ಯೂಟಿ ಸೇರಿದೆ; ತೆರಿಗೆಗಳು ಪ್ರತ್ಯೇಕ

# GRA

ಜನರಲ್ ರೇಡಿಯೋ ಅಂಡ್
ಅಪ್ಲಯನ್ಸಸ್ ಲಿಮಿಟೆಡ್
ಬೊಂಬಾಯಿ . ಕಲ್ಕತ್ತ . ಮದರಾಸು
ದೆಹಲಿ . ಪಾಟ್ನ . ಬೆಂಗಳೂರು
ಸಿಕಂದರಾಬಾದು

JWTGRA 4226 a



ರಫೀಕ ಏಳು ವರ್ಷದವನಾಗುವಷ್ಟು ಹೊತ್ತಿಗೆ ತನ್ನ ತಂದೆ-ತಾಯಿ ಅಣ್ಣಂದಿರನ್ನು ಮುಖದಿಂದ ಗುರುತಿಸುವಷ್ಟೆ ಖಚಿತ ರೀತಿಯಲ್ಲಿ ಹೆಜ್ಜೆಗಳ ಮೇಲಿಂದಲೂ ಗುರುತಿಸಬಲ್ಲವನಾಗಿದ್ದ. ೧೩ ವರ್ಷದವನಾಗುವಷ್ಟು ಹೊತ್ತಿಗೆ ದಿನಗಟ್ಟಲೆ ಹಿಂದೆ ಹಾಯ್ದು ಹೋದ ಒಂಟೆಗಳ ಬಣ್ಣ ಇತ್ಯಾದಿಗಳನ್ನು ಅವುಗಳ ಹೆಜ್ಜೆಗಳ ಮೇಲಿಂದ ಗುರುತಿಸತೊಡಗಿದ್ದ.

೨೦ ವರ್ಷದವನಾದಾಗ ಆತ ಉಸುಕಿನಲ್ಲಿ ಮೂಡಿದ ಹೆಜ್ಜೆಗಳಿಂದ ಅವುಗಳಿಗೆ ಸಂಬಂಧಪಟ್ಟವರ ಇತಿಹಾಸವನ್ನು ನಾವು ಪುಸ್ತಕಗಳನ್ನೋದುವಷ್ಟೇ ಸುಲಭದಲ್ಲಿ ಓದಬಲ್ಲವನಾಗಿದ್ದ.

ರಫೀಕ ಪೋಲೀಸ ದಲದಲ್ಲಿ ಸೇರಿಕೊಳ್ಳುವ ಮೊದಲು ಪರೀಕ್ಷೆ ಕೊಡಬೇಕಾಯಿತು. ಪೋಲೀಸ ಪ್ರಮುಖ ತನ್ನ ಐವತ್ತು ಸಿಪಾಯಿಗಳಲ್ಲಿ ಹತ್ತು ಜನರು ರಫೀಕನ ಕಣ್ಣಿಗೆ ಬೀಳದೆ ಉಸುಕಿನಲ್ಲಿ ನಡೆಯುವಂತೆ ಆಜ್ಞಾಪಿಸಿದ. ಅವರ ಹೆಜ್ಜೆಯ ಗುರುತುಗಳ ಮೇಲಿಂದ ಆ ಐವತ್ತು ಜನರೂ ಒಟ್ಟಾಗಿ ಎದುರಾಗಿ ಬಂದಾಗ ಅವರನ್ನು ರಫೀಕ ಗುರುತಿಸಬೇಕಾಗಿತ್ತು.

ರಫೀಕ ಗುರುತಿಸಿದ. ಅವನಿಗೆ ನೌಕರಿ ಸಿಕ್ಕಿತು. ಇಷ್ಟು ಸುಲಭದ ಪರೀಕ್ಷೆ ಮಾಡಿಯಾರು ಎಂದವನಿಗೆ ಅನಿಸಿರಲಿಲ್ಲ.

ಪಾಶ್ಚಾತ್ಯ ದೇಶಗಳಲ್ಲಿ ಅಪರಾಧಿಗಳನ್ನು ಬೆರಳ ಮುದ್ರೆಗಳ ಮೇಲಿಂದ ಕಂಡುಹಿಡಿಯುತ್ತಾರೆ. ಆದರೆ ಮುರಾ ಜನರು ಹೆಜ್ಜೆಗಳ ಗುರುತುಗಳ ಮೇಲಿಂದ ಅಪರಾಧಿಗಳನ್ನು ಶೋಧಿಸಿ ತೆಗೆಯುತ್ತಾರೆ. ಇವೆರಡು ರೀತಿಗಳಲ್ಲಿ ಒಂದು ಮಹತ್ವದ ಅಂತರವಿದೆ. ಅಪರಾಧಿ ಕೈಚೀಲ ಹಾಕಿಕೊಂಡಿದ್ದರೆ ಬೆರಳ ತಜ್ಞ ಏನೂ ಮಾಡಲಾರ. ಆದರೆ ಹೆಜ್ಜೆ ತಜ್ಞನನ್ನು ಇಷ್ಟು ಸುಲಭದಲ್ಲಿ ಸೋಲಿಸಲು ಸಾಧ್ಯವಿಲ್ಲ.

ಅಪರಾಧಿ ತನ್ನ ಪಾದತ್ರಾಣಗಳನ್ನು ಬದಲಿಸಿದಾಗಲೂ ಅವನನ್ನು ಪತ್ತೆ ಹಚ್ಚಬಲ್ಲ ಹೆಜ್ಜೆ ತಜ್ಞರು ಅದನ್ನು ಹೇಗೆ ಸಾಧಿಸುತ್ತಾರೆಂಬುದು ಒಂದು ರಹಸ್ಯವೇ ಆಗಿದೆ. ರಫೀಕ ಕೂಡ ಇದನ್ನು ವಿವರಿಸಲಾರದೆ ಹೋಗಿದ್ದಾನೆ. ವಿಶಿಷ್ಟ ಜನರು ಪಾದತ್ರಾಣಗಳನ್ನು ಬದಲಿಸಿದರೂ ಅವರು ಹೆಜ್ಜೆ ಊರುವ ವಿಶಿಷ್ಟ ರೀತಿಯೆ ಅವರನ್ನು ಬಯಲಿಗೆಳೆಯಬಹುದಾದ್ದರಿಂದ ಇದು ಸಾಧ್ಯವಾಗುತ್ತಿದೆಯೆನ್ನಬಹುದು.

ಮುರಾ ತಜ್ಞ ತನ್ನ ಸಾಕ್ಷಿ ಪುರಾವೆಗಳನ್ನೆಲ್ಲ ತಲೆಯಲ್ಲಿಯೆ ನೋಂದಾಯಿಸಿಕೊಳ್ಳುವುದರಿಂದ ಅವನಿಗೆ ಪ್ರತ್ಯೇಕವಾದ ಫೈಲುಗಳು ಬೇಕಿಲ್ಲ. ಒಮ್ಮೆ ಥುಗ್ಬಾ ಎಂಬಲ್ಲಿ ಒಬ್ಬಾತನನ್ನು ಅವನ ಮನೆಯಲ್ಲಿ ಯಾರೊ ಚೂರಿಯಿಂದ ಇರಿದು ಕೊಂದರು. ಈ ಹಳ್ಳಿ ಧಾರಾನದಿಂದ ಅಲ್‌ಕೊಬರ್‌ಗೆ ಹೋಗುವ ಮುಖ್ಯ ರಸ್ತೆಯಲ್ಲಿದೆ. ಹೆಜ್ಜೆ ತಜ್ಞನಿಗೆ ಕೊಲೆಗಡಕನ ಹೆಜ್ಜೆಯ ಗುರುತನ್ನು ಹಿಡಿದು ಈ ಮುಖ್ಯ ರಸ್ತೆಯ ವರೆಗೆ ಬರುವ ವರೆಗೂ ತೊಂದರೆಯಾಗಲಿಲ್ಲ. ಆದರೆ ಅಲ್ಲಿ ಹೆಜ್ಜೆಯ ಗುರುತು ಕಾಣದಂತಾದ್ದರಿಂದ ಅವನು ಮುಂದೇನೂ ಮಾಡಲಾರದೆ ಹೋದ. ಆದರೆ ಆ ಹೆಜ್ಜೆ ಗುರುತುಗಳ ಪ್ರತಿ ಲಕ್ಷಣವನ್ನೂ ಆತ ನೆನಪಿನಲ್ಲಿಟ್ಟುಕೊಂಡ.

ಪೋಲೀಸ ಅಧಿಕಾರಿ ಕೊಲೆಯಾದವನೊಡನೆ ವ್ಯವಹಾರವಿದ್ದ ಅನೇಕರನ್ನು ಹಿಡತರಿಸಿದ. ಅವರೆಲ್ಲ ಉಸುಕಿನಲ್ಲಿ ನಡೆಯಲು ಆಜ್ಞಾಪಿಸಿದ. ಅವರಲ್ಲೊಬ್ಬನನ್ನು ಹಿಡಿದು ಆ ಹೆಜ್ಜೆ ತಜ್ಞ "ಇವನೇ ಕೊಲೆಗಡಕ" ಎಂದ. ಆತ ಕೊಲೆಯಾದವನ ತಮ್ಮನೇ ಆಗಿದ್ದ. ಆತ ತಪ್ಪೊಪ್ಪಿಕೊಂಡ.

ಸೌದಿ ಅರೇಬಿಯದಲ್ಲಿ ಅಪರಾಧಗಳ ಸಂಖ್ಯೆ ತೀರ ಕಡಿಮೆಯಾಗಿರುವುದಕ್ಕೆ ಬಹುಶಃ ಈ ಮುರಾ ಜನರೇ ಕಾರಣರಾಗಿರಬೇಕು. ಅಪರಾಧಗಳು ಕಡಿಮೆಯಾಗಿರುವಂತೆ ಪತ್ತೆಯಾಗದೇ ಇರುವ ಅಪರಾಧಗಳ ಸಂಖ್ಯೆಯೂ ತೀರ ಕಡಿಮೆಯಾಗಿದೆ. ಅಪರಾಧಗೈದವನು ಮುರಾ ಜನರಿಂದ ತಪ್ಪಿಸಿಕೊಂಡು ಉಳಿಯುವುದೆಂದರೆ ಪುನರ್ಜನ್ಮ ಹೊಂದಿದಷ್ಟೆ ಕಠಿಣವಾಗಿದೆ. *



ಪೂರ್ತಿ ದಿನದ
ತಂಪಿಗೆ
ಪ್ರಿಂಟೆಡ್ ಪಾಪ್ಲಿನ್



# ಮಫತಲಾಲ್ ಗ್ರೂಪ್

ನ್ಯೂ ಶೊರ್ರೋಕ್ (ಶೊರ್ರೋಕ್) ಅಹಮದಾಬಾದ್, ನ್ಯೂ ಶೊರ್ರೋಕ್, ನಡಿಯಾಡ್. ಸ್ಟಾಂಡರ್ಡ್, ಬೊಂಬಾಯಿ. ಸ್ಟಾಂಡರ್ಡ್ (ನ್ಯೂ ಚೈನಾ), ಬೊಂಬಾಯಿ, ಸ್ಟಾಂಡರ್ಡ್, ದೇವಾಸ್. ಸಾಸೂನ್, ಬೊಂಬಾಯಿ. ಸಾಸೂನ್ (ನ್ಯೂ ಯೂನಿಯನ್). ಬೊಂಬಾಯಿ. ಸೂರತ್ ಕಾಟನ್, ಸೂರತ್. ಮಫತ್‌ಲಾಲ್ ಫೈನ್ ನವಸಾರಿ. ಗಗಲ್‌ಭಾಯಿ ಜೂಟ್, ಕಲ್ಕತ್ತ. ಇಂಡಿಯನ್ ಡೈಸ್ಟಫ್. ಬೊಂಬಾಯಿ.

Graphic MP 59

ವಿದೇಶಿ ತಜ್ಞರು ಅದರ ದಕ್ಷತೆಗೆ ಬೆರಗಾಗಿದ್ದಾರೆ

# ಟಿ. ವಿ. ಎಸ್.

# ಒಂದು ಅಪೂರ್ವ ಸಂಘಟನೆ

ಮತ್ತೂರು ಕೃಷ್ಣಮೂರ್ತಿ

ಕೆಲ ವರ್ಷಗಳ ಹಿಂದೆ ಭಾರತ ಸರಕಾರವು ಈ ದೇಶದ ರಸ್ತೆ ಸಾರಿಗೆಯನ್ನು ಸುಸಂಘಟಿತವಾಗಿ ಮಾಡುವ ವಿಚಾರ ಸಲಹೆ ಕೊಡಲು ವಿದೇಶಿ ತಜ್ಞರ ಒಂದು ತಂಡವನ್ನು ಕರೆಸಿತು. ಅದು ಮದ್ರಾಸ್ ರಾಜ್ಯದ ಸಂಚಾರ ಮುಗಿಸಿ ಮದ್ರಾಸ್ ವಿಮಾನ ನಿಲ್ದಾಣದಲ್ಲಿ ಹೊರಡಲನುವಾಗಿದ್ದಾಗ ಸುದ್ದಿಗಾರನೊಬ್ಬ, "ನಮ್ಮ ರಸ್ತೆ ಸಾರಿಗೆ ಸುಧಾರಣೆಗಾಗಿ ಏನಾದರೂ ಉಪಯುಕ್ತ ಸೂಚನೆಗಳನ್ನು ಯೋಚಿಸಿದ್ದೀರಾ?" ಎಂದು ಕೇಳಿದ.

ಒಬ್ಬ ತಜ್ಞ ಸಂದೇಹದಿಂದ ತಲೆಯಾಡಿಸಿದ. "ನಮ್ಮನ್ನು ನಿಮ್ಮ ಸರಕಾರ ಕರೆಸಿದ್ದೇಕೋ ನಮಗ ತಿಳಿಯದಾಗಿದೆ" ಎಂದನಾತ. "ಇಲ್ಲಿಯ ನಿಮ್ಮ ಟಿ. ವಿ. ಎಸ್. ಸಾರಿಗೆ ಸಂಸ್ಥೆಯನ್ನು ಪರಿಶೀಲಿಸಿದ ಮೇಲೆ ರಸ್ತೆ ಸಾರಿಗೆಯ ವಿಷಯದಲ್ಲಿ ನಾವು ನಿಮಗೆ ಕಲಿಸುವುದರ ಬದಲು ನಿಮ್ಮಿಂದ ಕಲಿಯತಕ್ಕದ್ದೇ ಹೆಚ್ಚಿಗೆ ಇದೆ ಎನಿಸುತ್ತದೆ."

ಈ ಪ್ರಶಂಸೆ ಅಪ್ರಸ್ತುತವಾಗಿರಲಿಲ್ಲ. ಟಿ. ವಿ. ಎಸ್. ಸಂಸ್ಥೆ ಈ ದೇಶದ ಅತ್ಯಂತ ಹಿರಿಯ ಸಾರಿಗೆ ಸಂಸ್ಥೆಗಳಲ್ಲೊಂದಾಗಿದೆ; ಮತ್ತು ಜಗತ್ತಿನಲ್ಲೇ ಅತ್ಯಂತ ಸುಸಂಘಟಿತ ಸಾರಿಗೆ ಸಂಸ್ಥೆಗಳಲ್ಲಿ ಹೆಸರಿಸತಕ್ಕದ್ದಾಗಿದೆ. ನಾಲ್ಕು ರಾಜ್ಯಗಳಲ್ಲಿ ಸುಮಾರು ೬೦೦ ಬಸ್ ಮತ್ತು ಟ್ರಕ್ ಸರ್ವೀಸುಗಳನ್ನು ನಡೆಸುತ್ತಿರುವ ಈ ಸಂಸ್ಥೆಗೆ ಸೇರಿದ "ಸದರ್ನ್ ರೋಡ್‌ವೇಸ್"ನ ವಾಹನಗಳ ಸಂಚಾರದ ವೇಳೆಯಿಂದ ತಮ್ಮ ಗಡಿಯಾರಗಳನ್ನು ಸರಿಪಡಿಸಿಕೊಳ್ಳುವವರುದ್ದಾರೆ ಎಂದು ಹೇಳಲಾಗಿದೆ— ಅಷ್ಟು ಸಮಯನಿಷ್ಠ ಸಂಚಾರ ಅವುಗಳದು. ಈ ಸಂಸ್ಥೆಯವರ ಹತ್ತಿರ ಒಂದು ಮಗುವನ್ನು ಕೊಟ್ಟು ಅದನ್ನು ಇಂಥಲ್ಲಿ ಇಂಥ ಹೊತ್ತಿಗೆ ಮುಟ್ಟಿಸಿರಿ ಎಂದರೆ ಅದು ಆ ಹೊತ್ತಿಗೆ ಅಲ್ಲಿ ಸುರಕ್ಷಿತವಾಗಿ ತಲಪುವುದೆಂದು ನಿಶ್ಶಂಕೆಯಿಂದ ನಂಬಬಹುದು ಎಂದೊಬ್ಬರು ನನಗೆ ಹೇಳಿದ್ದುಂಟು.

ಈ ಸಂಸ್ಥೆ ಇದೇ ವರ್ಷ ತನ್ನ ಅರ್ಧ ಶತ



ಮಹೋತ್ಸವವನ್ನು ಆಚರಿಸಿತು. ಅದರ ಯಶಸ್ಸು ಬಹುಮಟ್ಟಿಗೆ ಅದರ ಸಂಸ್ಥಾಪಕರಾದ ಟಿ. ವಿ. ಸುಂದರಂ ಅಯ್ಯಂಗಾರರ ಪ್ರವರ್ತಕ ಧೈರ್ಯದ ಮತ್ತು ಅವರ ಮಕ್ಕಳ ತಾಂತ್ರಿಕ ಕೌಶಲದ ಫಲವಾಗಿದೆ. ಅದರ ಸಂಸ್ಥಾಪಕರ ಹೆಸರಿನ ಪ್ರಥಮಾಕ್ಷರಗಳಿಂದಲೇ ಅದಿಂದು ಪ್ರಸಿದ್ಧವಾಗಿರುವುದು.

ಟಿ. ವಿ. ಸುಂದರಂ ಅಯ್ಯಂಗಾರರು ಹಲವು ವಿಧಗಳಲ್ಲಿ ಅಪೂರ್ವ ವ್ಯಕ್ತಿಯಾಗಿದ್ದರು. ಅವರು ನಿಷ್ಠಾವಂತ ವೈದಿಕ ಮನೆತನದಲ್ಲಿ ೧೮೭೭ ರಲ್ಲಿ ಹುಟ್ಟಿದರು ಅವರ ತಂದೆ ವೆಂಗಾರಂ ಅಯ್ಯಂಗಾರರು ಆಗಿನ ಕೊಚ್ಚಿ ಸಂಸ್ಥಾನದ ತಿರುಚೂರಿನಲ್ಲಿ ಪ್ರಸಿದ್ಧ ವಕೀಲರಾಗಿ ಹೇರಳ ದ್ರವ್ಯ ಸಂಪಾದನೆ ಮಾಡಿದ್ದರು. ಅವರ ಬಂಧುಗಳ ಮಕ್ಕಳಲ್ಲನೇಕರು ಇಂಗ್ಲೀಷ್ ವಿದ್ಯೆ ಕಲಿತು ದೊಡ್ಡ ನೌಕರಿಗಳಲ್ಲಿದ್ದರು. ವೆಂಗಾರಂ ಹಿರಿಯ ಮಗನೂ ಡಿಗ್ರಿ ಪಡೆದು ಇಂಪೀರಿಯಲ್ ಬ್ಯಾಂಕಿನಲ್ಲಿ ದೊಡ್ಡ ಹುದ್ದೆಗೇರಿದ್ದರು. ಆದರೆ ಎರಡನೇ ಮಗ ಸುಂದರಂಗೆ ಮೊದಲಿಂದಲೂ ನೌಕರಿಯಲ್ಲಿ ಆಸಕ್ತಿ ಇರಲಿಲ್ಲ. ಅವರು ಎಫ್. ಎ. ಯಲ್ಲೇ ಕಾಲೇಜಿಗೆ ಶರಣು ಹೊಡೆದು ವ್ಯವಹಾರದಲ್ಲಿ ಅನುಭವ ಗಳಿಸಬೇಕೆಂದು ಕೆಲ ಕಾಲ ರೇಲ್ವೆ ಕಂಟ್ರಾಕ್ಟರನೊಬ್ಬನ ಕೈಕೆಳಗೆ ದುಡಿದರು; ಸ್ವತಂತ್ರ ವ್ಯವಸಾಯದ ಹುಮ್ಮಸ್ಸು ಹೆಚ್ಚಿಕೊಂಡು ಅವರು ನಾಟಿನ ವ್ಯಾಪಾರ ಪ್ರಾರಂಭಿಸಿದರು. ಆದರೆ ಆ ವ್ಯಾಪಾರ ಅಷ್ಟಾಗಿ ಕುದುರಲಿಲ್ಲ.

ಆಗಲೇ ಸುಂದರಂ ಅಯ್ಯಂಗಾರರು ಆಗ ಹೊಚ್ಚ ಹೊಸದಾಗಿದ್ದ ಮೋಟಾರ್ ಸಾರಿಗೆ ಉದ್ಯಮದಲ್ಲಿ ಅದೃಷ್ಟಪರೀಕ್ಷೆ ಮಾಡಲು ನಿರ್ಧರಿಸಿದ್ದು. ಮೋಟಾರುಗಳು ಈ ದೇಶಕ್ಕೆ ಆಗತಾನೆ ಬರಲಾರಂಭಿಸಿದ್ದವು. ಸುಂದರಂ ಪುದುಕೋಟೆ ಸಂಸ್ಥಾನಕ್ಕೆ ಬರುತಿದ್ದ ಕೆಲ ಮೋಟಾರ್ ಗಾಡಿಗಳನ್ನು ಖರೀದಿ ಮಾಡಿ ೧೯೧೨ ರಲ್ಲಿ ಮಧುರೆ-ದೇವಕೋಟೆ ಮಾರ್ಗದಲ್ಲಿ ಪ್ರಪ್ರಥಮ ಬಸ್ ಸರ್ವೀಸ್ ಆರಂಭಿಸಿದರು. ಆದರೆ ಈ ಮಾರ್ಗದಲ್ಲಿ ಅನೇಕ ಅಡಚಣೆಗಳೊದಗಿದ್ದರಿಂದ ಅದನ್ನವರು ಕೈ ಬಿಡಬೇಕಾಯಿತು.

ಸೋಲೊಪ್ಪದೆ ಅಯ್ಯಂಗಾರರು ಪುದುಕೋಟೆಯಿಂದ ತಂಜಾವೂರಿಗೆ ಬಸ್ ಸಾರಿಗೆಯ ಏಕಾಧಿಕಾರ ಪಡೆದಿದ್ದ 'ಸೌತ್ ಇಂಡಿಯನ್ ಮೋಟಾರ್ ಸರ್ವೀಸ್' ಸಂಸ್ಥೆಯ ಪಾಲುಗಾರರಾಗಿ ಸೇರಿದರು. ೧೯೧೨ ರಿಂದ ೧೯೧೯ ರ ವರೆಗೆ ಅವರು ಅದರ ಪಾಲುಗಾರರಾಗಿದ್ದಾಗಲೇ ಟಿ ವಿ. ಸುಂದರಂ ಹೆಸರಿಗಿಂದು ಪರ್ಯಾಯವಾಗಿಬಿಟ್ಟಿರುವ ಶಿಸ್ತು, ಸಮಯನಿಷ್ಠೆ, ದಕ್ಷತೆ, ಪ್ರಾಮಾಣಿಕತೆ, ದೂರದೃಷ್ಟಿಗಳ ವೈಭವ ದೃಢವಾಗಿ ಸ್ಥಾಪಿತವಾದದ್ದು. ವಿಶ್ವಾಸಾರ್ಹ ಜನಪ್ರಿಯರಾದ ನೌಕರರ ನೇಮಕ, ವ್ಯವಸ್ಥಿತವಾದ ವ್ಯವಹಾರ ನೀತಿಗಳ ದೆಸೆಯಿಂದ ಕೊರಳುಕೊಯ್ಯ ಪೈಪೋಟಿಯ ಸಮಯದಲ್ಲೂ ಯೋಗ್ಯ ದರಗಳಿಂದಲೇ ಆ ಸಂಸ್ಥೆ ಲಾಭದಾಯಕವಾಗಿ ನಡೆಯಿತು. ರಸ್ತೆಗಳು ಚೆನ್ನಾಗಿದ್ದರೆ ಬಸ್ಸುಗಳು ತಾಳಿಕೆ ಬರುವುದಲ್ಲದೆ ಸಮಯಕ್ಕೆ ಸರಿಯಾಗಿ ಗುರಿಮುಟ್ಟುವುದೂ ಸಾಧ್ಯವೆಂದು ಮನಗಂಡ ಅವರು ರಸ್ತೆ ದುರಸ್ತಿ ಕಂಟ್ರಾಕ್ಟನ್ನೂ ತಾವೇ ಸಂಪಾದಿಸಿಕೊಂಡರು! ಆದರೆ ಈ ಸುಖವಾದ ವ್ಯವಸ್ಥೆ ಚಿರಕಾಲ ಸಾಗಲಿಲ್ಲ. ರಸ್ತೆ ಕಂಟ್ರಾಕ್ಟುಗಳಿಗೂ ಸಾರಿಗೆ ಪರ್ಮಿಟ್ಟುಗಳಿಗೂ ಹುಚ್ಚು ಪೈಪೋಟಿ ಪ್ರಾರಂಭವಾಗಿ ರಸ್ತೆಗಳು ಕೆಟ್ಟು ಅವ್ಯವಸ್ಥೆ ಬೆಳೆದದ್ದರಿಂದ ಶಿಸ್ತಿನ ಭಕ್ತರಾದ ಸುಂದರಂ 'ಸೌತ್ ಇಂಡಿಯನ್ ಮೋಟಾರ್ ಸರ್ವೀಸ್'ನ್ನು ತ್ಯಜಿಸಿದರು.

ಅನಂತರ ಅವರು ಮಧುರೆಯಲ್ಲಿ ಸೈಕಲ್, ಕಾರು, ಲಾರಿ, ಬಸ್ಸುಗಳಿಗೆ ಬೇಕಾದ ಯಂತ್ರೋಪಕರಣಗಳ ಅಂಗಡಿಯನ್ನು ಸ್ವತಂತ್ರವಾಗಿ ತೆರೆದರು. ಗಿರಾಕಿಗಳ ಅಗತ್ಯತೆಗಳ ವಿಷಯದಲ್ಲಿ ಅವರ ಅನುಭವವು ಈಗ ಪೂರ್ತಿ ರೂಪದಲ್ಲಿ ಪ್ರಕಾಶಕ್ಕೆ ಬಂತು. ಮಧುರೆ ತಿರುನೇಲ್ವೆಲಿಗಳಲ್ಲಿ ಅವರ ಕೀರ್ತಿ ಹಬ್ಬಿತು. ಹತ್ತೇ ವರ್ಷಗಳಲ್ಲಿ ಅವರ ವ್ಯವಹಾರ ಕೌಶಲ ದೇಶದ ಸೀಮೆ ದಾಟಿ ವಿದೇಶೀಯರನ್ನೂ ಆಕರ್ಷಿಸಿ ಪೋರ್ಡ್ ಕಾರ್ ಮತ್ತು ಟ್ರಕ್ಕುಗಳ, ಚವರ್ಲೆ ಕಾರುಗಳ ಮತ್ತು ಅಮೇರಿಕದ ಜನರಲ್ ಮೋಟಾರ್ಸ್‌ನ ಅಧಿಕೃತ ಮಾರಾಟಗಾರರಾದರು. ಅವರ ಮಕ್ಕಳು ಒಬ್ಬೊಬ್ಬರಾಗಿ

ಮೋಟಾರ್ ವ್ಯವಹಾರದ ಬೇರೆ ಬೇರೆ ಶಾಖೆಗಳಲ್ಲಿ ತಜ್ಞರಾಗಿ ಬರತೊಡಗಿದರು. ೧೯೨೯ ರಲ್ಲಿ ಟಿ. ವಿ. ಸುಂದರಂ ಅಯ್ಯಂಗಾರ್ ಆ್ಯಂಡ್ ಸನ್ಸ್ ಲಿಮಿಟೆಡ್ ಸಂಸ್ಥೆ ರಿಜಿಸ್ಟರಾಯಿತು.

ಇಂದು ಇದೇ ಸಂಸ್ಥೆ ಶಾಖೋಪಶಾಖೆಗಳಾಗಿ ಬೆಳೆದು ನಿಂತಿದೆ. ಅದು ಮತ್ತು ಅದರ ೧೩ ಉಪಸಂಸ್ಥೆಗಳು ಉತ್ಪಾದಿಸದ ಮತ್ತು ವ್ಯವಹರಿಸದ ಮೋಟಾರ್‌ಉದ್ಯಮದ ಯಾವ ಅಂಗವೂ ಉಳಿದಿಲ್ಲವೆನ್ನಬೇಕು. ಬಿಡಿ ಭಾಗಗಳಿಂದ ಹಿಡಿದು ಇಡಿ ಮೋಟಾರುಗಳವರೆಗಿನ ಮಾರಾಟ, ಸವೆದ ಟಾಯರುಗಳ ಪುನಾರಚನೆಯಿಂದ ಹಿಡಿದು ಅತ್ಯಂತ ಸೂಕ್ಷ್ಮವಾದ ಭಾಗಗಳ ದುರಸ್ತಿ ಮತ್ತು ನವೀಕರಣ, ಮೋಟಾರ್ ಭಾಗಗಳ ನಿರ್ಮಾಣ, ಮೋಟಾರ ಇನ್ಶೂರೆನ್ಸ್, ಸರ್ವೀಸಿಂಗ್ ಮಾತ್ರವಲ್ಲದೆ ಫೈನಾನ್ಸ್ ಮತ್ತು ಜವಳಿ ಉದ್ಯಮದ ವರೆಗೂ ಸುಂದರಂ ಉಪಸಂಸ್ಥೆಗಳು ಕೈಚಾಚಿವೆ.

ಟಿ. ವಿ. ಎಸ್. ಯಶಸ್ಸಿನ ಕಥೆಯನ್ನು ಹೇಳುವಾಗ ಅವರ ನೇತೃತ್ವ ವಹಿಸಿದವರ ವ್ಯವಹಾರ ನೀತಿಯನ್ನು ಕುರಿತು ಹೇಳಲೇಬೇಕು. ಏಕೆಂದರೆ ಅಲ್ಲೇ ಅವರ ಯಶಸ್ಸಿನ ಗುಟ್ಟು ಅಡಗಿದೆ.

ಮೊದಲನೆಯದಾಗಿ ಯಾವುದನ್ನೂ ಏಕಾಂಗಿ ಉದ್ಯಮವಾಗಿ ನಡೆಸುವುದು ಉಪಯುಕ್ತವಲ್ಲ ಎಂಬ ತತ್ವವನ್ನು ಟಿ. ವಿ. ಎಸ್. ಪ್ರಾರಂಭದಲ್ಲೇ ಗ್ರಹಿಸಿದ್ದರು. ೧೯೧೩ ರಲ್ಲಿ ಪುದುಕೋಟೆ-ತಂಜಾವೂರು ಬಸ್ ಸರ್ವೀಸನ್ನು ನಡೆಸುತ್ತಿದ್ದಾಗಲೆ, ಬಸ್ ಸಾರಿಗೆಯನ್ನು ಸರಿಯಾಗಿ ನಡೆಸಬೇಕಾದರೆ ದುರಸ್ತಿ ವ್ಯವಸ್ಥೆಯನ್ನೂ ತಾವೇ ಮಾಡಿಕೊಳ್ಳಬೇಕು ಎಂಬ—ಇತರ ಸಾರಿಗೆದಾರರಿಗೆ ಹೊಳೆಯದಿದ್ದ—ಅಂಶವನ್ನು ಮನಗಂಡು ಆ ಮಾರ್ಗದ ನಡುವಿದ್ದ ಗಂಧರ್ವಕೋಟೆಯಲ್ಲಿ ಒಂದು ಭತ್ತದ ಗಿರಣಿಯಲ್ಲಿ, ಕೆಟ್ಟು ನಿಂತ ಬಸ್ಸುಗಳ ದುರಸ್ತಿಯ ಏರ್ಪಾಡು ಮಾಡಿಕೊಂಡರು; ಬಿಡಿ ಭಾಗಗಳನ್ನು ತಾವೇ ಸರಿಪಡಿಸಿಕೊಳ್ಳುವುದು ಸೂಕ್ತ ಎಂದು ಅದಕ್ಕಾಗಿ ಅವರು ಕೊಂಡುಕೊಂಡ ಲೇಥ್ ಇನ್ನೂ ಸಂಸ್ಥೆಯ ವಶದಲ್ಲಿದೆ.

ಉದ್ಯಮಗಳ ಪರಸ್ಪರಾಶ್ರಯದ ಈ ಪ್ರಜ್ಞೆಯೇ ಟಿ. ವಿ. ಎಸ್. ಸಂಸ್ಥೆಯ ಕಾಲ್ಪನಿಕ ಸಂಸಾರದಂಥ ವಿಸ್ತರಣೆಗೆ ಕಾರಣವಾಯಿತು. ಆದರೆ ಅದರಿಂದಲೇ ಈ ಸಂಸ್ಥೆ ಸಾರ್ವಜನಿಕರ ಮೇಲೆ ಅತಿ ಕಡಿಮೆ ಭಾರ ಹಾಕಿ ಅತಿ ಹೆಚ್ಚು ಸೌಕರ್ಯಗಳನ್ನು ಕೊಡಲು ಸಮರ್ಥವಾಗಿದೆ. ಸರಕಾರಿ ಬಸ್ ಸಾರಿಗೆಯವರು ಮೊದಲ ಹಂತಕ್ಕೆ ೬, ಎರಡನೆಯದಕ್ಕೆ ೫, ಮೂರನೆಯದಕ್ಕೆ ೪, ನಾಲ್ಕನೆಯ ಮತ್ತು ಮುಂದಿನ ಹಂತಗಳಿಗೆ ೩ ನಯೆಪೈಸೆಗಳಂತೆ ದರ ವಸೂಲು ಮಾಡಿಯೂ ಲಾಭ ತೋರಿಸಲು ಸಮರ್ಥರಾಗದಿರುವಾಗ ಟಿ. ವಿ. ಎಸ್. ನ ಸದರ್ನ್ ರೋಡ್ ವೇಸ್‌ನವರು ಮೊದಲನೇ ಹಂತಕ್ಕೆ ೬ ಮುಂದಿನ ಎಲ್ಲ ಹಂತಗಳಿಗೆ ೩ ನಯೆ ಪೈಸೆಗಳಂತೆ ಮಾತ್ರ ದರ ವಸೂಲು ಮಾಡುತ್ತಾರೆ. ಆದರೆ ಅವರ ಬಸ್ಸುಗಳು ಯಾವ ಸರಕಾರಿ ವಾಹನಕ್ಕಿಂತಲೂ ಸ್ವಚ್ಛವಾಗಿರುತ್ತವೆ. ಮಧುರೆಯ ಸಿಟಿ ಸರ್ವೀಸಿನಲ್ಲಿ ಒಮ್ಮೆಗೆ ೯೦ ಪ್ರವಾಸಿಗಳನ್ನು ಹೊತ್ತು ಸಾಗುವ ೨೦ ಟಿ. ವಿ. ಎಸ್. ಬಸ್ಸುಗಳು ಓಡಾಡುತ್ತವೆ. ಪ್ರತಿಯೊಂದು ಸುತ್ತಿನ ನಂತರವೂ ಸ್ವಚ್ಛವಾಗಿ ಗುಡಿಸಲ್ಪಟ್ಟೇ ಹೊರಡುತ್ತವೆ. ಈ ಸ್ವಚ್ಛತೆಯ ಮಟ್ಟವೂ ಇತರತ್ರ ದುರ್ಲಭವೇ.

ಗಿರಾಕಿಗಳನ್ನು ಒಲಿಸಿಕೊಳ್ಳುವ ಕಲೆಯನ್ನು ಟಿ ವಿ.ಎಸ್. ಬಲು ಜಾಗರೂಕತೆಯಿಂದ ಸಾಧಿಸಿಕೊಂಡಿದೆ. ಟಿ. ವಿ. ಸುಂದರಂ ಅವರು ಗಿರಾಕಿಗಳಿಂದ ತಮ್ಮ ಮೇಲೆ ಸರ್ವಾಧಿಕಾರ ನಡೆಯುವುದನ್ನೆಂದೂ ಸಹಿಸುತ್ತಿರಲಿಲ್ಲವಾದರೂ ಅವರ ಅವಶ್ಯಕತೆಗಳನ್ನು ಅಭ್ಯಸಿಸಿ ಅತಿ ಶ್ರೇಷ್ಠವಾದದ್ದನ್ನೆ ಒದಗಿಸಲು ಬಹಳ ಶ್ರಮಪಡುತ್ತಿದ್ದರು. ನಾಟಿನ ವ್ಯಾಪಾರದಲ್ಲಿದ್ದಾಗ ಅವರು ಅತ್ಯುತ್ತಮ ನಾಟನ್ನು ಹರಾಜಿನಲ್ಲಿ ಹಿಡಿಯಲು ಕೇರಳ ರಾಜ್ಯವನ್ನೆಲ್ಲ ಸಂಚರಿಸುತ್ತಿದ್ದರು. ಮೋಟಾರ್ ವ್ಯವಹಾರದಲ್ಲಿ ಪ್ರವೇಶಿಸಿದ ಮೇಲೆ ಫೋರ್ಡ್, ಜನರಲ್ ಮೋಟಾರ್ಸ್ ಇವೆಲ್ಲವುಗಳ ಬಿಡಿ ಭಾಗಗಳ ಯೋಗ್ಯಾಯೋಗ್ಯತೆಗಳನ್ನೂ ತಮ್ಮ ಪ್ರದೇಶದ ಗಿರಾಕಿಗಳ ಅವಶ್ಯಕತೆಗಳನ್ನೂ ಅಭ್ಯಸಿಸಿ ಉತ್ಕೃಷ್ಟವಾದುದನ್ನೆ ಒದಗಿಸಲು ಹೆಣಗುತ್ತಿದ್ದರು.

ಗಿರಾಕಿಗಳ ವಿಶ್ವಾಸ ಗಳಿಸಲು ಪ್ರಾಮಾಣಿಕ

ತೆಯೆ ಮುಖ್ಯವೆಂದವರು ಗಟ್ಟಿಮಾಡಿಕೊಂಡರು. ಮೋಟಾರ್ ಬಿಡಿ ಭಾಗಗಳನ್ನು ಇಂದಿಗೂ "ಫ್ಯಾನ್ಸಿ" ಬೆಲೆಗೆ ಮಾರಿ ಲಾಭ ಹೊಡೆಯುವವರಿರುವಾಗ ಟಿ. ವಿ. ಎಸ್. ಅನೇಕ ದಶಕಗಳ ಹಿಂದೆಯೇ ಆಯಾ ಬಿಡಿ ಭಾಗದ ಕಾರ್ಯಶಕ್ತಿಯ ವಿವರ ಸಮೇತ ಬೆಲೆಪಟ್ಟಿಗಳನ್ನು ಟೈಪ್ ಮಾಡಿ ಹಂಚಿ ಗಿರಾಕಿಗಳ ಮನಸ್ಸಿನಲ್ಲಿ ಯಾವ ಸಂದೇಹಕ್ಕೂ ಎಡೆಯಿಲ್ಲದಂತೆ ವ್ಯವಸ್ಥೆ ಮಾಡಿದ ಮೊಟ್ಟಮೊದಲ ಸಂಸ್ಥೆಯಾಗಿತ್ತು. ಟಾಯರುಗಳ ರಿಟ್ರೆಡಿಂಗ್ (ಪುನಾರಚನೆ) ನ್ನು ಟಿ. ವಿ. ಎಸ್ ಸಂಸ್ಥೆಯವರು ಪ್ರಾರಂಭಿಸಿದಾಗ ಗಿರಾಕಿಗಳು ಅದರ ಬಗ್ಗೆ ಸಂಶಯಗ್ರಸ್ತರೇ ಆಗಿದ್ದರು. ಆದರೆ ಟಿ. ವಿ. ಎಸ್. ನವರು ಅವರಿಗೆ ಪುನಾರಚಿತ ಟಾಯರುಗಳನ್ನು ಧೈರ್ಯದಿಂದ ನಂಬಿಕೆಯ ಮೇಲೆ ಉಪಯೋಗಿಸಲು ಹಂಚಿದರು. ಪುನಾರಚಿತ ಟಾಯರುಗಳ ಯೋಗ್ಯತೆ ಖಚಿತವಾದದ್ದರಿಂದ ಇಂದು ವರ್ಷಕ್ಕೆ ೭೦,೦೦೦ ಟಾಯರುಗಳನ್ನು ಅದು ರಿಟ್ರೆಡ್ ಮಾಡುತ್ತಿದೆ.

ಆದರೆ ಟಿ ವಿ ಎಸ್ ಸಂಸ್ಥೆಯ ಅದ್ಭುತವೆಂದರೆ ಅದರ ಬಸ್ ಮತ್ತು ಟ್ರಕ್ ಸಾರಿಗೆಯೇ ಆಗಿದೆ. ಅದರ ಸಿಟಿ ಮತ್ತು ಜಿಲ್ಲಾ ಬಸ್ ಸರ್ವೀಸುಗಳು ಸರಾಸರಿ ೬೦ ಸೀಟುಗಳನ್ನೊಳಗೊಂಡ ೩೬೦ ಪೆಟ್ರೋಲ್ ಮತ್ತು ಡಿಸೇಲ್ ಬಸ್ಸುಗಳನ್ನು ಒಟ್ಟು ೫೪,೦೦೦ ಮೈಲು ವ್ಯಾಪ್ತಿಯ ೧೪೭ ಮಾರ್ಗಗಳಲ್ಲಿ ಪ್ರತಿ ದಿನ ನಡೆಸುತ್ತವೆ. ಅವು ಮಿನಿಟಿಗೆ ಸರಿಯಾಗಿ ಸಕಾಲದಲ್ಲಿ ಹೊರಡುತ್ತವೆ, ತಲುಪುತ್ತವೆ. ಟಿ. ವಿ. ಎಸ್ ಬಸ್ಸುಗಳು ಹೊಗೆ ಕಾರಿ ದಾರಿಹೋಕರಿಗೂ ಪ್ರಯಾಣಿಕರಿಗೂ ಕಷ್ಟವುಂಟುಮಾಡುವುದಿಲ್ಲ. ಸರಕಾರಿ ಬಸ್ಸುಗಳು ಕೆಟ್ಟು ನಿಂತು ಹೋಗುವುದು ಸೇಕಡಾ ೩೨ ರಷ್ಟಿದ್ದರೆ ಟಿ.ವಿ. ಎಸ್ ಬಸ್ಸುಗಳು ಕೇವಲ ಸೇಕಡಾ ೧೨ ರಷ್ಟು ಕೆಡುತ್ತವೆ.

೧೯೪೫ ರಲ್ಲಿ ಟಿ.ವಿ. ಎಸ್‌ನವರು "ಸಕಾಲಕ್ಕೆ ಲಾರಿಗಳು" ತತ್ವವನ್ನು ಆಚರಣೆಗೆ ತಂದರು. ಲಾರಿಗಳನ್ನು ಕಾಲಕ್ಕೆ ಸರಿಯಾಗಿ ನಡೆಸುವುದು ಸಾಧ್ಯವೇ ಇಲ್ಲೆಂದು ಆಗಿನ ಅಭಿಪ್ರಾಯವಾಗಿತ್ತು ಆದರೆ ಟಿ. ವಿ. ಎಸ್ ಅದನ್ನು ಸಾಧಿಸಲು ಕಟಿಬದ್ಧವಾಯಿತು. ಆರು ತಿಂಗಳ ಕಾಲ ನಿರಂತರ ನಷ್ಟವನ್ನು ಅನುಭವಿಸಿದರೂ ಹಿಂದೆಗೆಯಲಿಲ್ಲ. ಇಂದು ಟಿ. ವಿ. ಎಸ್‌ನ ೩೮೬ ಲಾರಿ ಆಫೀಸುಗಳು ಪಾರ್ಸೆಲ್ಲುಗಳನ್ನು ಸ್ವೀಕರಿಸುತ್ತವೆ; ೯೭ ಮಾರ್ಗಗಳಲ್ಲಿ ೨೧೪ ಬಸ್ಸುಗಳು ದಿನಕ್ಕೆ ೨೯,೦೦೦ ಮೈಲು ಓಡುತ್ತವೆ; ಮತ್ತು ಸಕಾಲಕ್ಕೆ ಓಡುತ್ತವೆ. ಅವು ಅವಸರವಿಲ್ಲದೆ ಮಿತಗತಿಯಿಂದ ಆದರೆ ಏಕಪ್ರಕಾರವಾಗಿ ಓಡುವುದರಿಂದಲೇ ಈ ಸಮಯನಿಷ್ಠೆ ಸಾಧ್ಯವಾಗುತ್ತದೆ. ಹೀಗೆ ಪ್ರತಿ ದಿನಕ್ಕೆ ಸರಾಸರಿ ೨೨೭ ಮೈಲು ಸಾಗುವ ಈ ಟ್ರಕ್ಕುಗಳು ಮದ್ರಾಸ್, ಮೈಸೂರು, ಕೇರಳ, ಆಂಧ್ರ ನಾಲ್ಕು ರಾಜ್ಯಗಳಲ್ಲಿ ಓಡಾಡುತ್ತವಲ್ಲದೆ ಇತರ ಸುವ್ಯವಸ್ಥಿತ ಸಾರಿಗೆ ಕಂಪನಿಗಳ ಸಂಗಡ ಒಪ್ಪಂದ ಮಾಡಿಕೊಂಡು ಮುಂಬಯಿ, ಕಲಕತ್ತಾ, ನಾಗಪುರ, ದಿಲ್ಲಿ, ಕಾನಪುರಗಳ ವರೆಗೆ ಪಾರ್ಸೆಲುಗಳನ್ನು ಕಳಿಸಲು ಸ್ವೀಕರಿಸುತ್ತವೆ.

ವಾಸ್ತವಿಕವಾಗಿ ರಸ್ತೆ ಸಾರಿಗೆಯಲ್ಲಿ ಟಿ. ವಿ. ಎಸ್.ನ ಕೈ ಹಿಡಿಯುವವರು ಈ ದೇಶದಲ್ಲೇ ಇಲ್ಲ. ಮುಂಬಯಿ, ಮೈಸೂರು ರಾಜ್ಯಗಳ ಸರಕಾರಿ ಬಸ್ ಸಾರಿಗೆ ಸಂಸ್ಥೆಗಳ ಹಿರಿಯ ಅಧಿಕಾರಿಗಳಲ್ಲಿ ಹಲವರು ಟಿ. ವಿ. ಎಸ್. ನಲ್ಲಿ ತರಬೇತಾಗಿ ಬಂದವರು. ಬೆಂಗಳೂರಿನ ಹಿಂದ(ು)ಸ್ತಾನ ಮೆಶೀನ್ ಟೂಲ್ಸ್ (ಸರಕಾರಿ ಸಂಸ್ಥೆ)ನ ೨೫ ಬಸ್ಸುಗಳ ಸಾರಿಗೆ ವ್ಯವಸ್ಥೆಯಲ್ಲಿ ಕೋಲಾಹಲವಾದಾಗ ಅದನ್ನು ಸರಿಪಡಿಸಲು ಟಿ. ವಿ. ಎಸ್. ತಜ್ಞರನ್ನು ಕರೆಸಬೇಕಾಯಿತು!

ಟಿ. ವಿ. ಎಸ್.ನ ವಿಶಾಲ ಸಂಘಟನೆ ಕೆಲ ಪಾಶ್ಚಾತ್ಯ ಉದ್ಯಮಗಳಂತೆ ಒಂದು ಭಾರಿ ಕೌಟುಂಬಿಕ ಸಂಘಟನೆಯಾಗಿದೆ. ಸುಂದರಂ ಅಯ್ಯಂಗಾರರದು ಐದು ಗಂಡು, ನಾಲ್ಕು ಹೆಣ್ಣು ಮಕ್ಕಳ ದೊಡ್ಡ ಕುಟುಂಬ. ಅವರು ತಮ್ಮ ಗಂಡುಮಕ್ಕಳಲ್ಲಿ ಪ್ರತಿಯೊಬ್ಬನಿಗೂ ಅವನವನ ರುಚಿಗೊಪ್ಪುವ ಶಿಕ್ಷಣ ಕೊಡಿಸಿ ಸಂಸ್ಥೆಯೊಳಗೆ ತೆಗೆದುಕೊಂಡರು. ಹಿರಿಯವರಾದ ರಾಜಂ ಗಿರಾಕಿಗಳ ಅಗತ್ಯ ಮತ್ತು ಕೆಲಸಗಾರರ ಹಿತಗಳನ್ನು ಕುರಿತು ಲಕ್ಷ್ಯ ಹಾಕಿದರೆ, ಎರಡನೆಯವರಾದ ದೊರೆಸ್ವಾಮಿ ಮಾರಾಟಗಾರಿಕೆಯಲ್ಲಿ ನಿಪುಣರಾದರು. (ದುರ್ದೈವದಿಂದ ಇವರು

೧೯೪೯ ರಲ್ಲಿ ನಿಧನಹೊಂದಿದರು). ಅಮೇರಿಕದ ಜನರಲ್ ಮೋಟಾರ್ಸಿನಲ್ಲಿ ತರಬೇತಿ ಹೊಂದಿದ ಕೃಷ್ಣ ಅವರು ಯಂತ್ರೋಪಕರಣಗಳ ತಜ್ಞರು. ಸಂತಾನಂ ಬಿಡಿ ಭಾಗ ಮತ್ತು ಮೋಟಾರ್ ಉಪಕರಣಗಳ ವಿಷಯದಲ್ಲಿ ಅದ್ವಿತೀಯರಾಗಿದ್ದು ಟಿ. ವಿ. ಎಸ್.ನ ಮೋಟಾರ್ ಸರ್ವೀಸುಗಳ ಖ್ಯಾತಿಗೆ ಮುಖ್ಯ ಕಾರಣರಾಗಿದ್ದಾರೆ. ಕೊನೆಯವರಾದ ಶ್ರೀನಿವಾಸನ್ ಕೂಡ ಅಮೇರಿಕದಲ್ಲಿ ತರಬೇತಾದವರು; ಅವರ ತಜ್ಞತೆಯಿಂದಲೇ ಮೋಟಾರ್ ಉಪಕರಣಗಳ ಕಾರಖಾನೆ ಸ್ಥಾಪನೆಯಾಗಿ ಮಾರುಕಟ್ಟೆಯಲ್ಲಿ ಖ್ಯಾತಿಗಳಿಸಿದೆ. ಇಂದು ಸುಂದರಂ ಮೊಮ್ಮಕ್ಕಳು ಒಬ್ಬೊಬ್ಬರಾಗಿ ತಜ್ಞರಾಗಿ ವಿಶಾಲವಾದೀ ಸಂಸ್ಥೆಯಲ್ಲಿ ಪಾತ್ರ ವಹಿಸಲು ಬರುತ್ತಿದ್ದಾರೆ.

ಮೂರು ತಲೆ ಮಾರುಗಳ ಈ ಬಾಂಧವ್ಯ ಕೂಟದಲ್ಲಿ ಟಿ. ವಿ. ಎಸ್. ಸಂಸ್ಥೆಗಳಲ್ಲಿ ದುಡಿಯುವ ೧೦,೦೦೦ ಕ್ಕೂ ಹೆಚ್ಚು ಕೆಲಸಗಾರರೂ ಸೇರುತ್ತಾರೆ. ನಿಜವಾಗಿ ಟಿ.ವಿ.ಎಸ್ ಯಶಸ್ಸಿನ ಬಹು ಭಾಗ ಅದರ ನಿಷ್ಠ ಮತ್ತು ತೃಪ್ತ ಕಾರ್ಯಕರ್ತರಿಗೆ ಸೇರುತ್ತದೆ. ಟಿ. ವಿ. ಸುಂದರಂ ಅಯ್ಯಂಗಾರರು ಒಂದು ರೀತಿಯಿಂದ ಕಠೋರ ಶಿಸ್ತಿನ ಒಡೆಯರಾಗಿದ್ದರು. (ಒಮ್ಮೆ ಅವರು ನಗದಿ ಶಿಲ್ಕಿನಲ್ಲಿ ಕೆಲ ಆಣೆ ಹೆಚ್ಚು ಕಡಿಮೆಯಾದುದನ್ನು ಸರಿ ಹೊಂದಿಸಲು ನಗದಿ ಕಾರಕೂನನನ್ನು ನಟ್ಟಿರುಳು ದಾಟುವ ವರೆಗೂ ಕೂಡ್ರಿಸಿಕೊಂಡು ತಾವೂ ಕೂತು ಅದನ್ನು ಸರಿಪಡಿಸಿಯೆ ಹೊರಬಿದ್ದರಂತೆ). ಆದರೆ ಕೆಲಸಗಾರರ ಯೋಗಕ್ಷೇಮವನ್ನು ಚಿಂತಿಸುವುದರಲ್ಲಿಯೂ ಅವರು ಕಡಿಮೆಯಾಗಿರಲಿಲ್ಲ. ೧೯೧೨ ರಲ್ಲಿ ಅವರು ಬಸ್ ಸಾರಿಗೆಯನ್ನು ಕೈಕೊಂಡಾಗ ಅವರೊಡನೆ ಸೇರಿದ್ದ ಡ್ರೈವರ್ ದಸ್ತಗೀರ್ ಸಾಹೇಬ ಮತ್ತು ಅವನ ಶಿಷ್ಯ ವೀರಭದ್ರ ಇಂದೂ ಟಿ. ವಿ. ಎಸ್ ನಲ್ಲಿದ್ದಾರೆಂಬುದು ಅರ್ಥವತ್ತಾಗಿದೆ. ವೀರಭದ್ರನ ಮಕ್ಕಳು ಮೊಮ್ಮಕ್ಕಳಿಗೆ ಟಿ.ವಿ.ಎಸ್.ಐ ಶಿಕ್ಷಣ ಕೊಡಿಸಿತು. ಹೆಚ್ಚು ಮೇಲ್ಮಟ್ಟದ ಕರ್ತವ್ಯಗಳನ್ನು ನಿರ್ವಹಿಸುತ್ತಿರುವ ಅವರು ತಮ್ಮ ತಂದೆ ಡ್ರೈವರ್ ಎಂದು ಪ್ರಸಿದ್ಧನಾಗಿರುವುದನ್ನು ಮೆಚ್ಚದೆ ಅವನ ಲೈಸನ್ಸನ್ನೇ ಕಸಿದುಕೊಂಡಿದ್ದಾರೆ!

ಕೆಲಸಕ್ಕೆ ಸೇರ್ಪಡೆ ಮಾಡಿಕೊಳ್ಳುವಾಗಲೇ ಅಸಾಧಾರಣ ಇಂಗಿತಜ್ಞತೆಯಿಂದ ವ್ಯಕ್ತಿಗಳ ಗುಣಗಳನ್ನು ಗುರುತಿಸಿ ಅವರಿಗೆ ಹೊಂದುವ ಕೆಲಸ ಅವರಿಗೊಪ್ಪಿಸಲಾಗುತ್ತದೆ. ಮಾಲಿಕರೇ ಪ್ರತಿ ಶಾಖಾ ಕಾರ್ಯದಲ್ಲಿ ತಜ್ಞರಿರುವುದರಿಂದ ಕೆಲಸಗಾರರಿಗೆ ತರಬೇತಿ ಚೆನ್ನಾಗಿಯೆ ಸಿಗುತ್ತದೆ. "ತಮ್ಮಿಂದಾಗದ್ದನ್ನು ನೌಕರರಿಂದ ನಿರೀಕ್ಷಿಸುವುದಿಲ್ಲ" ಎಂಬುದು ಮಾಲಿಕರ ಧ್ಯೇಯ. ಹೀಗಾಗಿ ಟಿ. ವಿ. ಎಸ್. ನಲ್ಲಿ ಕೂಲಿಕಾರ ಸಮಸ್ಯೆಗಳೇ ಇಲ್ಲ. ನೌಕರರ ಬಡತರ್ಫಿ ತಬ್ದೀಲಿ ಬಲು ಅಪರೂಪ. ಅಲ್ಲಿಯ ಸಂಬಳ ಪ್ರಮಾಣ ಕೆಲ ವೇಳೆ ಇತರ ಸಾರಿಗೆ ಸಂಸ್ಥೆಗಳಿಗಿಂತ ಇಮ್ಮಡಿಯ ವರೆಗೂ ಇರುತ್ತದಾದ್ದರಿಂದ ಅತೃಪ್ತಿಗೆ ಅವಕಾಶವಿಲ್ಲ.

ಟಿ ವಿ. ಎಸ್. ಸಂಸ್ಥೆಯ ಶಾಖೆಗಳೀಗ ಹೈದರಾಬಾದು, ಬೆಂಗಳೂರುಗಳಲ್ಲೂ ಸ್ಥಾಪಿತವಾಗಿವೆ. ಕಾರ್ಮಿಕರನ್ನು ನೇಮಿಸಿಕೊಳ್ಳುವಾಗ ಸಾಧ್ಯವಾದಷ್ಟು ಸ್ಥಳೀಯರಿಗೇ ಅವಕಾಶ ಕೊಡುವ ಟಿ.ವಿ. ಎಸ್. ನೀತಿಗನುಗುಣವಾಗಿ ಬೆಂಗಳೂರಿನ ಸಂಸ್ಥೆಯಲ್ಲಿ ಕಚೇರಿ ವರ್ಕ್ ಶಾಪುಗಳೆರಡರಲ್ಲೂ ಸೇಕಡಾ ೯೫ ರಷ್ಟು ಕನ್ನಡಿಗರನ್ನೇ ತೆಗೆದುಕೊಂಡಿದ್ದಾರೆ. ನಮ್ಮ ರಾಜ್ಯದಲ್ಲಿ ಜನ ಸಿಗದ ಒಂದು ವಿಭಾಗದಲ್ಲಿ ಮಾತ್ರ ಕೇರಳದವರನ್ನು ಕರೆಸಿದ್ದಾರಷ್ಟೆ.

ಇಂಥ ಅಪೂರ್ವ ಸಂಸ್ಥೆಯ ಜನಕರಾದ ಸುಂದರಂ ಅಯ್ಯಂಗಾರರು ಪಾಶ್ಚಿಮಾತ್ಯ ಶಿಸ್ತಿನವರಾಗಿದ್ದರೂ ಭಾರತೀಯ ಅಂತರಂಗದವರಾಗಿದ್ದರು. ೧೯೩೨ ರಲ್ಲಿ ತಮ್ಮ ೫೫ ನೇ ವಯಸ್ಸಿನಲ್ಲಿ ವ್ಯವಹಾರವನ್ನೆಲ್ಲ ಮಕ್ಕಳಿಗೊಪ್ಪಿಸಿ ನಿವೃತ್ತಿ ಹೊಂದಿ ವಿರಕ್ತಜೀವನ ನಡೆಸಿದರವರು. ನಿವೃತ್ತರಾದ ಮೇಲೆ ಒಮ್ಮೆಯೂ ಸಂಸ್ಥೆಯ ವ್ಯವಹಾರಗಳಲ್ಲಿ ಕೈಹಾಕಲಿಲ್ಲ. ದೈವಭಕ್ತರಾದ ಅವರು ದೈವಚಿಂತನೆಯಲ್ಲಿಯೂ ದಾನಧರ್ಮದಲ್ಲಿಯೂ ನಿರತರಾಗಿ ೧೯೫೫ ರಲ್ಲಿ ವೈಕುಂಠವಾಸಿಗಳಾದರು.

*

ಪುಸ್ತಕ ವಿಭಾಗ

# ಮೂವತ್ತು ವರುಷಗಳ ಮೇಲೆ

ಕನ್ನಡಕ್ಕೆ ಅನುವಾದ : ಚಿರಂಜೀವಿ

ಮೂಲ – ತಮಿಳು, ಲೇಖಕರು : ಶ್ರೀ. 'ಚೆಗನಿಮಿರಯನ್'



T. K. RAO

# ಮೂವತ್ತು ವರುಷಗಳ ಮೇಲೆ

ಪ್ರತಿಯೊಂದು ಬಾರಿಯೂ ಕಣ್ಮುಂದೆ ನಿಲ್ಲುವ ಅದ್ಭುತ ವ್ಯಕ್ತಿಗಳನ್ನು ತಂದು, ಮನದಲ್ಲಿ ನಿರಂತರವಾಗಿ ಉಳಿಯುವ ಬಗೆಬಗೆಯ ದೃಶ್ಯಗಳನ್ನು ಇಂದ್ರಜಾಲದಂತೆ ಸೃಷ್ಟಿಸಿ, ವೇಗವಾಗಿ ಓಡುವ ಕತೆಗಳನ್ನು ಹೆಣೆಯುವುದರಲ್ಲಿ ತಮಿಳು ಕಾದಂಬರಿಕಾರ 'ಜೆಗಸಿರ್ಪಿಯನ್' ನಿಷ್ಣಾತರು. ಅವರ ಕಿರುಕಾದಂಬರಿಯಿದು "ಕಲೈಮಗಳ್" ಪತ್ರಿಕೆಯಲ್ಲಿ ಮೊದಲು ಪ್ರಕಟವಾಯಿತು

ಉಗಿಬಂಡಿ ಹೊರಡಲು ಇನ್ನು ಹದಿನೈದು ನಿಮಿಷಗಳು ಮಾತ್ರವೇ ಉಳಿದಿದ್ದವು.

ಎಳಂಬೂರ್ ರೇಲ್ವೆ ನಿಲ್ದಾಣದ ಪ್ಲಾಟ್‌ಫಾರಂನಲ್ಲಿ ಹತ್ತು ಹದಿನೈದು ಮಂದಿ ಕೂಡಿದ್ದ ಭಾರೀ ಗುಂಪೊಂದು ದಡದಡನೆ ಜನಜಂಗುಳಿಯಲ್ಲಿ ನುಗ್ಗಿ, ಅಲ್ಲಿ ಆಗಲೇ ತಮ್ಮ ಶಕ್ತಿ ಮೀರಿ ಜನರನ್ನು ತುಂಬಿಸಿಕೊಂಡಿದ್ದ ಪ್ರತಿಯೊಂದು ಡಬ್ಬಿಯನ್ನೂ ಅವಸರವಸರವಾಗಿ ಹತ್ತಿ ಇಳಿದು ಶೋಧಿಸಿತು. ಮುಂಚೆಯೇ ಬಂದು ತಮ್ಮ ತಮ್ಮ ಜಾಗಗಳನ್ನು ಹಿಡಿದುಕೊಂಡು ಸಂಸಾರಸಮೇತರಾಗಿ ತಳವೂರಿದ್ದ ಬಹು ಮಂದಿ ಪ್ರಯಾಣಿಕರು, ಈ ಭಾರೀ ಜನರ ಗುಂಪೆಲ್ಲಿ ತಮ್ಮ ಡಬ್ಬಿಯೇರಿ ತಮ್ಮಲ್ಲಿ ಆಗಲೇ ಇದ್ದ ಇಕ್ಕಟ್ಟಿನ ಬಿಕ್ಕಟ್ಟನ್ನು ಅಧಿಕಗೊಳಿಸುವುದೋ ಎಂದು ಬೆದರಿ, "ಇಲ್ಲಿ ಜಾಗವಿಲ್ಲ; ಪಕ್ಕದ ಡಬ್ಬಿಯಲ್ಲಿ ವಿಚಾರಿಸಿ" ಎಂದು ಒಕ್ಕೊರಲಿನಿಂದ ಕೂಗುಹಾಕುತ್ತಿದ್ದರು. ಮತ್ತೆ ಕೆಲವರು ಆತುರಾತುರದಿಂದೆದ್ದು ಕಿಟಕಿಗಳ ಬಾಗಿಲುಗಳನ್ನೆಳೆದುಕೊಂಡು ಮರೆಮಾಡಲೆಳಸುತ್ತಿದ್ದರು.

ಈ ಯಾವ ಅಡಚಣೆಗೂ ಬೆದರದೇ ಆ ಗುಂಪು, ಇಂಜಿನ್ನಿಗೆ ಸಮೀಪವೇ ಇದ್ದ ಒಂದು ಕಂಪಾರ್ಟ್‌ಮೆಂಟಿಗೆ ನುಗ್ಗಿ ಆಕ್ರಮಣಕ್ಕೆ ಪ್ರಾರಂಭಿಸಿತು.

"ಇಲ್ಲಿ ಜಾಗ ಇದೆ. ಬೇಗ ಬನ್ನಿ, ಬೇಗ ಬೇಗ ಓಡಿ ಬನ್ನಿ" —ಎಂದು ಕೂಗು ಹಾಕಿದ ಆ ಗುಂಪಿನವನೇ ಆಗಿದ್ದ ಒಬ್ಬ ಕಿರಿಯವ.

"ಎಲ್ಲಯ್ಯಾ ಜಾಗ ಇದೆ? ನಾವೇ ಇಲ್ಲಿ ನಿಲ್ಲೋದಕ್ಕೆ ಸ್ಥಳವಿಲ್ಲದೇ ಸಾಯ್ತಾ ಇದ್ದೀವಿ. ಪಕ್ಕದ ಕಂಪಾರ್ಟ್‌ಮೆಂಟಿಗೆ ಹೋಗಿ ನೋಡ್ರಿ!" —ಕೂಡಲೇ ಡಬ್ಬಿಯೊಳಗಿಂದ ಹತ್ತಾರು ಕಂಠಗಳು ಕೂಗುಹಾಕಿದುವು.

"ಅಪ್ಪಾ, ಅಮ್ಮಾ, ತಾತನ್ನ ಕರ್ಕೊಂಡು ಬೇಗ್ಬನ್ನಿ" ಎಂದು ಅದೇ ಕಿರಿಯವ ಪುನಃ ಪ್ಲಾಟ್‌ಫಾರಂನತ್ತ ಕೂಗುತ್ತಾ ತಲೆ ಹಾಕಿದ.

ಗುಂಪಿನಲ್ಲಿದ್ದ ಅನೇಕರು ಕೂಡಲೇ ಆ ಡಬ್ಬಿಯನ್ನೇರಲು ಪ್ರಯತ್ನಿಸಿದರು. ಒಳಗಿದ್ದವರು, ಅದು ಸಾಧಿಸದಂತೆ ಹೊರಗೆ ತಳ್ಳುತ್ತಾ ಇದ್ದರು.

ಅಷ್ಟರಲ್ಲಿ ಇದನ್ನು ಕಂಡು ಮನಕರಗಿದವರೋ ಅಥವಾ ಬೇಸರಿಸಿದವರೋ ಆಗಿ ಹಿಂದಿನಿಂದ ಹಾರಿಬಂದ ಹಿರಿಯರೊಬ್ಬರು, "ಸಾರ್, ಸಾರ್, ಕೋಪಿಸ್ಕೋಬೇಡಿ. ಇದಕ್ಕೆಲ್ಲಾ ಜಗಳ ಆಡ್ಬೇಡೀ ಸಾರ್. ಒಬ್ಬರಿಗೆ ಮಾತ್ರ ಜಾಗ ಕೊಟ್ಟರೆ ಸಾಕು" ಎಂದು ಅಲ್ಲಿದ್ದವರು ಒಪ್ಪುವ ದನಿಯಲ್ಲಿ ಬೇಡಿಕೊಂಡರು.

"ಅದೆಲ್ಲಾ ಆಗೊಲ್ಲ. ಒಬ್ಬರಿಗೆ ಅಂತ ಹೇಳಿ ಐವತ್ತು ನುಗ್ಗೋ ಮಂದಿ ಇವರು! ಯಾರನ್ನೂ ಒಳಗೆ ಬಿಡ್ಬೇಡಿ" ಡಬ್ಬಿಯೊಳಗಿಂದ ಹಲವು ಅಧಿಕೃತ ಗಂಟಲುಗಳು ಆಜ್ಞಾಪನೆಯ ಕೂಗನ್ನು ಹಾಕಿ ಎಚ್ಚರಿಸಿದವು.

"ಒಬ್ಬರೇ ಒಬ್ಬರು ಕಣ್ರೀ! ಅದರಲ್ಲೂ ಬಹಳ ವಯಸ್ಸಾಗಿರುವ ಹಿರಿಯರು. ಬಹಳ ದೂರಾನೂ ಸಹಾ ಅವರು ಹೋಗೋದಿಲ್ಲ; ಸೆಂಗಲ್ಪಟ್ಟಿನ ಪಕ್ಕದ ಒತ್ತಿವಾಕ್ಕಂನಲ್ಲಿಯೇ ಅವರು ಇಳಿದು ಬಿಡ್ತಾರೆ."

"ಮತ್ತೆ ಇಷ್ಟು ಜನ ಯಾಕೆ ಬಂದಿದ್ದೀರಿ?"

"ನಾವೆಲ್ಲಾ ಅವರನ್ನು ಗಾಡಿ ಹತ್ತಿಸಿ

ಬೀಳ್ಕೊಡಲು ಬಂದಿದ್ದೇವೆ."

"ಏನು ಒಬ್ಬರನ್ನ ಊರಿಗೆ ಕಳಿಸಲು ಇಷ್ಟು ಜನರ ಪಟಾಲಮ್ಮು ಬರಬೇಕೇ?"

ರೈಲ್ವೇ ಡಬ್ಬಿಯೊಳಗಿನಿಂದ, ಭುಗಿಲ್ಲೆಂದು ಉರಿಯೇಳುವಂತೆ, ನಗುವಿನ ಹುಚ್ಚು ಹೊಳೆ ಎದ್ದಿತು.

ವಿದ್ಯುದ್ದೀಪಗಳಿಂದಾವೃತ್ತವಾಗಿ ವಿಶಾಲವಾಗಿ ಸರಿದಿದ್ದ ಆ ಪ್ಲಾಟ್‌ಫಾರ್ಮಿನ ನಡುವೆ, ಒಬ್ಬ ಮಧ್ಯ ವಯಸ್ಸಿನ ಹೆಂಗಸು, ಸುಂದರ ಯುವತಿಯೊಬ್ಬಳ ನೆರವಿನಿಂದ, ಸುಮಾರು ಅರವತ್ತೈದು ವರ್ಷ ವಯಸ್ಸಿನ ಒಬ್ಬರು ಮುದುಕರನ್ನು ಬಹಳ ಜಾಗ್ರತೆಯಿಂದ ಮೆಲ್ಲನೆ ನಡೆಸಿಕೊಂಡು ಬರುತ್ತಿದ್ದುದು ಕಂಡುಬಂದಿತು. ಒಣಗಿದ್ದ ಬಡಶರೀರ; ಮಧ್ಯಮ ಎತ್ತರ; ಸಾದಾ ಬಿಳುಪು ಬಣ್ಣ; ಪೂರಾ ಕತ್ತು ಮುಚ್ಚುತ್ತಿದ್ದ ಬೂದಿಬಣ್ಣದ 'ಕ್ಲೋಸ್ ಕಾಲರ್' ಕೋಟು; ಕಚ್ಚೆ ಹಾಕಿ ಉಟ್ಟಿದ್ದ ಸುಮಾರಾದ ಜರೀ ಪಂಜೆ; ತಲೆಗೆ ಮಫ್ಲರ್; ಕೈಯಲ್ಲಿ ಬೆಳ್ಳಿಯ ತುದಿಯಿದ್ದ ಒಂದು ಊರುಗೋಲನ್ನು ಹಿಡಿದುಕೊಂಡಿದ್ದ ಆ ಮುದುಕರು, ಕಾಲುಗಳನ್ನೆತ್ತಿಟ್ಟು ನಡೆಯಲೇ ಬಹು ಶ್ರಮಪಡುತ್ತಿರುವರೋ ಎಂದು ತೋರುವಂತೆ ತೂರಾಡುತ್ತಾ ನಡುಗುತ್ತಾ ಬರುತ್ತಿದ್ದರು.

"ಉಂ......ಹುಂ ...... ತಾತ ಬರ್‍ತಿದಾರೆ, ದಾರಿ ಬಿಡಿ! ಜರುಗಿ ನಿಂತುಕೊಳ್ಳಿ. ಹುಂ... ಡಬ್ಬಿಯ ಬಾಗಿಲು ತೆಗೀರಿ!"

"ಲೋ, ಗೋಪಿ, ನೀನು ಮೊದಲು ಒಳಗೆ ಹತ್ತು. ಒಳಗಿನಿಂದ ಹುಷಾರಾಗಿ ತಾತನನ್ನು ಭದ್ರವಾಗಿ ಒಳಗೆ ಹತ್ತಿಸಿಕೋ. ನಾವು ಹಿಂದಿನಿಂದ ಅವರನ್ನ ಹತ್ತಿಸುತ್ತೇವೆ"— ಎಂದು ಅಧಿಕಾರವಾಣಿಯಿಂದ ಅಪ್ಪಣೆ ಮಾಡಿದರು, ಅಲ್ಲಿದ್ದ ಹಿರಿಯರು.

ಆ ಗುಂಪಿನವರ ಈ ಗದ್ದಲದ ಜಬರ್ದಸ್ತಿನ ಮಾತುಗಳನ್ನು ಕೇಳುತ್ತಾ ಕೇಳುತ್ತಾ ಆ ಡಬ್ಬಿಯಲ್ಲಿ ಇದ್ದವರೆಲ್ಲಾ ನಗಲಾರಂಭಿಸಿದರು. ಬರೀ ಒಬ್ಬ ಹಣ್ಣು ಹಣ್ಣು ಮುದುಕರನ್ನು ಗಾಡಿ ಹತ್ತಿಸಲು, ಇಷ್ಟು ಗಲಾಟೆ, ಜನಜಂಗುಳಿ, ವೈಭವಗಳೇ? ಆದರೂ ಆ ಮುದುಕರಿಗೆ ಒಳಗೆ ಬಂದು ಹಾಯಾಗಿ ಕುಳಿತುಕೊಳ್ಳಲು ಒಂದು ಒಳ್ಳೆಯ ಜಾಗವನ್ನು ಒಬ್ಬರು ತೆರವು ಮಾಡಿಕೊಟ್ಟರು. ಈ ಜಗತ್ತಿಗೆ ಈಗಲೇ ಪ್ರವೇಶಿಸುತ್ತಿರುವ ಮತ್ತೆ ಈ ಜಗತ್ತನ್ನು ಈಗಲೋ ಆಗಲೋ ಬಿಡಲಿರುವ ವ್ಯಕ್ತಿಗಳಿಬ್ಬರಿಗೂ ಯಾವಾಗಲೂ ಎಲ್ಲರ ಅನುತಾಪವಿರುವುದಲ್ಲವೇ?

ಮುದುಕನ ಗುಂಪಿನ ಪ್ರತಿಯೊಬ್ಬರೂ ಗದ್ದಲದೊಂದಿಗೆ ಡಬ್ಬಿಯನ್ನೇರಿ ತಾತನ ಸುತ್ತಲೂ ನಿಂತು ಅವರನ್ನು ಮುತ್ತಿದರು.

೨

"ಗಾಳೀನೇ ಬರ್‍ತಾ ಇಲ್ಲ. ಬಹಳ ಸೆಕೆ ಆಗ್ತಾ ಇದೆ. ತಾತನ ಕಡೆ ಆ ಫ್ಯಾನನ್ನ ತಿರುಗಿಸಿ" ಅಂತ ಚಡಪಡಿಸುತ್ತಾ ಹೇಳಿದಳು ಒಬ್ಬಾಕೆ.

"ಬೇಡ ಬೇಡ, ಖಾಯಿಲೆಯಿಂದೆದ್ದಿರುವ ದೇಹ. ಆ ಮೇಲೆ ಗಾಳಿ ಜಾಸ್ತಿ ಆಗ್ಬಿಟ್ಟು ಶೀತ ಆಗ್ಬಿಟ್ರೆ ಕಷ್ಟ. ತಾತನ ಮೈಗಾಗೋದಿಲ್ಲ ಈ ಗಾಳಿ" ಎಂದವಳನ್ನು ತಡೆದ ಒಬ್ಬಾತ.

"ಗಾಡಿ ಜೋರಾಗಿ ಹೋಗುತ್ತಿರುವಾಗ ಬಹಳ ಕುಲುಕಾಟವಾಗ್ತೋದು. ಅವರ ಹಾಸಿಗೆಯಿಂದ ದಿಂಬುಗಳನ್ನು ತೆಗೆದು ಅವರ ಅಕ್ಕಪಕ್ಕದಲ್ಲಿ ಮೆತ್ತೆಯಂತೆ ಇಟ್ಟುಬಿಡ್ರಿ!"

"ಛೇ, ಛೇ! ಹಾಗಿಟ್ಬಿಟ್ರೇ ಆಮೇಲೆ ತಾತ ಹಾಗೆ ಹೀಗೆ ಮೈ ಆಡಿಸುವುದಕ್ಕೆ ಆಗೊಲ್ಲಾ."

"ಡಾಕ್ಟರು ಕೊಟ್ಟಿರೋ ಔಷಧವನ್ನು ತಾತನಿಗೆ ತಕ್ಷಣ ಕೈಗೆ ಸಿಗೋಹಂಗೆ ಇಟ್ಟಿಡಿ. ಇಲ್ದಿದ್ರೇ ತಾತ ಆಮೇಲೆ ಔಷಧ ಕುಡಿಯೋದನ್ನು ಮರ್‍ತೇಬಿಡ್ತಾರೆ" ಎಲ್ಲರ ನೆನಪಿಗೆ ಮುಖ್ಯ ವಿಷಯವನ್ನು ತಂದಳು ಒಬ್ಬಳು ಹುಡುಗಿ.

"ಏ, ಸೋಡಾ? ಇಲ್ಲಿ ಬಾ ಇಲ್ಲಿ. ಇಲ್ಲೊಂದು ಬಾಟಲು ಒಡೆದು ಕೊಡು." ಎಂದು ಕಿಟಕಿಯಿಂದ ತಲೆಯನ್ನು ಒಬ್ಬ ಹೊರಚಾಚಿದ.

"ಅಯ್ಯೋ! ಅವರಿಗೆ ಬಿಸಿನೀರು ಮಾತ್ರ ಕೊಡ್ಬೇಕು ಅಂತ ಡಾಕ್ಟರು ಹೇಳಿದ್ದಾರೆ. ಸೋಡಾಗೀಡಾ ಏನೂ ಕೊಡಬಾರದು."

ಎಂದು ಹೇಳಿ, ಕೊಂಡ ಆ ಸೋಡಾವನ್ನು ತಾವೇ ಗಟಗಟನೇ ಕುಡಿದು ತೀರಿಸಿಬಿಟ್ಟರು ಒಬ್ಬ ಸೂಟುಧಾರಿಗಳು.

"ಎಲ್ಲಪ್ಪಾ, ಇಲ್ನೋಡು, ಒಂದು ಅರ್ಧ ಡಜನ್ನು ಕಿತ್ತಳೇ ಹಣ್ಣನ್ನು ತೊಗೋ."

ಅವಸರವಾಗಿ ಮಾತೆಯೊಬ್ಬಳು ಅಪ್ಪಣೆ ಮಾಡಿದಳು.

ಹಣ್ಣುಗಳನ್ನು ಯಾರೋ ಒಬ್ಬರು ಕೊಂಡ ಬಳಿಕ "ಅಯ್ಯೋ! ತಾತನಿಗೆ ಇವೆಲ್ಲಾ ಮೈಗಾಗತ್ತೋ ಇಲ್ವೋ?" ಎಂದು ಹೇಳುತ್ತಾ ಆಕೆಯೇ ಹಣ್ಣುಗಳನ್ನು ಬಾಚಿ ತೆಗೆದುಕೊಂಡು ತನ್ನ ಸುತ್ತಲೂ ಕಚ್ಚಾಡುತ್ತಿದ್ದ ತನ್ನ ಹಲವಾರು ಮಕ್ಕಳಿಗೆ ಹಂಚಿ ತೃಪ್ತಳಾದಳು.

ಇಷ್ಟು ಪ್ರೇಮದ, ಆದರದ, ಬಗೆಬಗೆಯ ಉಪಚಾರಗಳು ತಮ್ಮ ಸುತ್ತಲೂ ನಡೆಯುತ್ತಿರುವುದರ ಅರಿವಿದ್ದೂ ಸಹ, ಅಚಲರಾಗಿ, ನಿರ್ವಿಕಾರರಾಗಿ ಸುಮ್ಮನೇ ಕುಳಿತಿದ್ದ ಆ ಹಿರಿಯರು ಖಾಲಿಯಾಗಿರುವ ಸೋಡಾ ಬಾಟಲಿನಲ್ಲಿ ಅತ್ತಿತ್ತ ನಿಲ್ಲದೇ ಓಡಾಡುವ ಗಾಜಿನ ಗೋಲಿಯಂತಾಡುತ್ತಿದ್ದ ತಮ್ಮ ತಲೆಯನ್ನೊಮ್ಮೆ ಮೇಲೇರಿಸಿ, "ಏನ್ರೋ? ಯಾಕ್ರೋ, ಇನ್ನೂ ರೈಲು ಹೊರಡ್ಲಿಲ್ಲಾ?" ಎಂದು ಬಹು ಕ್ಷೀಣ ದನಿಯಿಂದ ವಿಚಾರಿಸಿದರು.

"ಇಗೋ ಈಗ ಕೇಳ್ಕೊಂಡು ಬರ್ತೀನಿ, ತಾತ" ಎಂದವನೇ ಒಬ್ಬ ಹುಡುಗ ಗಾಡಿಯಿಂದಿಳಿದು ಎಂಜಿನ್ ಇದ್ದ ದಿಕ್ಕಿನತ್ತ ಧಾವಿಸಿದ.

ಆ ಮುದುಕರನ್ನು ಮೊದಲು ಭುಜ ಹಿಡಿದು ಕರೆತಂದ ಹೆಣ್ಣು ಮಗಳೊಬ್ಬಳು ಸ್ವಲ್ಪ ದುಃಖಿತಳಾಗಿರುವಂತೆ ಮುಖಮಾಡಿಕೊಂಡು ತುಸು ಸಪ್ಪಗಿದ್ದಳು. ತಾತನ ಕೋಟಿನ ಗುಂಡಿಗಳನ್ನು ಸರಿಪಡಿಸುತ್ತಿದ್ದ ಸ್ಥೂಲ ಕಾಯದ ಭಾರೀ ಆಸಾಮಿಯೊಬ್ಬರು ಆ ಹೆಂಗುಸಿನ ಬೆನ್ನಮೇಲೊಂದು ತಟ್ಟಿ ಏನೋ ಸನ್ನೆಮಾಡಿ ಆ ಡಬ್ಬಿಯಿಂದ ಕೆಳಗಿಳಿದರು. ಕೂಡಲೇ ಆಕೆ ಕೆಳಗಿಳಿದು ಅವರನ್ನು ಹಿಂಬಾಲಿಸಿದಳು. ಇಬ್ಬರೂ ಪ್ಲಾಟ್‌ಫಾರಂನ್ನು ಬಿಟ್ಟು, ಸ್ವಲ್ಪ ದೂರದಲ್ಲಿ ಮಿಕ್ಕವರ ದೃಷ್ಟಿಯಿಂದ ಮರೆಯಾಗಿ ನಿಂತರು.

"ಕಮಲಾ, ಈ ಮುದುಕ ಹಳ್ಳಿಗೆ ಹೋಗಿ ವಾಪಸ್ಸು ಬರತ್ತಾ?......ಅಥವ..."

ಎಂದು ರಹಸ್ಯ ದನಿಯಲ್ಲಿ ಪಿಸು ಮಾತನಾಡಿದರು ಆ ಘಡೂತಿ ಆಸಾಮಿ.

"ಏನ್ರೀ ಇದು? ಅಪಶಕುನದ ಹಾಗೆ ಹೀಗೆ ಮಾತಾಡ್ತಿದ್ದೀರಾ?" ಸ್ವಲ್ಪ ಕೋಪದಿಂದಲೇ ಕೇಳಿದಳು ಕಮಲ.

"ಛೀ ಛೀ ಛೀ!......... ನಾನು ಹಾಗಲ್ವೇ ಹೇಳಿದ್ದು. ಇವರು ಹಳ್ಳಿಗೆ ಹೋಗಿ ವಾಪಸ್ಸು ಬರ್ತಾರೋ ಅಥವ ನಿಮ್ಮಮ್ಮನ ಮನೇಲೇ ಇದ್ದುಬಿಡ್ತಾರೋ ಅಂತ ಕೇಳ್ದೆ ಅಷ್ಟೇ."

"ಅಂಥಾದ್ದೇನೂ ಇಲ್ಲ. ನಾಳೇನೇ ತಿರುಗಿ ಬಂದ್ಬಿಡೋದಾಗಿ ಹೇಳಿ ಹೊರಟಿದ್ದಾರೆ."

"ಆದ್ರೂ ನನಗೇನೋ ಅವರು ಇಷ್ಟು ವರ್ಷಗಳು ಬಿಟ್ಟು ಈಗ ಅಲ್ಲಿಗೆ ಹೋಗೋದು ಸ್ವಲ್ಪವೂ ಹಿಡಿಸ್ಲಿಲ್ವೇ."

"ನನಗೆ ಮಾತ್ರ ಇಷ್ಟವೇ? ಆದರೂ, ಅದನ್ನು ಅಪ್ಪನ ಹತ್ರ ಬಾಯ್ಬಿಟ್ಟು ಹೇಳೋದು ಹೇಗ್ರೀ? ಆಮೇಲೆ ನಮ್ಮ ಮೇಲೆ ಏನಾದ್ರೂ ತಪ್ಪಾಗಿ ತಿಳ್ಕೊಂಡುಬಿಟ್ರೆ ಕಷ್ಟ."

"ಎಲ್ಲಾ ನಿನ್ನಿಂದ ಬಂದ ತೊಂದರೆ! ಅವತ್ತು ಬಂದ ಆ ಕಾಗ್ದಾನ ಅವರಿಗೆ ತೋರಿಸದೇ ಇದ್ದಿದ್ರೇ ಈ ತೊಂದರೆ ತಕರಾರುಗಳೆಲ್ಲಾ ಇರ್ತಾನೇ ಇದ್ದಿಲ್ಲ!"

"ನನಗೆ ಮಾತ್ರ ಆ ಕಾಗದದಲ್ಲಿದ್ದದ್ದು ಅದೇನು ಗೊತ್ತಿತ್ತು ಅಂದ್ರೇ? ಅವರ ಹೆಸರಿಗೆ ಬಂತೂ ಅಂತ ಆ ಕಾಗ್ದಾನ ತೊಗೊಂಡು ಹೋಗಿ ಅವರ ಕೈಗೇ ಕೊಟ್ಟೆ. ಹೀಗೆಲ್ಲಾ ಆಗತ್ತೇ ಅಂತ ಗೊತ್ತಿದ್ರೇ ನಾನು ಹಾಗೆ ಮಾಡುತ್ತಲೇ ಇರ್ಲಿಲ್ಲ."

"ನಿಜ್ವಾಗ್ಲೂ ನಿಮ್ಮಮ್ಮನಿಗೆ ಖಾಯಿಲೆ ಆಗಿರಬಹುದೇನೇ? ಅಥವ ಬೇರೇ ಯಾವ್ದಾದ್ರೂ ಉಪಾಯ ಹೂಡೋಕೆ ಅಂತ ಅವ್ರು ಈ ಕಾಗದಾನ ಬರದ್ರಾ?"

"ವಿಷಯ ನಿಜ ಇದ್ರೂ ಇರಬಹುದು ಅಂತಲೇ ನನ್ನ ಮನಸ್ಸಿಗನ್ನಿಸುತ್ತಿದೆ. ಯಾಕಂದ್ರೇ ವಯಸ್ಸು ಅಗ್ಲೇ ಅರವತ್ತೆರಡೋ ಅರವತ್ಮೂರೋ ಆಗ್ತಾ ಬಂತು ಅಮ್ಮನಿಗೆ."

"ಅದು ನಿನ್ನ ತಮ್ಮ ರಾಮುದೊರೆ ಬರೆದ ಕಾಗದಾ ತಾನೇ?"

"ಅಮ್ಮಾ ಬರೆಸಿ ಅವನು ಕಾಗದ ಬರೆದಿದ್ದಾನೆ."

"ಅದಕ್ಕೋಸ್ಕರಾನೇ ನಾವು ಬಹಳ ದೂರ ಯೋಚಿಸಬೇಕಾಗಿದೆ."

"ನೀವು ಏನು ಅಂತ ಅಂದ್ಕೊಂಡಿದ್ದೀರಾ ಅದನ್ನ ?"

"'ಗಿಡುಗ ಕಾವಲಿದ್ದ ಗಿಳಿ'ಯಂತಾಗಿಬಿಟ್ಟರೆ ಕಷ್ಟ ಎಂದು ಯೋಚನೆ ಮಾಡ್ತಿದ್ದೀನಿ ಅಷ್ಟೆ."

"ಸುಮ್ಮನ್ನೇ ತಲೇನ ಕೆಡಿಸ್ಕೋ ಬೇಡಿ. ಆ ತರಹೆಯದೊಂದೂ ಈಗ ನಡೆಯೋಲ್ಲಾ."

"ನಿಂಗೆ ಅವರ ಬಗ್ಗೆ ಏನೂ ಗೊತ್ತಿಲ್ಲಾ ಕಣೇ ! ಮನಸ್ಸಿನಲ್ಲೇ ಕಾರ್ಯ ಮಾಡುವ ಮನುಷ್ಯರು ಅವರು ಇಲ್ದಿದ್ರೇ ಈ ಮೂವತ್ತು ವರ್ಷ ಕಾಲದಲ್ಲಿ, ತಮ್ಮ ಹೆಂಡತಿಯ ಮುಖದರ್ಶನ ಮಾಡುವುದಿಲ್ಲ ಎಂದು ಒಂದೇ ಹಟ ಹಿಡಿದು ವೈರಾಗ್ಯದಿಂದಿದ್ದವರು ಈಗ ಪತ್ನಿಯ ಕಾಗದವನ್ನು ಕಂಡಕೂಡಲೇ ರೆಕ್ಕೆ ಬಲಿತ ಹಕ್ಕಿಯಂತೆ ಹೀಗೆ ಹಾರಿ ಹೋಗೋದಕ್ಕೆ ಪ್ರಯತ್ನಪಡ್ತಾ ಇದ್ದರೆ ? "

"ಸಾಯೋದಕ್ಕೆ ಸಿದ್ಧವಾಗಿ ಹಾಸಿಗೆಯ ಮೇಲೆ ಮಲಗಿದ್ದೀನಿ ಅಂತ ಬರೆದಿದ್ದ ಅಮ್ಮನ ಕಾಗದ ಅವರ ಮನಸ್ಸನ್ನು ಬಹಳವಾಗಿ ಕರಗಿಸಿರಬೇಕು."

"ನಾನು ಅದಕ್ಕೋಸ್ಕರಾನೇ ಹೆದರ್ಕೊಳ್ತಿರೋದು. ಅವರ ಈ ಕಡೆಗಾಲದ ಮನಕರಗುವಿಕೆ ನಮ್ಮನ್ನು ಎಲ್ಲಿಗೆ ಕೊಂಡೊಯ್ಯುತ್ತೋ."

"ಹೀಗೆಲ್ಲಾ ಹೆದರ್ಕೊಳ್ಳೋರು ಮೊದಲೇ ಮುಂಜಾಗ್ರತೆ ವಹಿಸಿ ಏನಾದರೊಂದು ಮಾಡ್ಬೇಕಾಗಿತ್ತು."

"ನಿನಗೇನು ಗೊತ್ತಿಲ್ವಾ, ಕಮಲ ? ಮನೆಯನ್ನೂ ಮುದ್ರಣಾಲಯವನ್ನೂ ನಮ್ಮ ಹೆಸರಿಗೆ ಬರೆಸಲು ಒಬ್ಬ ಒಳ್ಳೇ ಲಾಯರ ಬಂದೋಬಸ್ತನ್ನೂ ಮಾಡಿದೆ. ಆಮೇಲೆ, ಅವರೇ ಆ ವಿಷಯವನ್ನು ಎತ್ತದಿರುವಾಗ ನಾವೇಕೆ ಮೇಲೆ ಬಿದ್ದು ಅವರಿಗದನ್ನು ಜ್ಞಾಪಿಸಬೇಕೆಂದು ಸುಮ್ಮನಾಗಿಬಿಟ್ಟೆ."

"ಅದೇನೋ ಸರೀನೇ. ನಾವಾಗೇ ಅದರ ವಿಷಯವನ್ನು ಎತ್ತಿ ಹೇಳುತ್ತಾ ಇದ್ರೆ ಆ ಮೇಲೆ ಅವರಿಗೆ, ಆಸ್ತಿಗಾಗಿಯೇ ಅವರನ್ನು ನಾವು ಮನೆಯಲ್ಲಿಟ್ಟುಕೊಂಡು ಷುಷ್ರೂ ಉಪಚಾರ ಮಾಡ್ತಿದ್ದೇವಂತ ಗೊತ್ತಾಗಿಬಿಟ್ರೆ ಕಷ್ಟ."

"ಬಹಳ ಜಾಣೆ. ನೀನೂ ನನ್ನ ಜೊತೆಗೇ ಅದೇ ಹಾಡನ್ನೇ ಯಾಕೇ ಹಾಡ್ತೀ ? ನಾನೇನೋ ಅವರಿಗೆ ಮನೆಯ ಅಳಿಯ. ಅಂತಹ ವಿಷಯಗಳನ್ನೆಲ್ಲಾ ಬಾಯ್ಬಿಟ್ಟು ಎದುರಿಗೇನೇ ಹಾಗೆ ಕೇಳಿ ಬಿಡಬಾರದು. ನೀನಾದ್ರೆ ಸ್ವಂತ ಮಗಳು. ಕಬ್ಬಿಣ ಕಾದಿದ್ದ ಹೊತ್ತಿನಲ್ಲಿ ಸರಿಯಾಗಿ ಬಡಿಯುವ ಹಾಗೆ ಅವರಿಗೆ ಸಮಜಾಯಿಸಿ ಕೆಲಸವನ್ನು ಸಾಧಿಸಿಕೊಳ್ಳಬೇಕಿತ್ತು."

"ಅದೆಲ್ಲಾ ನಿಮಗಲ್ಲಿ ಗೊತ್ತಾಗತ್ತೇ ? ಹೋದ ತಿಂಗಳು ಅವರು ಹುಷಾರಿಲ್ದೇ ಮಲಗ್ದಾಗ್ಲೇ, ಮೆಲ್ಲಗೇ ಆ ವಿಷಯದ ಪ್ರಸ್ತಾಪ ಮಾಡಿದೆ. ಆಸಾಮಿ ಆಗ಼್ಲೋ, ಈಗ್ಲೋ. ಅಂತ ಎರಡು ಮೂರು ದಿವ್ಸ ಕಳೆದರು. ಮೂರನೆಯ ದಿವಸ ಕಲ್ಲು ಗುಂಡಿನ ಹಾಗೆ ಎದ್ದುಕುಳಿತರು. ಆಮೇಲೆ ಅದರ ಪ್ರಸ್ತಾಪ ಮಾಡುವುದು ಸರಿಯಲ್ಲ, ಆಮೇಲೆ ನೋಡೋಣ ಅಂದುಕೊಂಡು ಸುಮ್ಮನಾಗಿಬಿಟ್ಟೆ."

"ಡಾಕ್ಟರ ಹತ್ತಿರವಾದ್ರೂ ಹೇಳಿ ಅವರ ಈ ಪ್ರಯಾಣವನ್ನು ತಡೀಬಹುದಿತ್ತು."

"ಹಾಗೂ ಮಾಡಿದ್ದಾಯಿತು. ಅದಕ್ಕೆಲ್ಲಾ ಅಪ್ಪಾ ಜಗ್ಗಲೇ ಇಲ್ಲ. ಕೊನೆಗಾಲದಲ್ಲಿ ಅವಳನ್ನು ಒಂದು ಸಾರಿಯಾದ್ರೂ ನೋಡದಿದ್ರೇ ನೆಮ್ಮದಿಯಾಗಿ ನಾನು ಕಣ್ಣು ಮುಚ್ಚೋದು ಆಗೋಲ್ಲಾ ಅಂತ ಕಟ್ಟುನಿಟ್ಟಾಗಿ ಹೇಳಿಬಿಟ್ಟರು."

"ನನಗದು ಮೊದಲೇ ಗೊತ್ತಿತ್ತು. ಆ ಮುದಿಯರು ಹೀಗೆ ಏನಾದರೊಂದು ಅಡ್ನಾಡಿ ಮಾಡ್ಬಿಡ್ತಾರೇಂತಾ."

"ಈಗೇನೂ ಅಂಥಾದ್ದೊಂದೂ ಪ್ರಮಾದ ನಡೆದಿಲ್ವಲ್ಲಾ. ಅದಕ್ಕೆ ಮುಂಚೇನೇ ನಾವೇಕೆ ಹೀಗೆ ಕಂಗೆಡಬೇಕು ?"

"ನೀನು ಬೇಕಾದ್ರೆ ನೋಡ್ತಾನೇ ಇರು. ಅವರು ಅಲ್ಲಿಗೆ ಹೋದ ತಕ್ಷಣ ಇಲ್ಲಿ ಸಂಪಾದಿಸಿದ್ದುದನ್ನೆಲ್ಲಾ ನಿನ್ನ ತಮ್ಮನ ಹೆಸರಿಗೆ ಬರೆದ್ಬಿಟ್ಟು ಬರೀ ಕೈಯ್ಯಲ್ಲಿ ಇಲ್ಬಂದು ಬೀಳ್ತಾರೆ ನೋಡು."

"ನೀವು ಸ್ವಲ್ಪ ಹೊತ್ತು ಬಾಯ್ಮುಚ್ಚಿಕೊಂಡು

ತೆಪ್ಪಗಿರಿ. ಹಾಗೆಲ್ಲಾ ಒಂದೂ ಆಗೋದಿಲ್ಲಾ. ಅವರು ಅಲ್ಲಿಗೆ ಹೋಗಿ ನಮ್ಮನ್ನೆಲ್ಲಾ ಮರೆತ್ಬಿಟ್ಟು ಏನೇನೋ ಮಾಡ್ಬಿಡ್ತಾರ್ರು ಅಂತಲೇ, ಅವರಿಗೆ ಹೀಗೆ ನಿಂತ ಕಡೆಯಲ್ಲಿ ಬೇಕಾದಷ್ಟು ಉಪಚಾರ ಮಾಡುವ್ಪದಕ್ಕೆ ಇಷ್ಟು ಜನರನ್ನು ಕರೆದುಕೊಂಡು ಬಂದಿರೋದು."

ಗಾಡಿ ಹೊರಡುವ ಗಂಟೆ ಹೊಡೆಯಿತು. ಮಾತನಾಡುತ್ತಿದ್ದ ಇಬ್ಬರೂ ಕಂಪಾರ್ಟ್‌ಮೆಂಟಿನತ್ತ ಥಟ್ಟನೆ ಓಡಿದರು.

"ಹೋಗ್ಬಿಟ್ಟು ಬರ್‍ತೀರಾ ಅಪ್ಪಾ? ತಮ್ಮನನ್ನು ನಾನು ಬಹಳ ಕೇಳಿದೆ ಅಂತ ಹೇಳಿ. ಅಮ್ಮನಿಗೆ ಸ್ವಲ್ಪ ವಾಸಿ ಆಗಿದೆ ಅಂತ ಕಂಡಾಕ್ಷಣಾ ಅವಳನ್ನೂ ಇಲ್ಲಿಗೇ ಕರ್‍ಕೊಂಡು ಬಂದ್ಬಿಡಿ. ಇಲ್ಲಿ ದೊಡ್ಡ ಡಾಕ್ಟರಿಗೆ ತೋರಿಸಿ ಸರಿಯಾದ ಔಷಧ ಕೊಡಿಸಬಹುದು. ಹಳೆಯದೆಲ್ಲವನ್ನೂ ಇನ್ನೂ ಕೆದಕುತ್ತಾ ಕುಳಿತುಕೊಳ್ಳುವುದು ಸರಿಯಲ್ಲ. ಈ ಮೂವತ್ತು ವರ್ಷಗಳಿಂದ ಸಾಧಿಸಿಕೊಂಡು ಬರುತ್ತಿರುವ ಈ ವೈರ್‍ಯವೂ ವೈರಾಗ್ಯವೂ ಸಾಕು!"

—ಮಗಳು ಕಣ್ಣನ್ನು ಒರೆಸಿಕೊಂಡಳು.

ಗಾಡಿ ಕದಲಿತು.

"ಹುಷಾರಿ. ಹೋಗ್ಬಿಟ್ಟು ಬನ್ನಿ ಮಾವ. ಮೈಯ್ಯನ್ನು ಸ್ವಲ್ಪ ಜಾಗ್ರತೆಯಾಗಿ ನೋಡ್ಕೊಳ್ಳಿ. ಔಷಧಿಯನ್ನು ಕುಡಿಯೋದನ್ನ ಮರೆತುಬಿಡ್ತೀರಾ ನೀವು! ಗಾಡಿಯನ್ನು ಇಳಿಯುವಾಗ ಹತ್ತುವಾಗ ಸ್ವಲ್ಪ ಜಾಗ್ರತೆಯಾಗಿರಿ. ಹಳ್ಳಿಯ ನೀರು ನಿಮ್ಮ ಮೈಗೆ ಒಗ್ಗೊಲ್ಲ. ಅವರ್‍ನೆಲ್ಲಾ ನೋಡ್ಕೊಂಡು ನಾಳೇನೇ ಹೊರಟುಬಂದ್ಬಿಡಿ. ನೀವು ಸುಖವಾಗಿ ಇಲ್ಲಿ ಬಂದು ತಲುಪುವವರೆಗೂ ನಮಗೆಲ್ಲಾ ನಿದ್ದೇನೇ ಬರೊಲ್ಲಾ" ರೈಲುಗಾಡಿಯ ಜೊತೆಗೆ ಓಡಲು ಪ್ರಯತ್ನಿಸುತ್ತಾ ಇಷ್ಟನ್ನೂ ಒದರಿದರು ಅಳೀಮಯ್ಯನವರು.

೩

ತಾಂಬರಂ ಅನ್ನು ಸೇರುವವರೆವಿಗೂ ಮದುವೆಯ ಮಂಟಪದಷ್ಟು ಸಂಭ್ರಮ ಗದ್ದಲಗಳಿಂದೊಡಗೂಡಿದ್ದ ಆ ರೈಲು ಡಬ್ಬಿ, ತರುವಾಯ ಒಂದು ಜನ ನಿಬಿಡವಿಲ್ಲದ, ಹಾಳು ಪ್ರದೇಶದಂತೆ ಬದಲಾಯಿಸಿತು. ಉಗಿಬಂಡಿಯ ಕಬ್ಬಿಣದ ಗಾಲಿಗಳು ನಡೆಸುತ್ತಿದ್ದ ತಾಳವಾದ್ಯಕಛೇರಿಯನ್ನು ಸಂಪೂರ್ಣ ರಸಿಕತೆಯಿಂದ ಆಸ್ವಾದಿಸುತ್ತಿದ್ದಾರೇನೋ ಎಂಬಂತೆ ಪ್ರತಿ ಪ್ರಯಾಣಿಕರೂ ತಮ್ಮ ತಮ್ಮ ತಲೆಗಳನ್ನು ರೈಲಿನ ಕುಲುಕಾಟಕ್ಕೆ ತಕ್ಕಂತೆ ಆಡಿಸುತ್ತಿದ್ದರು. ತಾಳಲಾರದ ನಿದ್ದೆಯೂ ಅವರನ್ನು ಆ ಸ್ಥಿತಿಗೆ ತರುತ್ತಿದ್ದಿತು.

ಕಾಣಸಿಗಲಾರದಂತಹ ಅಂಥ ಅತ್ಯಪೂರ್ವ ಅಪರೂಪ ದೃಶ್ಯಗಳನ್ನು ಕಂಡೂ ಕಾಣದವರಂತೆ ಸುಮ್ಮನೇ ಕುಳಿತಿದ್ದರು ಆ ಮುದುಕರು. ಆದರೆ ಪ್ರತಿಯೊಂದು ನಿಲ್ದಾಣವು ಬಂದು ಬಂಡಿ ನಿಂತಾಗ ಥಟ್ಟನೆದ್ದು ಸಹಪ್ರಯಾಣಿಕರೊಂದಿಗೆ, 'ಇದು ಯಾವ ಸ್ಟೇಷನ್ನು? ಅದು ಯಾವ ಸ್ಟೇಷನ್ನು?' ಎಂದು ಕೇಳಿ ತಿಳಿದುಕೊಳ್ಳುವುದರಲ್ಲಿ ಮಾತ್ರ ಅವರು ಬಹಳ ಆಕ್ಕರಾಸ್ತೆ ತೋರಿದರು. ಕಿವಿಗೆ ಕಡುಕನ್ನೂ, ಕೈಗಳಿಗೆ ಬಂಗಾರದ ಕಡಗವನ್ನೂ ಹಾಕಿಕೊಂಡ ಆ ಸಹ ಪ್ರಯಾಣಿಕ ಮೊದಲು ಐದಾರು ಸ್ಟೇಷನ್‌ಗಳ ಹೆಸರುಗಳನ್ನು ಬಹು ಹೆಮ್ಮೆಯಿಂದ ಹೇಳಿದವ, ಆ ಮೇಲೆ ಬೇಸರಪಟ್ಟವನಂತೆ ಮುಖವನ್ನು ಹುಳಿಗೆ ಮಾಡಿಕೊಂಡು, "ತಾತಯ್ಯ, ನೀವು ಧೈರ್ಯವಾಗಿ ಮಲಗಿಕೊಂಡು ಹಾಯಾಗಿ ನಿದ್ದೆ ಮಾಡಿ; ಒತ್ತಿವಾಕ್ಕಂ ಬಂದಾಕ್ಷಣ ನಾನೇ ನಿಮ್ಮನ್ನು ಎಚ್ಚರಿಸಿ, ಭದ್ರವಾಗಿ ಕೆಳಗಿಳಿಸ್ತೇನಿ" ಎಂದ ಸಂತೈಸುವ ದನಿಯಲ್ಲಿ

"ಕೋಪಿಸ್ಕೋಬೇಡಪ್ಪಾ! ನಾನು ಈ ಕಡೆ ರೈಲಲ್ಲಿ ಪ್ರಯಾಣ ಮಾಡಿ ಬಹಳ ಕಾಲವಾಗೋಯ್ತು. ಇವೆಲ್ಲಾ ನಾನು ಮೂವತ್ತು ವರ್ಷಗಳಿಗೂ ಮೊದಲು ನೋಡಿದ್ದ ಊರುಗಳು. ಅದಕ್ಕೇನೇ ಒಂದನ್ನೂ ತಕ್ಷಣ ಗುರುತು ಹಿಡಿಯಲು ಸಾಧ್ಯವಾಗಲಿಲ್ಲ"

ಬೇಸರದಿಂದ ತನ್ನ ಮುಖವನ್ನು ಹುಳಿ ಮಾಡಿಕೊಂಡಿದ್ದ ಆ ಕಡುಕಿನ ಮನುಷ್ಯ ಅವರನ್ನು ಕಳಕಳಿಯಿಂದ ನೋಡಿದ. ಮತ್ತೆ ಹಿತವಾದ ದನಿಯಲ್ಲಿ, "ಇಲ್ನೋಡಿ ತಾತ! ಈ ಮುಂದೆ ಬರೋದೇ ನರಸಿಂಹದೇವರ ದೇವಸ್ಥಾನ." —ಅಂದ.

# ನಾನು ಕಾಯುತ್ತಿದ್ದೇನೆ

...ಸಿಹಿ ಸಿಹಿಯಾದ ಗ್ಲ್ಯಾಕ್ಸೋವನ್ನು ಕುಡಿಯುವುದಕ್ಕಾಗಿ. ಗ್ಲ್ಯಾಕ್ಸೋ ಎಂದರೆ ಶಿಶುಗಳಿಗೆ ಬಹಳ ಪ್ರೀತಿ. ಅದನ್ನು ಕುಡಿದು ಅವರು ಚೆನ್ನಾಗಿ ಬೆಳೆಯುತ್ತಾರೆ. ಏಕೆಂದರೆ ತಾಯಿಯ ಹಾಲಿನಂತೆಯೆ ಗ್ಲ್ಯಾಕ್ಸೋದಲ್ಲಿಯೂ ಮಕ್ಕಳು ಶಕ್ತಿಶಾಲಿಗಳಾಗಿ, ಆರೋಗ್ಯವಂತರಾಗಿ ಬೆಳೆಯಲು ಅವಶ್ಯವಾಗಿರುವ ಪೌಷ್ಟಿಕ ಗುಣಗಳೆಲ್ಲ ಸೇರಿವೆ.

ಉಚಿತವಾಗಿ ಸಿಗುವ 'ಗ್ಲ್ಯಾಕ್ಸೋ ಶಿಶು ಪುಸ್ತಕ'ದ ಒಂದು ಪ್ರತಿಯನ್ನು ಪಡೆಯಲು ೫೦ ನಯೆ ಪೈಸೆಗಳ ಅಂಚೆ ಚೀಟಿಯನ್ನು (ಅಂಚೆ ಖರ್ಚಿಗಾಗಿ) ಗ್ಲ್ಯಾಕ್ಸೋ, ವರ್ಲಿ, ಮುಂಬಯಿ-೧೮ ಅವರಿಗೆ ಕಳುಹಿಸಿರಿ.

**Glaxo**

ಗ್ಲ್ಯಾಕ್ಸೋ—ಶಿಶುಗಳ ಪರಿಪೂರ್ಣ ಯೋಗ್ಯ-ಆಹಾರ

ಗ್ಲ್ಯಾಕ್ಸೋ ಲ್ಯಾಬೊರೇಟರೀಸ್ (ಇಂಡಿಯಾ) ಪ್ರೈವೇಟ್ ಲಿಮಿಟೆಡ್,

ಮುಂಬಯಿ • ಕಲ್ಕತ್ತ • ಮದ್ರಾಸ್ • ನವದೆಹಲಿ



"ಓಹೊ!" —ಎನ್ನುತ್ತಾ ತಲೆಯಾಡಿಸಿದ ಆ ಹಿರಿಯರು, "ಒತ್ತಿವಾಕ್ಕಂ ಬರೋದಕ್ಕೆ ಇನ್ನು ಎಷ್ಟು ಸ್ಟೇಷನ್ ಕಳೀಬೇಕು?" —ಎಂದರು.

"ಮಧ್ಯದಲ್ಲಿ ಇನ್ನು ಸೆಂಗಲ್ಪಟ್ಟು ಒಂದೇ ಇರೋದು."

ಕೋಟಿನ ಬಲಜೇಬಿನಿಂದ ಬೆಳ್ಳಿಯ ಸರಪಳಿ ಇದ್ದ ಗುಂಡು ಗಡಿಯಾರವೊಂದನ್ನು ತೆಗೆದು ಕೊಂಡು ವೇಳೆಯನ್ನೊಮ್ಮೆ ನೋಡಿಕೊಂಡ ಹಿರಿಯರು, "ಓ! ಆಗ್ಲೇ ಹನ್ನೊಂದು ಘಂಟೆ ಆಗ್ಬಿಟ್ತು. ಔಷಧಿ ಕುಡಿಯಬೇಕಾಗಿತ್ತು, ನೋ–ಡಿದ್ರಾ, ಮರ್ತೇಬಿಟ್ಟಿದ್ದೆ." ಎಂದವರೇ ಕೈಗೆಟಕು ವಂತಿಡಲಾಗಿದ್ದ ಔಷಧದ ಬಾಟಲನ್ನು ಹೊರ ತೆಗೆದರು. ಮತ್ತೆ ಏನನ್ನೋ ಜ್ಞಾಪಿಸಿಕೊಂಡವ ರಾಗಿ, ಆ ಬಾಟ್ಲಿಯನ್ನು ಹಾಗೇ ಇರಿಸಿಬಿಟ್ಟು, "ಹೂಂ.........ಬೇಡ..." –ಎಂದು ಅಲಕ್ಷ್ಯ ವಾಗಿ ಗೊಣಗುಟ್ಟಿಕೊಳ್ಳುತ್ತಾ, ತಮ್ಮ ದೇಹಾ ರೋಗ್ಯಕ್ಕೆ ಕಡಿಮೆಯೇನೂ ಆಗಿಲ್ಲವೆಂಬುದನ್ನು ಸರ್ವರಿಗೂ ವಿದಿತಪಡಿಸುವವರಂತೆ ಛಟ್ಟನೆದ್ದು, ಭುಜವನ್ನು ನಿಮಿರಿಸಿಕೊಂಡೊಮ್ಮೆ ಕುಳಿತರು. ಆದರೆ, ಪಾಪ, ಮರುಕ್ಷಣವೇ ಎದೆ ಹಿಡಿದು ಕೊಂಡುಬಿಟ್ಟಿತೇನೊ, ಭಾರೀ ಕೆಮ್ಮಲು ಬಂದು ಬಿಟ್ಟಿತು. ಗಟ್ಟಿಯಾದ ನೆಲವನ್ನು ಗಡಪಾರಿ ಯಿಂದ ಕೆತ್ತಿ ಕೆತ್ತಿ ಹಾಕುವಂತೆ, ಐದು ನಿಮಿಷ ಕಾಲ ಕರಳು ಕತ್ತರಿಸುವಂತೆ ಕೆಮ್ಮಿದರು.

"ಅಯ್ಯಯ್ಯೋ! ತಾತ, ಮೆಲ್ಲಗೆ. ತೊಗೊಳ್ಳಿ ಒಂದ್ಲೋಟ ತಣ್ಣೀರಾದ್ರೂ ಕುಡೀರಿ!"

—ಎಂದು ಅವಸರವಸರವಾಗಿ ತನ್ನ ರೈಲು ಚೆಂಬನ್ನು ಹೊರತೆಗೆದು ಆ ಕಡುಕಿನವ ಅಂದ.

"ಬೇಡಾ, ಬೇಡಾ!" ಅನ್ನುತ್ತಾ ಕೈ ಅಡ್ಡ ಮಾಡುತ್ತಾ ಸರಿಯಾಗಿ ಕುಳಿತುಕೊಂಡ ಆ ವೃದ್ಧರು, 'ಈ ಕೆಮ್ಮೆಲ್ಲಾ ನನ್ನನ್ನು ಏನ್ಮಾಡುತ್ತೇ?' ಅನ್ನುವ ಹಾಗೆ ಒಂದು ಬಗೆಯ ಕ್ಷೀಣ ನಗೆ ಯನ್ನು ಮುಖದ ಮೇಲೆ ಬರಿಸಿಕೊಂಡರು.

"ಏನು ಸ್ವಾಮಿ, ಈ ಅಲ್ಲಾಡಿಕೊಂಡು ಹೋಗುವ ಗಾಡಿಯಲ್ಲಿ, ಅದೂ ರಾತ್ರಿ ಹೊತ್ತು ನೀವೊಬ್ಬರೇ ಪ್ರಯಾಣ ಮಾಡ್ಬೋದೇ? ಬೆಳ ಗಿನ ಗಾಡೀಲಾದ್ರೂ ಹೊರಟಿದ್ರೆ ನಿಮಗೆ ಎಷ್ಟೋ ಸೌಕರ್ಯವಾಗಿರ್‍ತಿತ್ತು!" ಪಕ್ಕದಲ್ಲಿದ್ದವರೊಬ್ಬರು ಅನುತಾಪದೊಂದಿಗೆ ಕೇಳಿದರು.

"ಹೌದಾದು; ನನ್ನ ಅಳಿಯಂದಿರು ಕೂಡ ಹಾಗೇ ಹೇಳಿದ್ರು. ಆದ್ರೆ ನಾನೇ ಬೇಡಾ ಅಂದೆ."

"ದೂರ ಪ್ರಯಾಣ ಅಲ್ಲ ಅಂತ ಹಾಗೆ ಹೇಳಿ ಬಿಟ್ಟಿರೇನೋ ನೀವು?"

ಮುದುಕ ಅದಕ್ಕೊಂದೂ ಉತ್ತರ ಹೇಳದೆ ಮೌನವಾಗಿ ಕುಳಿತರು. ಮಲಗಲು ಜಾಗವಿಲ್ಲದೆ ವಿಲಿವಿಲಿ ಒದ್ದಾಡುತ್ತಿದ್ದ ಕಡುಕಿನ ಮನುಷ್ಯ ನಿದ್ದೆಯ ಮಂಪರನ್ನು ಹತ್ತಿಕ್ಕಲು ಪ್ರಯತ್ನಿ ಸುತ್ತಾ ಮತ್ತೆ ಮಾತನ್ನು ಮುಂದುವರಿಸಿದ.

"ಒತ್ತಿವಾಕ್ಕಮ್ಮೇ ನಿಮ್ಮ ಊರಾ? ಅಥವಾ..."

"ಅಲ್ಲ, ಅಲ್ಲ; ಅಲ್ಲಿಂದ ಮೂರು ಮೈಲಿ ಮುಂದ ಕ್ಕಿರುವ ಒಂದು ಗ್ರಾಮ; ತಿರುಮಣಿ ಅಂತ ಅದರ ಹೆಸರು."

"ಓ! ತಿರುಮಣೀನಾ? ಹಾಗಿದ್ರೆ ನೀವು ಸೆಂಗ ಲ್ಪಟ್ಟೀಲೇ ಇಳಿದುಬಿಡಬಹುದಲ್ಲಾ?"

"ಒತ್ತಿವಾಕ್ಕಂನಲ್ಲಿ ಇಳಿದ್ರೇನೇ ನನಗೆ ಹೆಚ್ಚು ಅನುಕೂಲ."

"ಅಲ್ಲಿ ನಿಮ್ಮನ್ನು ಕರೆದುಕೊಂಡು ಹೋಗೋ ದಕ್ಕೆ ಯಾರಾದ್ರೂ ಬಂದಿರ್‍ತಾರೆ ಅಲ್ವಾ?"

"ನನ್ನ ಮಗ ಬಂದಿರ್‍ತಾನೆ"— ಎನ್ನುತ್ತಲೇ ತಮ್ಮ ಕೋಟು ಜೇಬಿನಿಂದ ಒಂದು ಪೋಸ್ಟ್ ಕಾರ್ಡನ್ನು ಹೊರತೆಗೆದು, ಅದನ್ನು ಹಾಗೂ ಹೀಗೂ ತಿರುಗಿಸಿ ನೋಡುತ್ತಾ, "ಆದರೆ, ಅವ ನನ್ನು ಅಲ್ಲಿ ಗುರುತು ಹಿಡಿಯೋದು ಮಾತ್ರ ಸ್ವಲ್ಪ ಕಷ್ಟವಾಗಬಹುದು!" —ಗದ್ಗದರಾಗಿ ಹೇಳಿದರು ತಾತ.

"ಏನ್ರೀ ಇದು ತಮಾಷೆ? ಹೆತ್ತ ಮಗನನ್ನು ಕಂಡುಹಿಡಿಯೋದು ಕಷ್ಟವೇ?"

ಒಂದು ಬಾರಿ ಏನನ್ನೋ ಯೋಚನೆ ಮಾಡಿದ ಆ ವೃದ್ಧರು ಕೈಲಿದ್ದ ಆ ಕಾರ್ಡನ್ನು ಆ ಕಡುಕಿ ನವನತ್ತ ನೀಡಿ, "ಇದನ್ನ ಸ್ವಲ್ಪ ಓದಿ ಹೇಳ್ತೀರಾ? ನಾನು ಕನ್ನಡಕವನ್ನು ತರೋದಕ್ಕೆ ಮರ್‍ತು ಬಿಟ್ಟೆ" ಎಂದು ಬೇಡಿದರು.

ಕಾಗದವನ್ನು ಪಡೆದುಕೊಂಡ ಅವ ಮೊದಲು ಅದರ ಮೇಲಿದ್ದ ವಿಳಾಸವನ್ನೊಮ್ಮೆ ಮನಸ್ಸಿ ನಲ್ಲೇ ಓದಿಕೊಂಡ: 'ಶ್ರೀಮಾನ್ ವಿನಾಯಕ ಮೂರ್ತಿ, ಮಾಲೀಕರು- ಮೀನಾಕ್ಷಿ ಮುದ್ರಣಾ

# 'ಅನಾಸಿನ್'
# ನೋವಿನ ಉಪಶಮನಕ್ಕೆ
## ಬಹಳ ಒಳ್ಳೆಯದು

**ಏಕೆಂದರೆ ಅದು ನಾಲ್ಕು ವಿಧಗಳಲ್ಲಿ ಪರಿಣಾಮವನ್ನುಂಟುಮಾಡುತ್ತದೆ**

| | | | |
|---|---|---|---|
| ನೋವನ್ನು ಉಪಶಮನಗೊಳಿಸುತ್ತದೆ | ಜ್ವರವನ್ನು ಕಡಿಮೆಗೊಳಿಸುತ್ತದೆ | ನರಗಳಿಗೆ ಶಾಮಕವಾಗಿದೆ | ನಿರುತ್ಸಾಹವನ್ನು ಹೋಗಲಾಡಿಸುತ್ತದೆ |

ಹಲವು ಔಷಧಗಳು ಸೇರಿರುವ ಅನಾಸಿನ್‌ನಿಂದ ಅಧಿಕ ಔಷಧೀಯ ಚಿಕಿತ್ಸೆ ಸಿಗುತ್ತದೆ. ಆದುದರಿಂದ ಅದು ಎಲ್ಲಾ ತರದ ನೋವುಗಳಿಗೆ ..ತಲೆನೋವು, ನೆಗಡಿ, ಹಲ್ಲುನೋವು ಮತ್ತು ಸ್ನಾಯುನೋವುಗಳಿಗೆ ಅತ್ಯುತ್ತಮ. ಅನಾಸಿನ್ ಜ್ವರವನ್ನು ಕಡಿಮೆಗೊಳಿಸುತ್ತದೆ ಮತ್ತು ನರಗಳ ದೌರ್ಬಲ್ಯದಿಂದ ಉಂಟಾಗುವ ಗಾಬರಿ ಹಾಗೂ ನಿರುತ್ಸಾಹವನ್ನು ಉಪಶಮನಗೊಳಿಸಲು ಸಹಾಯಕವಾಗುತ್ತದೆ. ನೆನಪಿಡಿರಿ, ನೋವುಗಳನ್ನು [illegible] ಅತ್ಯುತ್ತಮ ಸಾಧನವಾಗಿವೆ [illegible] ಮಾತ್ರೆಗಳು






2 ಮಾತ್ರೆಗಳಿಗೆ ಕೇವಲ
13 ನಯೆ ಪೈಸೆಗಳು

Registered User
GEOFFREY MANNERS & CO. LTD.

O-38-KAN

ಲಯ, ಮದ್ರಾಸು.' ಕಣ್ಣು ಮಂದವಿರುವ ಮುದುಕರಿಗೆ ಕಿವಿಯೂ ಮಂದವಿರಬೇಕು ಎಂದೆಣಿಸಿದ ಆತ, ಕಾಗದದ ಮೊದಲ ಪಂಕ್ತಿಗಳನ್ನು ಎತ್ತರಿಸಿದ ದನಿಯಲ್ಲಿ ಓದಲು ತೊಡಗಿದ.

"ತೀರ್ಥರೂಪ ತಂದೆಯವರಿಗೆ, ರಾಮದೊರೆ ಸಾಷ್ಟಾಂಗ ನಮಸ್ಕಾರದೊಂದಿಗೆ ತಿಳಿಸುವ ಸಂಗತಿ ಏನೆಂದರೆ......"

ಕಿಟಿಕಿಯ ಹಲಗೆಗೆ ಒರಗಿ ಕಣ್ಮುಚ್ಚಿ ಕುಳಿತಿದ್ದ ತಾತನವರು ಮೆಲ್ಲನೆಯ ದನಿಯಲ್ಲಿ, "ಪಾಪ, ಈತನಿಗೆ ಕಿವಿ ಕಿವುಡಿರಬೇಕು. ಅದಕ್ಕೇ ಇಷ್ಟು ಜೋರಾಗಿ ಓದುತ್ತಾ ಇದ್ದಾನೇಂತ ಕಾಣತ್ತೆ!" ಅಂದುಕೊಂಡರು.

ಇದನ್ನು ಕೇಳಿದೊಡನೆಯೇ ಕಡುಕಿನವನ ಮುಖ ನಾಚಿಕೆಯಿಂದ ಬೆಳ್ಳಗಾಯಿತು. ತಕ್ಷಣಾ ತನ್ನ ಗಂಟಲನ್ನು ಕಡಿಮೆ ಮಾಡಿ ಓದನ್ನು ಮುಂದುವರಿಸಿದ:

"ಇಲ್ಲಿಯ ವರೆವಿಗೆ ಇಲ್ಲಿ ಎಲ್ಲರೂ ಕ್ಷೇಮ. ಅಲ್ಲಿ ಎಲ್ಲರ ಆರೋಗ್ಯವನ್ನು ಅರಿಯಲು ಬಹಳ ಆತುರವಾಗಿದೆ. ಕಳೆದ ಒಂದು ತಿಂಗಳಿಂದ ಅಮ್ಮನ ಆರೋಗ್ಯ ಸರಿಯಾಗಿಲ್ಲದೇ ಹಾಸಿಗೆ ಹಿಡಿದು ಮಲಗಿಬಿಟ್ಟಿದ್ದಾಳೆ. ಊಟ ತಿಂಡಿಗಳು ಅವಳಿಗೆ ಸೇರದಾಗಿವೆ. ಹೋದ ವಾರದಿಂದಲಂತೂ ಅವಳ ಸ್ಥಿತಿ ತುಂಬಾ ಕ್ಷೀಣವಾಗಿದೆ..."

ಕಡುಕಿನವ ಓದುವುದನ್ನ ನಿಲ್ಲಿಸಿ ಕಣ್ಣುಗಳನ್ನೊಮ್ಮೆ ಮೇಲೆತ್ತಿ ಮುದುಕರತ್ತ ಒಮ್ಮೆ ಕಳ್ಳನೋಟ ಬೀರಿದ. ತಾತ ಕಾಗದದಲ್ಲಿನ ವಿಷಯವನ್ನು ಬಹಳ ಗಮನವಿಟ್ಟು ಕೇಳುತ್ತಿರುವರಂತೆ ಕಣ್ಣು ಮುಚ್ಚಿಕೊಂಡು ಒರಗಿ ಕುಳಿತಿದ್ದರು. ಆ ಮೇಲೆ ಓದುವುದನ್ನು ಮುಂದುವರಿಸಿದ.

"ನಿನ್ನೆ ರಾತ್ರಿ ಧಿಡೀರೆಂದು ಅಮ್ಮ ಬುದ್ಧಿ ಸ್ವಾಧೀನ ತಪ್ಪಿದವಳಂತೆ ಏನೇನೋ ಮಾತನಾಡಲಾರಂಭಿಸಿಬಿಟ್ಟಳು. ನಾವೆಲ್ಲಾ ಏನು ಮಾಡೋದಕ್ಕೂ ತಿಳಿಯದವರಾಗಿ ಬಹಳ ಹೆದರಿಬಿಟ್ಟೆವು. ರಾತ್ರೋರಾತ್ರಿನೇ ಓಡಿಹೋಗಿ ಡಾಕ್ಟರರನ್ನು ಕರೆದುಕೊಂಡುಬಂದು ತೋರಿಸಿದೆ. ಮಾರನೇ ದಿವಸ ಬೆಳಿಗ್ಗೆ ಅಮ್ಮನ ಬುದ್ಧಿ ಸ್ವಸ್ಥಿತಿಗೆ ಬಂದಿತು. ಕೂಡಲೇ 'ಅವರನ್ನು ನೋಡಬೇಕು. ಅವರನ್ನು ನೋಡಬೇಕು' ಅಂತ ಬೊಬ್ಬೆಯಿಡಲು ಪ್ರಾರಂಭಿಸಿಬಿಟ್ಟಳು. ಅಂದರೆ, ನಿಮ್ಮನ್ನು ಅಮ್ಮ ನೋಡಬೇಕು, ಕಣ್ಣು ಮುಚ್ಚುವುದರೊಳಗಾಗಿ ಒಮ್ಮೆ ಗಂಡನನ್ನು ನೋಡಿಬಿಡಬೇಕು ಎಂಬುದೇ ಅವಳ ಕಡೇ ಆಸೆ; ಕಡೆಯ ಚಿಂತನೆ; ಆತುರ. ಮೂವತ್ತು ವರ್ಷಗಳಿಂದ ನಿಮ್ಮ ವಿಷಯವಾಗಿ ಒಂದು ಸಾರಿಯಾದರೂ ಹೇಳದಿದ್ದವಳು ಇದ್ದಕ್ಕಿದ್ದ ಹಾಗೆಯೇ ಹೀಗೆ ಈಗ ಹೇಳುತ್ತಿರುವುದು ಒಂದು ದೊಡ್ಡ ಆಶ್ಚರ್ಯ! ನಾನು ಎಷ್ಟು ಏನು ಹೇಳಿದರೂ ಅವಳಿಗೆ ಸಮಾಧಾನವಿಲ್ಲ. ಅವಳ ಪರಿತಾಪದ ದುಃಖಪೂರಿತ ಮಾತುಗಳನ್ನು ಕೇಳಲಾಗದೇ ಈ ಮಾತನ್ನು ಬರೆಯುತ್ತಿದ್ದೇನೆ. ನನ್ನನ್ನೂ ನನ್ನ ತಾಯನ್ನೂ ಸಂಪೂರ್ಣವಾಗಿ ಮರೆತುಬಿಟ್ಟು, ಸಮಾಧಾನದಿಂದಲೂ ಆನಂದದಿಂದಲೂ ಸುಖವಾಗಿರುವ ನಿಮಗೆ ಈ ಶ್ರಮವನ್ನು ಕೊಡಲು ನನಗೆ ಸ್ವಲ್ಪವೂ ಇಷ್ಟವಿಲ್ಲ. ಇನ್ನೂ ಬಿಡಿಸಿ ಹೇಳುವುದಾದರೆ, ನಿಮ್ಮ ಮುಖದರ್ಶನವನ್ನು ಅಮ್ಮ ಮಾಡುವುದೂ ಅವಳನ್ನು ನೀವು ನೋಡುವುದೂ ನನಗೆ ಸರ್ವಥಾ ಇಷ್ಟವಿಲ್ಲ. ಆದರೂ ನನ್ನನ್ನು ಹೆತ್ತು ಹೊತ್ತು ಕಷ್ಟದಿಂದ ಬೆಳೆಸಿ ದೊಡ್ಡವನನ್ನಾಗಿ ಮಾಡಿದ ನನ್ನ ಮಾತೆಯ ಕೊನೆಗಾಲದ ಮಾತನ್ನು ನಡೆಸಿಕೊಡಲೇಬೇಕೆಂಬ ಕರ್ತವ್ಯದೃಷ್ಟಿಯಿಂದಲೇ ಈ ಕಾಗದವನ್ನು ಬರೆದಿದ್ದೇನೆ. ನೀವು ಆರೋಗ್ಯದಿಂದಿದ್ದು, ನಿಮ್ಮ ಪತ್ನಿಯನ್ನು ಕೊನೆಯ ಸಲ ನೋಡಬೇಕೆಂಬ ಆಸೆ ಇಚ್ಛೆ ಇದ್ದಲ್ಲಿ ಕೂಡಲೇ ಹೊರಟು ಬನ್ನಿ. ಒಬ್ಬ ಉತ್ತಮಿಯ ಮುಖವನ್ನು ನೋಡಿ, ನೀವು ಹೋಗುವ ದಾರಿಗೆ ಸ್ವಲ್ಪ ಪುಣ್ಯವನ್ನು ಸೇರಿಸಿಕೊಳ್ಳುವುದಕ್ಕೆ ಬಯಸುವಿರೆಂದು ತಿಳಿದಿದ್ದೇನೆ.

—ಇಂತು ನಿಮ್ಮ ಚಿರಂಜೀವಿ,
ರಾಮದೊರೆ."

ಕಾಗದವನ್ನು ಓದಿ ಮುಗಿಸಿದ ಕಡುಕಿನವನ ಹೃದಯ ಸಂಕಟದಿಂದ ತಲ್ಲಣಿಸಿತು. ಅನುತಾಪದಿಂದೊಮ್ಮೆ ವೃದ್ಧರತ್ತ ಕರುಣಾಪೂರಿತ ದೃಷ್ಟಿಯಿಂದ ನೋಡಿದ. ಅರೆಗಣ್ಣು ಮುಚ್ಚಿದ್ದ ಭಂಗಿಯಲ್ಲಿ ಒರಗಿ ಕುಳಿತಿದ್ದರು ತಾತ.

" ಕಾಗದವನ್ನು ಓದಹೇಳಿ ಮನುಷ್ಯ

ಮಲಗಿಬಿಟ್ಟರಲ್ಲ" -ಎಂದು ತನ್ನಲ್ಲೇ ಅವ ಹೇಳಿಕೊಂಡ. ಮತ್ತೆ ಕೈಲಿದ್ದ ಪೋಸ್ಟುಕಾರ್ಡನ್ನು ಎರಡಾಗಿ ಮಡಚಿ ತಾತನವರ ಚೀಲದಲ್ಲಿ ಭದ್ರವಾಗಿರಿಸಿದ. ಆಗಲೂ ತಾತ ಎಚ್ಚರಗೊಂಡುದಾಗಿ ಕಂಡುಬರಲಿಲ್ಲ. ಅವರ ಅರೆ ಮುಚ್ಚಿದ್ದ ಕಣ್ಣುಗಳ ಕೊನೆಯಲ್ಲಿ ಎರಡು ಬಿಸಿ ಕಣ್ಣೀರ ಹನಿಗಳು ತೊರಚಿಮ್ಮಲೆಳಸುತ್ತಿದ್ದುದು ಅವನಿಗೆ ಅರಿವಾಯಿತು.

ಆ ಕಣ್ಣೀರಿನ ರಂಗಮಂಟಪ ಮೂವತ್ತು ವರ್ಷಗಳಿಗೂ ಮೊದಲು ನಡೆದ ಒಂದು ಅತ್ಯಂತ ಸ್ವಾರಸ್ಯವಾದ ನಾಟಕವನ್ನೇ ಪ್ರತಿಬಿಂಬಿಸಿ, ಮುದುಕರಿಗೆ ತೋರಿಸುತ್ತಿತ್ತು.

೪

'ಶ್ರೀ ಬಾಲಾಮಣಿ ಗಾನವಿನೋದ ನಾಟಕ ಸಭಾ,' ಎನ್ನುವ ನಾಟಕ ಕಂಪನಿಯೊಂದು ಮದರಾಸಿನಲ್ಲಿ ಮುಕಾಂ ಹಾಕಿದ್ದ ಸಮಯ ಅದು ಆ ಸಂಸ್ಥೆಯ ಪ್ರಥಮ ನಾಯಕಿ ನಟೀಮಣಿಯಾಗಿ ಬೆಳಗುತ್ತಿದ್ದ ಬಾಲಾಮಣಿ ಎಂಬುವವಳೇ ಅದರ ಒಡತಿಯೂ ಆಗಿದ್ದಳು. ಅವಳ ಸಹೋದರನಾಗಿದ್ದ ದಂಡಪಾಣಿ ಎನ್ನುವವರು ಆ ನಾಟಕ ಸಂಸ್ಥೆಯ ವ್ಯವಸ್ಥಾಪಕರಾಗಿದ್ದರು.

ಬಾಲಾಮಣಿ ಸರಿಸಮಾನರಿಲ್ಲದ ನಟಿ ಎಂದು ಹೆಸರು ಪಡೆದಿದ್ದಳು. ಅವಳ ಹೆಸರು ತಮಿಳು ನಾಡಿನಲ್ಲಿ ಮಾತ್ರವಲ್ಲದೇ ಕಡಲನ್ನೂ ದಾಟಿ ಬಹುದೂರ ಹಬ್ಬಿತ್ತು. ಸಿಲೋನ್, ಮಲಯ, ಬರ್ಮಾ ಮುಂತಾದ ನಾಡುಗಳಿಗೆಲ್ಲಾ ಹೋಗಿ ತನ್ನ ನಟನಾಕೌಶಲ್ಯವನ್ನು ಪ್ರದರ್ಶಿಸಿ ಕೀರ್ತಿಯೊಂದಿಗೆ ಮದರಾಸಿಗೆ ಬಂದಿದ್ದಳು. ಅಂತೆಯೇ ಅವಳ ನಾಟಕಗಳಿಗೆ ಅಮೋಘ ಆದರ ಸ್ವಾಗತಗಳು ದೊರೆಕಿ, ಭರದಿಂದ ನಡೆದುಕೊಂಡಿದ್ದುವು. ನಗರದಲ್ಲೆಲ್ಲಾ ಬಾಲಾಮಣಿಯ ನಟನೆಯ ಬಗ್ಗೆಯೂ ಅವಳ ಸಂಗೀತದ ಇಂಪಿನ ಬಗ್ಗೆಯೂ ಅಲಂಕಾರ ಉಡುಗೆತೊಡುಗೆಗಳ ಮತ್ತು ಅವಳ ಅಪ್ರತಿಮ ಸೌಂದರ್ಯದ ಬಗ್ಗೆಯೂ ಮಾತೇ ಮಾತು. ಆದ್ದರಿಂದಲೇ, ಏಳು ದಿವಸಗಳಿಗಾಗಿಯೇ ಮಾತ್ರ ಮದರಾಸಿನಲ್ಲಿ ಹಾಕಿದ ಕ್ಯಾಂಪು, ಏಳು ವಾರಗಳನ್ನು ಜಯಭೇರಿಹೊಡೆಯುತ್ತಾ ದಾಟಿ, ಮತ್ತೆ ಮುಂದಿನ ದಿನಗಳನ್ನು ಜಯಪ್ರದವಾಗಿ ಕಳೆಯುತ್ತಿದ್ದಿತು.

ಮದರಾಸಿನಲ್ಲಿದ್ದ ದೊಡ್ಡ ಅಚ್ಚುಕೂಟಗಳಲ್ಲಿ ಮೀನಾಕ್ಷಿ ಮುದ್ರಣಾಲಯವೂ ಒಂದು ತುಂಡು ಕೆಲಸಗಳು, ಪೋಸ್ಟರುಗಳು, ಮೊದಲಾದವನ್ನು ಅಚ್ಚುಮಾಡುವುದರಲ್ಲಿ ತನ್ನದೇ ಆದ ವೈಶಿಷ್ಟ್ಯವನ್ನು ಹೊಂದಿತ್ತು ಅದು. ಶ್ರೀಮಾನ್ ವಿನಾಯಕ ಮೂರ್ತಿಯವರು ಆ ಅಚ್ಚುಕೂಟದ ಮಾಲೀಕರು. ತಮ್ಮ ಸಲ್ಮೆಯ ಪತ್ನಿ ಮೀನಾಕ್ಷಿಯ ಹೆಸರಿನಲ್ಲಿ ಅದನ್ನು ತೆಗೆದು ಸಮರ್ಪಕವಾಗಿಯೂ ಯಶಸ್ವಿಯಾಗಿಯೂ ನಡೆಸಿಕೊಂಡು ಬಂದಿದ್ದರು ಅವರು.

ವಿನಾಯಕ ಮೂರ್ತಿಗಳು ಒಬ್ಬ ಒಳ್ಳೆಯ ಕಲಾರಸಿಕರು ಮತ್ತೆ ಅವರು ತಮ್ಮ ಸ್ವಂತ ಉದ್ಯೋಗದಲ್ಲಿ ಉತ್ತಮ ಕಲೆಗಾರರೆಂದು ಹೆಸರು ಪಡೆದಿದ್ದರು. ಶ್ರೀ ಬಾಲಾಮಣಿ ಗಾನ ವಿನೋದ ನಾಟಕ ಸಭೆಯವರು ತಮಗೆ ಬೇಕಾಗುವ ನೋಟೀಸುಗಳನ್ನೂ ಪೋಸ್ಟರುಗಳನ್ನೂ ಮುದ್ರಿಸಲು ಮೀನಾಕ್ಷಿ ಅಚ್ಚುಕೂಟವನ್ನೇ ಆರಿಸಿದ್ದರು. ವಿನಾಯಕಮೂರ್ತಿಗಳು ತಮ್ಮ ಸಂಪೂರ್ಣ ಜಾಣತನವನ್ನು ಖರ್ಚು ಮಾಡಿ, ಅಂದವಾಗಿ ಅವುಗಳನ್ನು ಮುದ್ರಿಸಿ, ಬಾಲಾಮಣಿಯ ನಾಟಕಗಳು ಅಮೋಘವಾಗಿ ಯಶಸ್ವಿಯಾಗಿ ಪ್ರದರ್ಶಿತವಾಗಲು ಕಾರಣವಾದರು.

ನಗರದ ಮೂಲೆಮೂಲೆಗಳಲ್ಲಿಯೂ ದಿಕ್ಕುದಿಕ್ಕುಗಳಲ್ಲಿಯೂ ಪ್ರದರ್ಶಿತವಾಗಿದ್ದ ನಾಟಕದ ಈ ಬಣ್ಣಬಣ್ಣದ ಪೋಸ್ಟರುಗಳೇ ಜನರ ಕಣ್ಣೋಟಕ್ಕೆ ಹಬ್ಬವಾಗಿದ್ದವು ಬೀದಿಬೀದಿಯಲ್ಲಿ ನಡೆಯುವವರ ಕೈಯಲ್ಲೆಲ್ಲಾ ಮೀನಾಕ್ಷಿ ಅಚ್ಚುಕೂಟದ ನೋಟೀಸುಗಳೇ ತುಂಬಿದ್ದುವು ಅವುಗಳಲ್ಲಿ ಅಚ್ಚಾಗಿದ್ದ ಬಾಲಾಮಣಿಯ ಮನಮೋಹಕ ಫೋಟೋವನ್ನು ಕಂಡ ಮೇಲೆ ಯಾರಾದರೂ ಆಗಲೀ ಅವಳ ನಾಟಕವನ್ನು ನೋಡಲೇಬೇಕು ಎಂದು ನಿರ್ಧರಿಸುತ್ತಿದ್ದರು.

ಪ್ರಚಾರದ ಮುದ್ರಣ ಕಾರ್ಯಗಳನ್ನು ಸಮರ್ಪಕವಾಗಿರಿಸಿಕೊಳ್ಳಲು ಬಾಲಾಮಣಿ ಆಗಾಗ್ಗೆ ತನ್ನ ಸೋದರ ದಂಡಪಾಣಿಯೊಂದಿಗೆ ಮೀನಾಕ್ಷಿ ಅಚ್ಚುಕೂಟಕ್ಕೆ ಬರುತ್ತಿದ್ದಳು. ಆಗೆಲ್ಲಾ ಅವಳು

ವಿನಾಯಕ ಮೂರ್ತಿಯವರ ಅಚ್ಚುಕಟ್ಟಿನ ಮುದ್ರಣವನ್ನೂ ಮತ್ತೆ ಅವರ ಅತ್ಯುತ್ಸಾಹದ ಹೊಂದಾಣಿಕೆಯನ್ನು ಬಗೆಬಗೆಯಾಗಿ ಹೊಗಳುತ್ತಿದ್ದಳು.

"ಇದರಲ್ಲಿ ಹೊಗಳೋದು ಏನಿದೆ? ನೀವು ದುಡ್ಡು ಕೊಡ್ತೀರಾ, ನಾನು ಪ್ರಿಂಟು ಮಾಡಿ ಕೊಡ್ತೀನಿ; ಅಷ್ಟೇ!"

—ಎಂದು ಮೊಟುಕಾಗಿ ಉತ್ತರಿಸುತ್ತಿದ್ದರು ವಿನಾಯಕಮೂರ್ತಿ.

"ಹಾಗೆಲ್ಲಾ ಹೇಳ್ಬೇಡ್ರೀ ಅಣ್ಣ. ಈ ಊರಿನಲ್ಲಿ ನಾನು ಹೆಸರು, ಹಣ ಪಡೆಯುತ್ತಿರುವುದು ನಿಮ್ಮ ಈ ಚಂದದ ಪೋಸ್ಟರುಗಳಿಂದಲೇ. ಸುಂದರವಾದ ಜಾಹೀರಾತು ಸಾಧನಗಳಿಂದಲೇ ಮಣ್ಣನ್ನೂ ಸಹಾ ಸಕ್ಕರೆ ಅಂತ ಮಾರಿ ಬಿಡಬಹುದು ಈಗಿನ ಕಾಲದಲ್ಲಿ."

—ಅನ್ನುತ್ತಿದ್ದಳು ಬಾಲಾಮಣಿ.

"ಹಾಗೆಲ್ಲಾ ಒಂದೂ ಇಲ್ಲ, ತಂಗಿ. ನಿನ್ನ ನಟನೆಯ ಕೌಶಲ್ಯವನ್ನು ನೀನೇ ಹೀಗೆಲ್ಲಾ ಇಲ್ಲದ್ದು ಸಲ್ಲದ್ದು ಮಾತನಾಡಿ ಕಡಿಮೆ ಮಾಡ್ಕೋಬೇಡ" ಎಂದು ಹಿತವಾದ ಮಾತುಗಳನ್ನಾಡುತ್ತಿದ್ದರು ವಿನಾಯಕಮೂರ್ತಿ.

ಹೀಗೆಲ್ಲಾ ಆತ್ಮೀಯವಾಗಿ ಮಾತನಾಡುವುದು ವಾಡಿಕೆ. ದಿನ ಕಳೆಯುತ್ತಾ ಈ ಆತ್ಮೀಯತೆಗೆ ಒಂದು ಬಗೆಯ ಸಹಜ ಭಾವನೆ ಬಂದಿತ್ತು. ಮತ್ತೆ ಅದು ಹಲವರ ಕಣ್ಣಿಗೆ 'ವ್ಯತ್ಯಾಸ'ವಾಗಿ ಕಾಣುವಷ್ಟು ಮುಂದುವರಿಯಿತು. ಆದರೆ ಅವರಿಬ್ಬರಲ್ಲಿ ನಿಜವಾಗಿಯೂ ಆ ಬಗೆಯ 'ವ್ಯತ್ಯಾಸ'ವಾಗುವ ರೀತಿಯೊಂದೂ ಉಂಟಾಗಿರಲಿಲ್ಲ.

ವಿನಾಯಕಮೂರ್ತಿ ವಿವಾಹಿತರು; ಇಬ್ಬರು ಮಕ್ಕಳ ತಂದೆಯೆನಿಸಿಕೊಂಡಿದ್ದರು. ಪತ್ನೀಪುತ್ರರ ಮೇಲೆ ಅಗಾಧ ಪ್ರೀತಿವಾತ್ಸಲ್ಯಗಳನ್ನಿಟ್ಟಿದ್ದವರು. ಬಾಲಾಮಣಿ ಬಹುಕಾಲಕ್ಕೆ ಮೊದಲೇ ಒಬ್ಬ ವಜ್ರಪಡಿ ವ್ಯಾಪಾರಿಯೊಂದಿಗೆ ಬಾಳುವೆ ಮಾಡದೆ ಹೊರಬಂದ ಹೆಂಗಸು.

"ಬಾಲಾ, ನೀನು ಒಬ್ಬ ನಾಟಕದವಳಾಗದಿದ್ದಿದ್ದಲ್ಲಿ, ನಾನು ಇಷ್ಟು ಹೊತ್ತಿಗೆ ನಿನ್ನನ್ನು ಮದುವೆ ಆಗಿಬಿಡುತ್ತಿದ್ದೆ" ಎಂದು ವಿನೋದದ ಮಾತುಗಳನ್ನಾಡುತಿದ್ದರು ವಿನಾಯಕಮೂರ್ತಿ.

ಘೊಳ್ಳೆಂದು ನಗುತ್ತಲೇ ಅದಕ್ಕವಳು, "ನೀವು ಮದುವೆಯಾಗದವರಾಗಿಯೇ ಇದ್ದಿದ್ದರೆ, ನಾನಂತೂ ಯಾವಾಗಲೂ ನಿಮ್ಮ ಪಾದದಡಿಯೇ ಬಿದ್ದು ಸಾಯುತ್ತಿದ್ದೆ" —ಎಂದು ಹೇಳುತ್ತಾ ಮನಮೋಹಕವಾದ ನಗೆಯನ್ನೊಮ್ಮೆ ಅವಳು ಬೀರುತ್ತಿದ್ದಳು.

ಇವೆಲ್ಲಾ ಸಾಲದೇನೋ ಎಂಬಂತೆ ವಿನಾಯಕ ಮೂರ್ತಿ ಬಾಲಾಮಣಿಯ ಸುಂದರವಾದ ಒಂದು ಭಾವಚಿತ್ರವನ್ನು ಅಂದವಾಗಿ ಕಟ್ಟು ಹಾಕಿಸಿ ತಮ್ಮ ಆಫೀಸು ರೂಮಿನಲ್ಲಿ ತಗುಲಿಸಿಕೊಂಡರು. ಅದು ಅವರ ಅಚ್ಚುಕೂಟದಲ್ಲಿ ಅಚ್ಚಾದುದು. ಪ್ರತಿಯೊಬ್ಬ ಮುದ್ರಣಕಾರರೂ ಈ ರೀತಿ ತಾವು ಉತ್ತಮವಾಗಿ ಮುದ್ರಿಸಿದ ಚಿತ್ರಗಳ ಒಂದೊಂದು ಪ್ರತಿಗಳನ್ನು 'ಫ್ರೇಂ' ಹಾಕಿಯೋ ಅಥವ 'ಫೈಲ್' ಮಾಡಿಯೋ ಭದ್ರಪಡಿಸುವುದು ವಾಡಿಕೆ. ಇದಕ್ಕೆ ವಿನಾಯಕ

ಮೂರ್ತಿಯವರು ಏನೂ ಹೊರತಾಗಿರಲಿಲ್ಲ. ಆದರೆ, ಬಾಲಾಮಣಿಯ ಈ ಚಿತ್ರವು ಆ ವಾಡಿಕೆಯ ಅರ್ಥವನ್ನು ಮೀರಿ, ಬೇರೆ ಯಾವ್ಯಾವುದೋ ಬಗೆಬಗೆಯ ಅಪಾರ್ಥಗಳಿಗೆ ಎಡೆಕೊಟ್ಟಿತು, ಇತರರಿಗೆ. ಅದರಲ್ಲಿ ಮತ್ತೊಂದು ಚೋದ್ಯವೆಂದರೆ ತಮ್ಮ ಆಫೀಸಿಗೆ ಬರುವ ಅನೇಕ ಗಿರಾಕಿಗಳಿಗೂ ಮತ್ತೆ ಸ್ನೇಹಿತರಿಗೂ ವಿನಾಯಕ ಮೂರ್ತಿ. ಆ ಚಿತ್ರದ ಬಗ್ಗೆ, ಆ ಚಿತ್ರದೊಡತಿಯ ಅಂದಚಂದಗಳ ಬಗ್ಗೆ ಹೊಗಳಿ ಹಾಡಲಾರಂಭಿಸಿಬಿಡುತ್ತಿದ್ದರು.

"ಇಗೋ ನೋಡಿದ್ರಾ? ಇದೇ ನಮ್ಮ ಬಾಲಾಮಣಿಯ 'ಲೇಟೆಸ್ಟ್ ಪೋಸ್' ಚಿತ್ರ. ಅವಳ ಕಣ್ಣು ಮೂಗುಗಳು ಎಷ್ಟು ನೇರವಾಗಿದೆ ನೋಡಿದ್ರಾ? ದೇವಲೋಕದ ರಂಭೆ ಊರ್ವಶಿಯರನ್ನು ಇವಳ ಮುಂದೆ ನಿವಾಳಿಸಿ ತೆಗೀಬೇಕು! ಬ್ರಹ್ಮ ಪ್ರತಿಯೊಬ್ಬ ಹೆಣ್ಣಿಗೂ ಸೌಂದರ್ಯ ಕೊಟ್ಟಿದ್ದಾನೆ. ಆದರೆ, ಇವಳು ಮಾತ್ರ ಇಷ್ಟು ಸುಂದರಿಯಾಗಿರಲು ಅದೇನು ಕಾರಣವಿರಬಹುದು? ಅವಳು ಹಾಕಿಕೊಂಡಿರುವ ಹೊಸ ಮಾದರಿಯ ರವಿಕೆಯೇ ಅವಳ ಆ ಸೌಂದರ್ಯವನ್ನು ಎತ್ತಿ ತೋರಿಸುತ್ತದೆ ಎಂದು ನನ್ನ ಅಭಿಪ್ರಾಯ. ಅದಕ್ಕೇನೆ ಆ ರವಿಕೆಗೆ ನಾನು 'ಸ್ಪೆಷಲ್ ಇಂಪ್ರೆಷನ್' ಕೊಟ್ಟು, ಮಸಿಯನ್ನು ಒಂದೇ 'ಲೆವೆಲ್ಲಾ'ಗಿ ಹರವಿ 'ಪ್ರಿಂಟು' ಮಾಡಿದ್ದೀನಿ" ಎನ್ನುತ್ತಿದ್ದರು.

ವಿನಾಯಕ ಮೂರ್ತಿಯವರ ಮಾತಿನಲ್ಲಿ ಬೇಕಾದಷ್ಟು ಸತ್ಯಾಂಶವಿದ್ದಿತು. ನಟಿ ಬಾಲಾಮಣಿಯನ್ನು ಅಷ್ಟೊಂದು ಅಪ್ರತಿಮ ಸುಂದರಿ ಎಂದು ಅವರು ಒಪ್ಪುತ್ತಿರಲಿಲ್ಲ. ಆದರೆ ಅವಳು ಉಟ್ಟು ತೊಡುತ್ತಿದ್ದ ಹೊಸಹೊಸ ರೀತಿಯ ಉಡುಗೆ ತೊಡುಗೆಗಳು ಅವಳ ಅಂದಕ್ಕೆ ಪುಟವಿಡುತ್ತಿದ್ದುವು. ಅದರಲ್ಲೂ ಮುಖ್ಯವಾಗಿ, ಅವಳು ಧರಿಸುತ್ತಿದ್ದ ಒಂದು ನವೀನ ರೀತಿಯ 'ರವಿಕೆ'ಯನ್ನು ಒತ್ತಿಹೇಳಲೇಬೇಕು. ಆ ಕಾಲದಲ್ಲಿ ಹೆಂಗಸರು ಮೊಳಕೈಗೂ ಕೆಳಗೆ ಬರುವಂತೆ 'ತೋಳ'ನ್ನಿರಿಸಿ ಕುಬುಸವನ್ನು ಹೊಲಿಸಿಕೊಳ್ಳುತ್ತಿದ್ದುದು ಸಂಪ್ರದಾಯ; ಅದೇ ಆಗಿನ ಹೆಣ್ಣು ಮೆಚ್ಚುವ ನಾಗರಿಕ ಚಿನ್ಹೆಯಾಗಿತ್ತು. ಆದರೆ ಆ ನಾಗರಿಕತೆಯನ್ನು ಬಾಲಾಮಣಿ ಅನಾಗರಿಕವನ್ನಾಗಿ ಮಾಡಿಬಿಟ್ಟಳು, ತಾನು ಧರಿಸುತ್ತಿದ್ದ ಒಂದು ಹೊಸ ಬಗೆಯ ಕುಬುಸದ ದೆಸೆಯಿಂದ! ಹೌದು; ಅವಳು ತೋಳೇ ಇಲ್ಲದ—ಪೈಲ್ವಾನ್‌ರ ಬನಿಯನ್ ತರಹೆಯದು—ರವಿಕೆಯೊಂದನ್ನು ಧರಿಸಿಕೊಂಡಳು. ಅವಳು ಒಬ್ಬ ನಟಿಯೇ ಆಗಿದ್ದುದರಿಂದ ಈ ಸಮಾಜದಲ್ಲಿ ಆ ಹೊಸ ಬಗೆಯ ಶೋಧನೆಯನ್ನು ಧೈರ್ಯದಿಂದ ಆಚರಣೆಗೆ ತರಲು ಸಾಧ್ಯವಾಯಿತು. ಆದರೆ ಈ ಶೋಧನೆಗೆ ಇಷ್ಟು ಅದ್ಭುತ ಸ್ವಾಗತ ದೊರಕುತ್ತದೆಂದು ಅವಳು ಭಾವಿಸಿರಲಿಲ್ಲ. ಯಾವುದೋ ಒಂದು ನಾಟಕಕ್ಕೆಂದು ಅವಳು ಧರಿಸಿದ್ದ ಆ ರವಿಕೆ ಅವಳ ಸೌಂದರ್ಯವನ್ನು ಇಮ್ಮಡಿಗೊಳಿಸಿಬಿಟ್ಟಿತ್ತು. ಅವಳನ್ನು ನೋಡಿ ಕೆಲವು ಶ್ರೀಮಂತ ಹೆಣ್ಣುಗಳೂ ಸಹ ಆ ಬಗೆಯ ರವಿಕೆಗಳನ್ನು ಧರಿಸಲಾರಂಭಿಸಿದರು. ಆ ತರುವಾಯ ಆ ರವಿಕೆಗೆ 'ಬಾಲಾಮಣಿ ಫ್ಯಾಷನ್' ಅಂತಲೇ ಹೆಸರಾಗಿಬಿಟ್ಟಿತು.

*

ಅವತ್ತೊಂದು ದಿವಸ ಶ್ರೀ ಬಾಲಾಮಣಿ ಗಾನ ವಿನೋದ ಸಭೆಯವರು ಹೊಸದಾಗಿ ಅಭ್ಯಾಸ ಮಾಡಿದ್ದ ನಾಟಕವೊಂದರ ಪ್ರಾರಂಭೋತ್ಸವ ಪ್ರಸಿದ್ಧರಾಗಿದ್ದ ಇಂಗ್ಲೀಷ್ ಅಧಿಕಾರಿಯೊಬ್ಬರಿಂದ ಜರುಗುವುದಿದ್ದಿತು. ಆ ನಾಟಕಕ್ಕಾಗಿ ಹತ್ತು ಸಾವಿರಕ್ಕೂ ಹೆಚ್ಚು ರೂಪಾಯಿಗಳನ್ನು ವೆಚ್ಚ ಮಾಡಿ ಹೊಸ ಹೊಸ ಸೀನರಿಗಳನ್ನು ಮಾಡಿಸಲಾಗಿದೆಯೆಂದು ಜಾಹೀರಾತು ಮಾಡಲಾಗಿತ್ತು. ನಗರದಲ್ಲೆಲ್ಲಾ ಉತ್ಸಾಹ. ಅವತ್ತಿನ ನಾಟಕದ ಟಿಕೇಟುಗಳು ಹಿಂದಿನ ನಾಟಕ ಮುಗಿಯುವುದರೊಳಗಾಗಿಯೇ ಮುಂಗಡವಾಗಿ ಮುಗಿದುಹೋಗಿದ್ದುವು.

ಬಾಲಾಮಣಿ, ಅವಸರವಸರವಾಗಿ ಓಡಿ ಬಂದು ಒಂದು 'ಫ್ಯಾಮಿಲಿ ಪಾಸ'ನ್ನು ಅವರ ಮುಂದೆಸೆದು, "ಇದೊ ನೋಡಿ, ಇವತ್ತಿನ ನಾಟಕಕ್ಕೆ ನೀವು ಬರಲೇಬೇಕು. ಇಲ್ಲದೇ ಇದ್ರೆ ನಿಮ್ಮನ್ನು ನಾನು ಇನ್ನೊಂದು ಸಲ ನೋಡುವುದೇ ಇಲ್ಲ" —ಎಂದು ನಸುಕೋಪದಿಂದ ಹೇಳಿದಳು. ಅವಳು ಅಂದು ಆ 'ಹೊಸ

ಫ್ಯಾಷನ್' ರವಿಕೆಯನ್ನು ನಸು ಗುಲಾಬಿಬಣ್ಣದ ವೆಲ್‌ವೆಟ್ಟಿನಿಂದ ಹೊಲಿಸಿ ಧರಿಸಿದ್ದುದರಿಂದಲೋ ಏನೋ, ಅತಿ ಸುಂದರಿಯಾಗಿ ಅವರಿಗೆ ಕಾಣಿಸಿದಳು. ಅವಳನ್ನು ಅರೆ ಕ್ಷಣ ರೆಪ್ಪೆ ಮುಚ್ಚದೇ ನೋಡುತ್ತಿದ್ದ ವಿನಾಯಕ ಮೂರ್ತಿ, "ಸರಿ, ಖಂಡಿತವಾಗಿಯೂ ಇವತ್ತು ನಿನ್ನ ನಾಟಕಕ್ಕೆ ಬರುತ್ತೇನೆ" ಎಂದರು.

ಪತಿ ತನ್ನನ್ನು ನಾಟಕಕ್ಕೆ ಕರೆದೊಯ್ಯುತ್ತೇನೆ ಎಂದು ಹೇಳಿದ ಕೂಡಲೇ ಮೀನಾಕ್ಷಿ ಉಬ್ಬಿ ಹೋಗಿದ್ದಳು. ಅವಳ ಏಳು ವರ್ಷ ವಯಸ್ಸಿನ ಕಮಲೆಯೂ ಐದು ವರ್ಷದ ರಾಮದೊರೆಯೂ ಸಹ ನಾಟಕಕ್ಕೆ ಹೋಗುತ್ತೇವೆಂಬ ಸಂತೋಷದಲ್ಲಿ ಚಪ್ಪಾಳೆ ಹಾಕಿ ಕುಣಿಯುತ್ತಿದ್ದರು. ಸಂಜೆ ಐದು ಗಂಟೆಗೆಲ್ಲಾ ಮನೆಗೆಲಸವನ್ನು ಪೂರ್ಣವಾಗಿ ಮುಗಿಸಿ ನಾಟಕಕ್ಕೆ ಹೋಗಲು ತಯಾರಾದಳು ಮೀನಾಕ್ಷಿ. ಆದರೆ, ಪ್ರೆಸ್ಸಿನಿಂದ ಬಂದು ತಯಾರಾಗಿರಲು ಹೇಳಿ ಎಲ್ಲಿಗೋ ಹೋಗಿದ್ದ ವಿನಾಯಕ ಮೂರ್ತಿ ಇನ್ನೂ ಹಿಂತಿರುಗಿ ಬಂದಿರಲಿಲ್ಲ

ಸರಿಯಾಗಿ ಐದೂವರೆ ಘಂಟೆಗೆ ಬಂದು ಮನೆ ಸೇರಿದರು ವಿನಾಯಕಮೂರ್ತಿ. ಅವರ ಕೈಯ್ಯಲ್ಲಿ ಒಂದು ಪೊಟ್ಟಣವಿದ್ದಿತು. "ಏನು ಮೀನಾಕ್ಷಿ, ಹೊರಡಬಹುದು ತಾನೇ?" ಎನ್ನುತ್ತ ಒಳ ಹೊಕ್ಕ ಅವರು, ತಮ್ಮ ಅರ್ಧಾಂಗಿಯನ್ನೊಮ್ಮೆ ಅಡಿಯಿಂದ ಮುಡಿಯವರೆಗೆ ನೋಡಿ ಮುಗುಳು ನಕ್ಕರು.

"ನೋಡೋದೆಲ್ಲಾ ಆಮೇಲಾಗಲಿ, ಬೇಗ ತಿಂಡಿ ತಿಂದ್ಬಿಟ್ಟು ಹೊರಡಿ. ಆಗ್ಲೇ ಐದೂವರೇ ಆಗೋಯ್ತು" —ಎನ್ನುತ್ತಾ ಸ್ವಲ್ಪ ಕೋಪವನ್ನು ಪ್ರದರ್ಶಿಸುತ್ತಲೇ ಕಾಫಿತಿಂಡಿಗಳನ್ನು ಅವರ ಮುಂದೆ ತಂದಳು ಮೀನಾಕ್ಷಿ.

ಅವಳನ್ನು ಓರೆಗಣ್ಣಿನಿಂದಲೇ ನೋಡುತ್ತ ಮೂರ್ತಿಗಳು ಕಾಫಿಯನ್ನು ಹೀರುತ್ತಾ, "ಆರೂವರೆಗೇ ತಾನೇ ನಾಟಕ, ಹೀಗೇನು ಅವಸರಪಡುತ್ತೀ?" ಎಂದರು ಶಾಂತಸ್ವರದಲ್ಲಿ. ಮತ್ತೆ ತಕ್ಷಣಾ, ಪ್ರೇಮವೂ ಸಂಕೋಚವೂ ತುಂಬಿದ ಮಧುರ ದನಿಯಿಂದ "ಹೌದು; ಈ ಜರತಾರಿ ಸೀರೆಯ ನೀಲೀ ಹೊಳಪಿಗೆ ತಕ್ಕಂತೆ ಒಂದು ಒಳ್ಳೆಯ ರವಿಕೆ ನಿನ್ನ ಹತ್ತಿರ ಇಲ್ಲವೇ? ಈ ಬಣ್ಣ ಮಾಸಿರುವ ಹಳೆಯ ಕುಬುಸವನ್ನೇ ತೊಟ್ಕೊಂಡು ನನ್ನ ಮುಂದೆ ಬಂದು ನೀನು ನಿಂತ್ಕೋತೀಯಲ್ಲಾ?" —ಎಂದರು.

"ಇದೇನ್ರೀ ಇದು? ಇವತ್ತೆಲ್ಲ ಹೊಸದಾಗಿ ಕೇಳ್ತಾ ಇದ್ದೀರಾ?" ಎಂದು ಅಚ್ಚರಿಯಿಂದ ಮೂಗಿಗೆ ಬೆರಳೇರಿಸಿದ ಮೀನಾಕ್ಷಿ, "ಪರವಾಗಿಲ್ಲ. ಇನ್ನು ಬೇರೆ ರವಿಕೆ ತೊಡೋದಕ್ಕೆ ಹೊತ್ತಿಲ್ಲ. ಈಗ ಹಾಕ್ಕೊಂಡಿರೋದೇ ತುಂಬ ಚೆನ್ನಾಗಿದೆ. ಹೊತ್ತಾಯ್ತು; ನಡೆಯಿರಿ" ಎಂದಳು.

"ಛೀ ಛೀ! ಮೊದಲು ಅದನ್ನು ಕಿತ್ತು ಬಿಸಾಡು. ಈ ರವಿಕೆಯನ್ನು ಹಾಕ್ಕೊಂಡು ಬಾ" ಎನ್ನುತ್ತಾ ತಮ್ಮ ಕೈಯಲ್ಲಿದ್ದ ಪೊಟ್ಟಣವೊಂದನ್ನು ವಿನಾಯಕ ಮೂರ್ತಿ ಅವಳ ಕೈಗೆ ಕೊಟ್ಟರು.

ಮೀನಾಕ್ಷಿಯ ಹೃದಯ ಸಂತಸದಿಂದ ನಲಿದಾಡಿತು. "ಓ! ಇದನ್ನು ತರೋದಕ್ಕೇನೇ ಮನೆಗೆ ಬಂದಾಕ್ಷಣಾ ಹಾಗೆ ಅಂಗಡಿಗೆ ಓಡಿ ಹೋದರೇನೋ?" ಎಂದು ಜೇನು ತುಂಬಿದ್ದ ದನಿಯಲ್ಲಿ ಮಾತನಾಡುತ್ತಾ ಆಸೆಯಿಂದ ಆ ಪೊಟ್ಟಣವನ್ನು ಬಿಚ್ಚಿದಳು. ಆದರೆ ತಕ್ಷಣಾ—ನಾಗರಹಾವನ್ನು ಕಂಡವಳಂತೆ ಒಂದು ಹೆಜ್ಜೆ ಹಿಂದಕ್ಕೆ ಹಿಮ್ಮೆಟ್ಟಿದಳು. ಅವಳಿಗರಿವಿದ್ದೋ ಇಲ್ಲದೆಯೋ ಆ ವಸ್ತು ಅವಳ ಹಸ್ತಗಳಿಂದ ಕಳಚಿಬಿತ್ತು.

ಅದು ಬೇರೇನೂ ಅಲ್ಲ. ಅಂದು ಮಧ್ಯಾನ್ಹ ನಾಟಕಕ್ಕೆ ಬರಹೇಳುವ ಆಮಂತ್ರಣದೊಂದಿಗೆ ಬಂದಿದ್ದ ಬಾಲಾಮಣಿ ಧರಿಸಿದ್ದ ಆ ಹೊಸ ಫ್ಯಾಷನ್‌ನಂತಹುದೇ ಗುಲಾಬೀ ಬಣ್ಣದ ತೋಳಿಲ್ಲದ ರವಿಕೆ.

ಮೀನಾಕ್ಷಿ ಕೂಡಲೇ ಚೇತರಿಸಿಕೊಂಡು ಸಾವಧಾನವಾಗಿ ಬಾಗಿ, ಕೆಳಗುರುಳಿದ್ದ ಆ ರವಿಕೆಯನ್ನು, ಮನಸ್ಸಿಲ್ಲದ ಮನಸ್ಸಿನಿಂದ, ಎಡಗೈಯಿಂದ ಎತ್ತಿ ಪುನಃ ಅದೇ ಕಾಗದದಲ್ಲಿ ಹಾಕಿ ಸುತ್ತಿ, "ಏನ್ರೀ ಇದು, ನೋಡೀ ನೋಡೀ ಈ ತರಹದ್ದನ್ನು ಕೊಂಡುಕೊಂಡು ಬಂದಿದ್ದೀರಾ?" ಎಂದಳು ಮೆಲ್ಲನೇ ನಗಲು ಪ್ರಯತ್ನಿಸುತ್ತಾ.

ವಿನಾಯಕ ಮೂರ್ತಿಗಳು ದುರದುರನೇ ಅವಳನ್ನು ನೋಡಿದರು. ಏನು ಹೇಳಬೇಕೆಂಬುದೇ ಅವರಿಗೆ ತಿಳಿಯಲಿಲ್ಲ. ಜೋಲು ಮುಖ ಮಾಡಿಕೊಂಡು ಮೌನವಾಗಿದ್ದ ಅವರು ಸ್ವಲ್ಪ ಹೊತ್ತಿನ ತರುವಾಯ, "ಏನೇ? ಇದಕ್ಕೇನೇ ಕೇಡು?" ಎಂದರು ಬೇಸರದ ದನಿಯಲ್ಲಿ.

"ತುಂಬಾ ಚೆನ್ನಾಗಿದೆ ನಿಮ್ಮ ಪ್ರಶ್ನೆ? ಈ ತರಹದ ರವಿಕೆಯನ್ನೆಲ್ಲಾ ಮರ್ಯಾದಸ್ಥ ಕುಟುಂಬದ ಹೆಂಗಸರು ಹಾಕೋದಿಲ್ಲ. ನಡೀರಿ ಹೋಗೋಣ."

"ಮತ್ತೆ ಇನ್ನಾರು ಹಾಕ್ಕೋಳ್ಳೋದು?"

"ಕುಲಹೀನರೂ ಮತ್ತೆ ನಾಟಕದವರೂ ಹಾಕ್ತಾರೆ."

"ನಿನಗೆ ತುಂಬಾ ಗೊತ್ತು. ಇದೇ ಈಗಿರುವ ಹೊಸ ಫ್ಯಾಷನ್."

"ಅಯ್ಯೋ ಫ್ಯಾಷನ್ನೇ? ಇದು 'ಬಾಲಾಮಣಿ ಫ್ಯಾಷನ್' ಅಂತ ನಂಗೊತ್ತಿಲ್ವೇ? ಹೆಂಗಸರ ಕುಬುಸದ ಫ್ಯಾಷನ್ ವಿಚಾರವಾಗಿಯೇ ನೀವು ನನಗ ಹೇಳೋದಕ್ಕೆ ಬಂದ್ಬಿಟ್ರಲ್ಲಾ?" ಘಲ್ಲೆಂದು ನಕ್ಕಳು ಮೀನಾಕ್ಷಿ.

ವಿನಾಯಕ ಮೂರ್ತಿಗಳು ಅವಳನ್ನು ಉರಿಗಣ್ಣುಗಳಿಂದ ನೋಡಿದರು. "ಅದೆಲ್ಲಾ ಇರ್ಲಿ. ಇವನ್ನೀಗ ಹಾಕ್ಕೋಳ್ತೀಯೋ ಇಲ್ವೋ?" ಎಂದೊಂದು ಸವಾಲು ಹಾಕಿದರು.

ತನ್ನ ಪತಿದೇವನನ್ನೊಮ್ಮೆ ತಲೆಯೆತ್ತಿ ನೋಡಿ ಮತ್ತೆ ತಲೆಕೆಳಗಿಳಿಸಿದ ಮೀನಾಕ್ಷಿ ಮೆಲ್ಲನೇ,

"ನಾನಾಗಲೇ ಹೇಳಿಬಿಟ್ಟೆನಲ್ಲಾ. ನನಗೆ ಈ ತರಹದ ಕುಬುಸಗಳನ್ನೆಲ್ಲಾ ಹಾಕಿಕೊಂಡು ಅಭ್ಯಾಸವಿಲ್ಲ. ಸುಮ್ಮನೇ ತಕರಾರು ಮಾಡಬೇಡಿ; ಹೊರಡಿ" ಎಂದಳು.

"ಹಾಕ್ಕೊಳ್ಳೋಕೆ ಪ್ರಾರಂಭಿಸಿದರೆ, ತಾನೇ ತಾನಾಗಿ ಅಭ್ಯಾಸವಾಗುತ್ತೇ!" ಎಂದು ಆತುರದಿಂದ ಹೇಳಿ ವಿನಾಯಕ ಮೂರ್ತಿ ವಿಕಟ ನಗೆಯೊಂದನ್ನು ನಕ್ಕರು.

ಮೀನಾಕ್ಷಿಗ ಥಟ್ಟನೇ ಕೋಪ ಉಕ್ಕೇರಿತು. ಗಂಡನನ್ನು ಒಂದೇ ನುಂಗಿಗೆ ತಿಂದುಬಿಡುವವಳ ಹಾಗೆ ನೋಡಿದಳು. ಮತ್ತೆ ಛಟ್ಟೆಂದು ಮುಖವನ್ನು ಮತ್ತೊಂದು ದಿಕ್ಕಿಗೆ ತಿರುಗಿಸಿ, "ದೇಹದಲ್ಲಿ ನಾಚಿಕೆ, ಮಾನಮರ್ಯಾದೇ ಇಲ್ದೇ ಇರೋಳೇ ಇದನ್ನ ತೊಟ್ಕೋಬೇಕು; ನನ್ನ ಕೈಯಲ್ಲಂತೂ ಆಗೊಲ್ಲಾ!" ಎನ್ನುತ್ತಾ ಆ ಪೊಟ್ಟಣವನ್ನು ಸಿಡುಕಿನಿಂದ ಅವರತ್ತ ಚಾಚಿದಳು.

ವಿನಾಯಕ ಮೂರ್ತಿಗಳ ಆಜಾನುಬಾಹು ಶರೀರ ಅವಮಾನವನ್ನು ತಾಳಲಾರದೇ ಅಂಗುಷ್ಠದಗಲಕ್ಕೆ ಕುಗ್ಗಿತು. ಉಕ್ಕಿಬಂದ ಅಪಾರವಾದ ಕೋಪವನ್ನು ಸಹಿಸಲಾರದೇ ಅವರು ಪಾದವನ್ನು ಒಮ್ಮೆ ನೆಲದ ಮೇಲೆ ಝಾಡಿಸಿದರು.

"ಓಹೋ, ಹಾಗೋ ವಿಷಯ? ಸರಿ, ಸರಿ; ನಿನ್ನ ನಾಚಿಕೆ, ಮಾನಮರ್ಯಾದೆಗಳನ್ನು ನಾನು ನೋಡಿಯೇ ಬಿಡುತ್ತೇನೆ!" ಎಂದು ಗುರ್ರೆಂದು ಗರ್ಜಿಸುತ್ತಲೇ ಬಡಬಡನೇ ಹೊರ ಹೊರಟರು.

*

ಮನೆಯನ್ನು ಬಿಟ್ಟ ವಿನಾಯಕ ಮೂರ್ತಿ ನೇರವಾಗಿ ಅಜ್ಜ್ಯಕೂಟಕ್ಕೆ ಹೋಗಿ ರಾತ್ರಿಯನ್ನೆಲ್ಲಾ ಅಲ್ಲೆ ಕಳೆದರು. ಮರುದಿನವೂ ಅವರ ಮುಂದಿನ ದಿನವೂ ಸಹ ಅವರು ಮನೆಯತ್ತ ಸುಳಿಯಲಿಲ್ಲ.

ಮರುದಿನ ಬೆಳಿಗ್ಗೆ, ಅವರ ಪುಟ್ಟಮಗಳು ಕಮಲೆ, ಬೆದರುತ್ತಾ ಬೆದರುತ್ತಾ ಅಪ್ಪನ ಬಳಿ ಬಂದು, "ಅಮ್ಮಾ ನಿಮ್ಮನ್ನು ಕರ್ಕೊಂಡು ಬರೋದಕ್ಕೆ ಹೇಳಿದ್ಲು, ಅಪ್ಪ" ಎಂದಳು.

"ಅವಳೇ ಬರ್ಲಿ. ಅದೂ, ಸುಮ್ಮನೇ ಬರಬಾರದು. ಆ ಹೊಸ ರವಿಕೆಯನ್ನು ಹಾಕಿಕೊಂಡು ಬಂದು ಕೂಗಿದರೆ ಮಾತ್ರ ನಾನು ಬರ್ತೀನಿ, ಅಂತ ಅವಳ ಹತ್ತಿರ ಹೇಳು, ಹೋಗು!"

ಕಮಲ, ಕೆಲವು ಹೊತ್ತಿನ ತರುವಾಯ ಪುನಃ 'ಹೋ' ಎಂದಳುತ್ತಾ ಓಡಿಬಂದಳು.

"ಅಪ್ಪಾ, ಅಮ್ಮ ನನ್ನನ್ನು ಬಿಟ್ಬಿಟ್ಟು, ತಮ್ಮನ್ನ ಮಾತ್ರ ಕರ್ಕೊಂಡು ಹಳ್ಳಿಗ ಹೊರಟು ಹೋದಳು. ಈ ಬೀಗದ ಗೊಂಚಲನ್ನು ನಿಮಗೆ ಕೊಡೋದಕ್ಕೆ ಹೇಳಿದಳು" —ಎನ್ನುತ್ತಾ ಅಳುವುದನ್ನು ಇನ್ನೂ ಹೆಚ್ಚಿಸಿಬಿಟ್ಟಳು.

"ಅಷ್ಟೊಂದು ಕೊಬ್ಬೇ ಅವಳಿಗೇ?... ಹೋಗ್ಲಿ ...ಹೋಗ್ಲಿ; ಎಷ್ಟು ದಿವಸಾ ಅಂತ ಹೀಗ ಮೆರೀತಾಳೋ ನೋಡ್ತೀನೀ" ಎಂದು ಗುಡುಗುಡಿಸಿದರು ವಿನಾಯಕಮೂರ್ತಿ.

ಒಂದು, ಎರಡು ಎಂದು ಹಲವಾರು ಮಾಸಗಳು ಕಳೆದುವು. ತವರುಮನೆಗೆ ತೆರಳಿದ್ದ ಮೀನಾಕ್ಷಿ ಹಿಂತಿರುಗಿ ಬರಲೇ ಇಲ್ಲ. ವಿನಾಯಕ ಮೂರ್ತಿಗಳೂ ಅವಳನ್ನು ಕರೆದುಕೊಂಡು ಬರಲು ಹೋಗಲಿಲ್ಲ.

ಮೀನಾಕ್ಷಿಯ ಕಡೆಯವರೊಮ್ಮೆ ವಿನಾಯಕ ಮೂರ್ತಿಯವರನ್ನು ಸಮಾಧಾನಪಡಿಸಲು ಬಂದರು.

"ಇಲ್ನೋಡಿ. ನಿಮ್ಮ ಮನೆಯ ಹೆಣ್ಣು ಮಾಡಿರುವುದು ಒಂದು ದೊಡ್ಡ ಅಪರಾಧ. ಅವಳು ಮನೇಬಿಟ್ಟು ಓಡಿ ಹೋಗೋ ಅಂಥಾದ್ದು ನಾನೇನು ತಾನೇ ಮಾಡಿದೆ? ಒಬ್ಬ ಗಂಡ ತನ್ನ ಕಣ್ಣಿಗೆ ಚೆನ್ನಾಗಿ ಕಾಣುವಂತೆ ತನ್ನ ಹೆಂಡತಿಯನ್ನು ಅಲಂಕಾರ ಮಾಡಿಕೋ ಅನ್ನೋದೂ ತಪ್ಪೇ? ಆ ರವಿಕೆಯನ್ನು ನಾನು ಅದೆಷ್ಟು ಆಸೆಯಿಂದ ಕೊಂಡು ಬಂದಿದ್ದೆ!... ನನ್ನ ಆ ಪ್ರೇಮ ವಿಶ್ವಾಸಗಳ ಮಾತುಗಳಿಗೆ ಅವಳು ಸ್ವಲ್ಪವಾದರೂ ಬೆಲೆ ಕೊಟ್ಟಳೇ? ಸರಿ; ನಾನು ಹಾಗೆ ಆಸೆಪಟ್ಟದ್ದು ಒಂದು ವೇಳೆ ತಪ್ಪು ಅಂತಾನೇ ಇಟ್ಕೊಳ್ಳೋಣ. ಅಷ್ಟಕ್ಕೆ ಅವಳು ಮಾನಮರ್ಯಾದೆ ಇಲ್ದೇ ಇದ್ಕೊಳೀ ಇದನ್ನ ಹಾಕ್ಕೋಳೋದು, ಎನ್ನಬೇಕೆ? ಮತ್ತೆ ಅದನ್ನ ಕೊಂಡು ಬಂದ ನಾನು ಮಾನಮರ್ಯಾದೆ ಬಿಟ್ಟಿರುವವನೇ? ನಿಜವಾಗಿಯೂ ಅವಳು ನನ್ನ ಮೇಲೆ ಭಕ್ತಿ ವಿಶ್ವಾಸಗಳನ್ನು ಇಟ್ಟಿದ್ದಿದ್ದರೆ ಮತ್ತೆ ಆ ರೀತಿ ಆ ರವಿಕೆಯನ್ನು ಹಾಕಿಕೊಳ್ಳುವುದಕ್ಕೆ ಇಷ್ಟವಿಲ್ಲದಿದ್ದವಳಾಗಿದ್ದರೆ, ಏನು ಮಾಡ್ತಿದ್ಲೊ ಗೊತ್ತೇ? ನಾನು ಹೇಳಿದ ತಕ್ಷಣ ಆ ರವಿಕೆಯನ್ನು ಧರಿಸಿಕೊಂಡು ನಾಟಕ ನೋಡಿ ಮನೆಗೆ ವಾಪಸ್ಸು ಬರುವಾಗ, 'ನೋಡಿದ್ರಾ, ನಿಮ್ಮ ಮಾತನ್ನು ಕೇಳಿ ಇದನ್ನು ಇವತ್ತು ಹಾಕ್ಕೊಂಡು ಬಂದಿದ್ದಕ್ಕೆ ಅಲ್ಲಿ ಕೂತಿದ್ದ ಎಷ್ಟೋ ಜನ ಗಂಡಸರು ನನ್ನನ್ನು ತಿಂದು ಬಿಡೋರ ಹಾಗೆ ನೋಡ್ತಾ ಇದ್ರು, ಎಂದಂದು ಬಿಡಬಹುದಿತ್ತು. ಹಾಗೆ ನಡೀದಿದ್ರೂ, ಒಂದು ಸುಳ್ಳನ್ನಾದ್ರೂ ಹೇಳಬಹುದಿತ್ತು. ಅದನ್ನ

ಕೇಳಿಯೂ ನಾನು ಪುನಃ ಆ ರವಿಕೆ ಧರಿಸಲು ಹೇಳುತ್ತೇನೆಯೋ? ಆಗ ನನಗೆ ಬುದ್ಧಿ ಬಂದಿತ್ತಲ್ಲಾ! ಆದರೆ ಹಾಗೆ ಮಾಡದೇ ನನ್ನ ಮಾತನ್ನು ಹೊಡೆದು ಹಾಕಿಬಿಟ್ಟದ್ದೂ ಅಲ್ದೇ, ಹೇಳದೇ ಕೇಳದೇ ಊರಿಗೆ ಓಡಿ ಹೋಗಿಬಿಟ್ಟಲ್ಲಾ? ಇಷ್ಟು ಗರ್ವಿಷ್ಠೆಯನ್ನು ನಾನು ಪುನಃ ಕರೆದುಕೊಂಡು ಬಂದು ಸಂಸಾರ ಮಾಡೋದು ಈ ಜನ್ಮದಲ್ಲಿ ಸಾಧ್ಯವೇ?... ಆಗೊಲ್ಲಾ ಆಗೊಲ್ಲಾ... ಆಗೋದೆ ಇಲ್ಲ!"

-ಎಂದು ಕೂಗಾಡುತ್ತಾ ಆ ಆಸಾಮಿಯನ್ನು ಬಂದ ದಾರಿ ಹಿಡಿಯುವಂತೆ ಮಾಡಿದರು ಮೂರ್ತಿಗಳು. ಮತ್ತೊಂದು ಬಾರಿ ವಿನಾಯಕಮೂರ್ತಿಯ ಕಡೆಯವರೊಬ್ಬರು ಮೀನಾಕ್ಷಿಗೆ ಬುದ್ಧಿ ಹೇಳಲು ಹೋದರು. "ನಾನು ಹೇಳುವುದು ಕೇಳಿ. ನನಗೆ ಅವರ ಬುದ್ಧಿ ಚೆನ್ನಾಗಿ ಗೊತ್ತು. ಸ್ವಲ್ಪ ದಿವಸಗಳಿಂದ ಅವರ ನಡತೆಯೂ ಬದಲಾಯಿಸಿಬಿಟ್ಟಿದೆ. ಒಬ್ಬ ನಾಟಕದವಳಿಗೂ ಅವರಿಗೂ ಸಂಬಂಧವಿದೆ ಎನ್ನುವುದು ನನಗೂ ಚೆನ್ನಾಗಿ ಗೊತ್ತು. ಮೊದಲು ನಾನು ಅದನ್ನು ನಂಬಿರಲಿಲ್ಲ. ಆ ಮೇಲೆ ಮುದ್ರಣಾಲಯದ ಸಿಬ್ಬಂದಿಯವರೊಡನೆ ವಿಚಾರಿಸಿ ನೋಡಿದೆ. ಅದು ನಿಜವೇ ಎಂದು ತಿಳಿದುಬಂತು. ಅದಕ್ಕೋಸ್ಕರಾನೇ ಅವರ ಬುದ್ಧಿ ಅಷ್ಟು ಕೀಳು ಆಗೋಯ್ತು. ನನಗೆ ಅವರ ಆ ರಹಸ್ಯಗಳೆಲ್ಲಾ ಗೊತ್ತೆ ಇಲ್ಲ ಎಂದೆಂದು ಕೊಂಡಿರಬೇಕು ಅವರು. ಇಲ್ಲದೇ ಇದ್ರೆ ಇದ್ದಕ್ಕಿದ್ದ ಹಾಗೆಯೇ ಆ ಸುಡುಗಾಡು ತೋಳಿಲ್ಲದ ರವಿಕೇನ ತಂದು ನನಗೆ ಹಾಕಿಕೊ ಅಂತ ಬಲವಂತ ಮಾಡೋದೇ? ಮದುವೆ ಆದ ಹೆಂಡತಿಯೂ ಯಾರ್ಯಾರ ಮುಂದೆಯೂ ಹಲ್ಲು ಕಿರಿಯುತ್ತಾ ಕುಣಿದಾಡೋ ಆ ನಾಟಕದೋಳೂ ಒಂದೇ ಎಂದು ತಿಳಿದುಕೊಳ್ಳೋ ಮಟ್ಟಿಗೆ ಅವರ ಬುದ್ಧಿ ಇಳಿಯಿತು. ಅದಕ್ಕೇ ನನಗೆ ಅವರ ಮೇಲೆ ಕೋಪ. ಹೊನ್ನಿಗೂ ಹಿತ್ತಾಳೆಗೂ ವ್ಯತ್ಯಾಸ ಗೊತ್ತಿಲ್ಲದೇ ಬಾಳುತ್ತಿರುವ ಮನುಷ್ಯರು ಅವರು. ಮತ್ತೆ ಅವರೊಂದಿಗೆ ಸಂಸಾರ ಮಾಡುವುದೆಂದರೆ ಹಗಲು ಕಂಡ ಭಾವಿಗೆ ಇರುಳಿನಲ್ಲಿ ಬಿದ್ದಹಾಗೆಯೇ.

ಕಲ್ಲಾಗಿದ್ದರೂ ಗಂಡು, ಮಣ್ಣಾಗಿದ್ದರೂ ಕೈಹಿಡಿದಾತ, ಎನ್ನುವುದೆಲ್ಲಾ ಸರಿಯೇ. ಅಷ್ಟಕ್ಕೆಲ್ಲಾ, ತನ್ನ ಮನಸ್ಸಿನ ಭಾವನೆಗಳನ್ನೂ ಮಾನ ಮರ್ಯಾದೆಗಳನ್ನು ಮೂಕವಾಗಿ ಬಿಟ್ಟುಕೊಡುವುದರಲ್ಲಿ ಯಾವ ಅರ್ಥವೂ ಇಲ್ಲ. ಹಾಗೆ ಬಿಟ್ಟುಕೊಟ್ಟು ಬಾಳುವುದಕ್ಕಿಂತಲೂ ನಾನು ಹೀಗೆಯೇ ಒಂಟಿಯಾಗಿಯೇ ಕಲ್ಲುಗುಂಡಿನಂತೆ ಜೀವಿಸಲು ಇಷ್ಟಪಡುತ್ತೇನೆ. ನೀವು ಹೋಗ್ಬಿಟ್ಟು ಬನ್ನಿ" ಎಂದು ಆವೇಶದಿಂದ ಮಾತನಾಡಿ ಅವನನ್ನು ಕಳುಹಿಸಿಬಿಟ್ಟಳು ಮೀನಾಕ್ಷಿ

*

ಒಂದು ಕಡೆ ಅರವನ್ನೂ ಮತ್ತೊಂದು ಕಡೆ ಹರಿತವಾಗಿರುವ ಕತ್ತಿಯನ್ನೂ ಹೊಂದಿದೆಯೇನೋ ಎನ್ನುವಂತೆ ಬೆಳಗುತ್ತಿರುವ ಕಾಲವು, ಮಾನವ ಮನದಲ್ಲಿ ಉದ್ಭವವಾಗುವ ವಿರೋಧವನ್ನೂ ಕ್ರೋಧವನ್ನೂ ಸ್ವಲ್ಪಸ್ವಲ್ಪವಾಗಿ ಸವೆಸಲೂ ಬಹುದು; ಅಥವ ಅವುಗಳನ್ನು ಹೆಚ್ಚಾಗಿಸುತ್ತಾ ಹೆಮ್ಮರವಾಗುವಂತೆ ಬೆಳೆಯಲೂ ಬಿಡಬಹುದು. ವಿನಾಯಕ ಮೂರ್ತಿಗಳ ಮತ್ತು ಮೀನಾಕ್ಷಿಯ ನಡುವೆ ಈ ಎರಡನೆಯ ಬಗೆಯ ನಂಟನ್ನು ಕಾಲನೆಂಬ ವಿಧಿ ಮೂಡಿಸಿತು.

ಒಂದರ ಹಿಂದೆ ಒಂದಾಗಿ ಮೂವತ್ತು ವರ್ಷಗಳು ಕಳೆದಿದ್ದುವು. ಇವುಗಳ ನಡುವೆ ವಿನಾಯಕ ಮೂರ್ತಿಗಳ ಜೀವನರಂಗದಲ್ಲಿ ಎಷ್ಟೋ ಬಗೆಯ, ಬೇವುಬೆಲ್ಲದ ಹಾಗೆಯೆ ಎಲ್ಲಾ ತರಹೆಯ ಸಿಹಿಕಹಿಯ ಸಂಭವಗಳು ಜರುಗಿದುವು. ಅವರ ಲಾಲನೆ ಪಾಲನೆಯಲ್ಲೇ ಸಂಪೂರ್ಣವಾಗಿ ಬೆಳೆದಿದ್ದ ಆ ದಿವಸದ ಪುಟ್ಟ ಕಮಲ ಈಗ ದೊಡ್ಡ ಹೆಂಗುಸಾಗಿ ಬೆಳೆದು, ಆರು ಮಕ್ಕಳ ತಾಯಿಯಾಗಿ, ಆ ಮಕ್ಕಳಲ್ಲಿ ಒಬ್ಬಿಬ್ಬರಿಗೆ ಮದುವೆಮಾಡಿ ಅತ್ತೆಯಾಗಿ, ಮತ್ತೆ ಅವರುಗಳಿಗೆ ಜನಿಸಿದ ಮಕ್ಕಳಿಗೆ ಅಜ್ಜಿಯೂ ಆಗಿಬಿಟ್ಟಳು. ಮಗಳು ಅಜ್ಜಿಯಾದ ಮೇಲೆ ಆ ಅಜ್ಜಿಯ ಅಪ್ಪ ಕೋಲು ತಾತ ಆಗಲೇಬೇಕಲ್ಲವೇ?

ಆದರೆ... ಆದರೆ... ಮೀನಾಕ್ಷಿಯ ಸ್ಥಿತಿ ಏನು? ಅವಳೊಂದಿಗೆ ಹೋಗಿದ್ದ ಆ ಮಗು ರಾಮದೊರೆಯ ಗತಿ ಏನು?... ಅವರುಗಳ ಬಗ್ಗೆ ಇವರಾರಿಗೂ ಏನೂ ಗೊತ್ತಿರಲಿಲ್ಲ.

ಈ ಬಗೆಯ ವಿಚಿತ್ರ ವೈರಾಗ್ಯದ ದಂಪತಿಗಳ ಮಧ್ಯೆ ಆ ಹರಿತವಾದ ಕತ್ತಿಯಂತೆ ಹೊಯ್ದಾಡುತ್ತಿದ್ದ ಕಾಲದೇವನಿಗೆ ಅದೇನಾಯಿತೋ ತಿಳಿಯಲಿಲ್ಲ. ಅವ ಅರೆದು ಕರಗಿಸುವಂಥ ಅರವಾಗಿ ಮಾರ್ಪಡುತ್ತಾ ಬಂದಿರಬೇಕು. ಇಲ್ಲದಿದ್ದಲ್ಲಿ, ಆ ಮೂವತ್ತು ವರ್ಷಗಳಲ್ಲಿ ಯಾವ ಬಗೆಯ ನೆನಪೂ ಇಲ್ಲದೇ ಅಳಿಸಿ ಹೋಗಿದ್ದ ಪತ್ನಿ ಮೀನಾಕ್ಷಿ ಇದ್ದಕ್ಕಿದ್ದ ಹಾಗೆಯೇ ಮಗನ ಕೈಯಲ್ಲಿ ಕಾಗದ ಬರೆಸುವುದು, ಆ ಕಾಗದವನ್ನು ಕಂಡಾಕ್ಷಣ ವಿನಾಯಕ ಮೂರ್ತಿಗಳು ತಮ್ಮ ಬಹುಕಾಲ ವೈರಾಗ್ಯವನ್ನು ಪಕ್ಕಕ್ಕೆ ತಳ್ಳಿ, ಹೆಂಡತಿಯನ್ನು ಕಾಣಲು ಇಗೋ ಈ ರೈಲು ಗಾಡಿಯಲ್ಲಿ ಪ್ರಯಾಣ ಮಾಡುವುದರಂತಹ ಸಂಭವ ಏರ್ಪಟ್ಟಿರುವುದೇ?

*

"ತಾತ... ತಾತ!"

ಚಡಪಡಿಸುತ್ತಾ ಕಣ್ಣು ಬಿಟ್ಟರು ತಾತ.

"ನಾನೇನು ಹೇಳಿದೆ? ಇಷ್ಟು ಹೊತ್ತೂ ಯಾರ ಹತ್ರ ಮಾತಾಡ್ತಿದ್ದೆ?" -ಎಂದು ತಾತ ತೊದಲುತ್ತಾ ಸುತ್ತಲೂ ಒಮ್ಮೆ ದೃಷ್ಟಿ ಹರಿಸಿದರು.

"ನೀವು ಯಾರ ಹತ್ತಿರವೂ ಮಾತನಾಡಲಿಲ್ಲ. ಚೆನ್ನಾಗಿ ನಿದ್ರೆ ಮಾಡ್ತಿದ್ರಿ. ಇಗೋ ನಿಮ್ಮ ಒತ್ತಿಪಾಕ್ಕ ಸ್ಟೇಷನ್ ಬಂದ್ಬಿಡ್ತು ಇಳೀರಿ!" ಮುಗುಳು ನಗೆಯಿಂದ ಹೇಳಿದ ಕಡುಕಿನವ.

ಒತ್ತಿಪಾಕ್ಕಂನಲ್ಲಿ ಕಡುಕಿನವನ ಸಹಕಾರದಿಂದ ಕೆಳಗಿಳಿದರು ಮುದುಕರು.

ಅಲ್ಲಿಳಿದಿದ್ದ ಎಲ್ಲಾ ಪ್ರಯಾಣಿಕರೂ ಬಂಧು ಬಳಗದವರನ್ನು ಬಂಡಿ ಏರಿಸಲು ಬಂದಿದ್ದವರೂ ಅವಸರವಸರವಾಗಿ ಹೊರ ಹೊರಡುತ್ತಿದ್ದರು. ಪ್ಲಾಟ್‌ಫಾರಂನಲ್ಲಿ ನಿಂತಿರುವಂತೆಯೇ ಕಣ್ಣಿಗೆ ಕಾಣಿಸುವ ಮನುಷ್ಯ ರೂಪಗಳನ್ನೆಲ್ಲಾ ದೃಷ್ಟಿಸಿ ನೋಡಹತ್ತಿದರು ತಾತನವರು. ತಮ್ಮನ್ನು ಕರೆದೊಯ್ಯಲು ರಾಮದೊರೆ ಬಂದಿದ್ದಾನೆಯೇ ಇಲ್ಲವೇ ಎಂಬುದು ಅವರಿಗೆ ತಿಳಿಯಲಿಲ್ಲ. ಇದನ್ನು ಯಾರ ಬಳಿ ಹೇಗೆ ವಿಚಾರಿಸಬೇಕೆಂಬುದೂ ಹೊಳೆಯಲಿಲ್ಲ ಅವರಿಗೆ.

ರಾಮದೊರೆ ಎಂಬ ಹೆಸರು ಮಾತ್ರ ನೆನಪಿನಲ್ಲುಳಿದಿತ್ತೇ ಹೊರತು, ಅವನ ಮುಖದ ಜಾಡು ಸಂಪೂರ್ಣವಾಗಿ ಅವರ ನೆನಪಿನ ಭಿತ್ತಿಯಿಂದ ಅಳಿಸಿ ಹೋಗಿತ್ತು. ಐದು ವರ್ಷದ ಕೂಸಿದ್ದಾಗ ಅವರು ಅವನನ್ನು ನೋಡಿದ್ದುದು. ಅಲ್ಲದೇ ವಿದ್ಯುದ್ದೀಪವಿಲ್ಲದಿದ್ದ ಆ ಪ್ಲಾಟ್ ಫಾರಂನಲ್ಲಿ ಆಕಾಶದ ನಕ್ಷತ್ರಗಳಂತೆ ಅಲ್ಲೊಂದು ಇಲ್ಲೊಂದು ಲಾಂದ್ರದ ದೀಪಗಳು ಮಾತ್ರ ಮಂದವಾಗಿ ಉರಿಯುತ್ತಿದ್ದುವು. ಮುಪ್ಪಿನ ದೆಸೆಯಿಂದ ಕಣ್ಣಿನ ದೃಷ್ಟಿ ಬೇರೆ ಮಂದವಾಗಿತ್ತು.

ಕಣ್ಣುಗಳನ್ನೊಮ್ಮೆ ಉಜ್ಜಿಕೊಳ್ಳುತ್ತಾ ಹಾಗೂ ಹೀಗೂ ಕಾಣಸಿಗುವುದೆಲ್ಲವನ್ನು ಒಮ್ಮೆ ನೋಡಿದರು ತಾತ ಸಿಲ್ಕುಷರಟೂ ಜರತಾರೀ ಪಂಚೆಯೂ ಧರಿಸಿದ್ದ ದಪ್ಪಗಿನ ಮನುಷ್ಯರೊಬ್ಬರು ಎದುರಿಗೆ ಬರುತ್ತಿದ್ದರು. ಸಂಕೋಚದಿಂದ ತಡವರಿಸುತ್ತಾ ಒಂದಡಿ ಮುಂದಿರಿಸಿ, "ಏನಪ್ಪಾ. ನಿನ್ನ ಹೆಸರೇನು? ರಾಮದೊರೆಯೇ?" ಎಂದು ದುಃಖಮಿಶ್ರಿತ ವಾತ್ಸಲ್ಯದೊಂದಿಗಿನ ದನಿಯಿಂದ ಕೇಳಿದರು ತಾತ. ಆದರೆ ಆ ಆಸಾಮಿ ಅವರನ್ನು ದುರದುರನೇ ಒಂದು ಬಾರಿ ನೋಡಿ ಮುಂದಕ್ಕೆ ಹೊರಟುಹೋದ. ತಾತನವರ ಅಗಲವಾದ ಮುಖ ಅಪಮಾನವನ್ನು ತಾಳಲಾರದೇ ಮುದುಡಿಕೊಂಡಿತು.

ಮತ್ತೆ ಏನು ಮಾಡುವುದೆಂದೇ ತೋಚದೇ ತೊಳಲಿದರು ಅವರು. ಅಷ್ಟರಲ್ಲಿ ಆ ಅಸಾಧ್ಯ ಕೆಮ್ಮು ಬೇರೇ ಅವರನ್ನು ಒತ್ತಿಕೊಂಡು ಒಂದೇ ಸಮನೇ ಬಂದು ಮುತ್ತಿಬಿಟ್ಟಿತು. ಕಾಲುಗಳು ನಡೆಯಲಾರದೇ ತಡವರಿಸಲಾರಂಭಿಸಲು ಅಲ್ಲಿಯೇ ಕುಕ್ಕರಿಸಿಬಿಟ್ಟ ತಾತ, ಮತ್ತೆ ಎದುರು, ತಮ್ಮ ತಮ್ಮಲ್ಲೇ ಮಾತನಾಡಿಕೊಂಡು ಬರುತ್ತಿದ್ದ ಇಬ್ಬರು ಯುವಕರನ್ನು ಕಂಡರು. ಕೂಡಲೇ ಕೈದಂಡವನ್ನು ನೆಲಕ್ಕೂರಿ ಆಯಾಸದಿಂದ ಎದ್ದು ನಿಂತರು.

ಶುಭ್ರವಾದ ಉಡುಪುಗಳನ್ನು ಧರಿಸಿದ್ದ ಒಬ್ಬ ವೃದ್ಧರು ಕೈಯ್ಯಲ್ಲೊಂದು ಚರ್ಮದ ಪೆಟ್ಟಿಗೆಯನ್ನು ಹಿಡಿದುಕೊಂಡು ಗಂಭೀರವಾಗಿ ಎದುರಿಗೆ ನಡೆದುಕೊಂಡು ಬರುತ್ತಿದ್ದರು. ಅವರ ಹಿಂದೆ ಮಧ್ಯ ವಯಸ್ಸಿನ ಭವ್ಯ ಆಕೃತಿಯ ಗ್ರಾಮವಾಸಿಯೊಬ್ಬ ಏನನ್ನೋ ವಿಚಾರಿಸುತ್ತಾ, ಅವರೊಂದಿಗೇ ಬರುತ್ತಲಿದ್ದ. ಅವನು ಕೇಳಿದ್ದಕ್ಕೆ ಏನನ್ನೂ ಬಾಯಿ ತೆರೆದು ಉತ್ತರಿಸದೇ ಬರಿಯ ಕೈಗಳ ಸಂಜ್ಞೆಗಳಿಂದಲೇ ಅವನಿಗೆ ಅದೇನನ್ನೋ ತಿಳಿಯಪಡಿಸುವಂತೆ ಬರುತ್ತಾ ಇದ್ದರು ವೃದ್ಧರು. ಮತ್ತೆ ಪ್ಲಾಟ್‌ಫಾರಂನಲ್ಲೇ ಇದ್ದ ಒಂದು ಸಿಮೆಂಟು ಬೆಂಚಿನ ಮೇಲೆ ಏದುಸಿರು ಬಿಡುತ್ತಾ ಹೋಗಿ ಕುಳಿತರು. ಗ್ರಾಮವಾಸಿ ಅವರ ಹಿಂದೆಯೇ ನಿಂತ. ಮತ್ತೆ ಸ್ವಲ್ಪ ಹೊತ್ತಿಗೆಲ್ಲಾ ತಲೆ ಕೆರೆದುಕೊಳ್ಳುತ್ತಾ ಬಂದ ದಾರಿ ಹಿಡಿದು ನಡೆಯಲು ಹಿಂತಿರುಗಿದಾಗ, "ಏನಪ್ಪಾ, ತಮ್ಮಾ, ಈ ಸಾಮಾನುಗಳನ್ನು ಸ್ವಲ್ಪ ಸ್ಟೇಷನ್ ವರೆವಿಗೂ ತೆಗೆದುಕೊಂಡು ಬರಲು ಸಾಧ್ಯವೇ? ನಿನಗೆ ಪುಣ್ಯ ಬರುತ್ತಪ್ಪಾ!" –ಎಂದು ಯಾಚನೆಯ ದನಿಯಲ್ಲಿ ಬೇಡಿಕೊಂಡರು ತಾತ.

ಥಟ್ಟನೆ ನಿಂತ ಆ ಗ್ರಾಮವಾಸಿ ಅವರನ್ನು

ಪ್ರಶ್ನಿಸಿ ನೋಡಿದ. ಮತ್ತೆ ಮುಖವನ್ನು ಸೊಟ್ಟಾಗಿಸಿಕೊಂಡು ತಲೆಯನ್ನು ಬೇರತ್ತ ತಿರುಗಿಸಿ, "ನಾನು ಅವಸರವಾಗಿ ಎಲ್ಲಿಗೋ ಹೋಗ್ಬೇಕು. ಬೇರೆ ಯಾರ್ನಾದ್ರೂ ನೋಡ್ರಿ" ಎಂದು ಗೊಣಗುತ್ತ ಮುಂದೆ ನಡೆದ.

ಸ್ವಲ್ಪ ದೂರ ಹಾಗೆಯೇ ಹೋದವ ಏನೋ ನೆನೆಸಿಕೊಂಡು ಪುನಃ ಹಿಂತಿರುಗಿ ಬಂದು, "ಸರಿ, ಬನ್ನಿ. ಅಲ್ಲಿಯ ಪರಿವಿಗೆ ತಾನೇ. ನಿಮ್ಮನ್ನ ಮುಟ್ಟಿಸಿ ಬರ್ತೀನಿ" ಎಂದವನೇ ಅವರ ವಸ್ತುಗಳನ್ನೆಲ್ಲಾ ತೆಗೆದುಕೊಂಡು ತೋಳಿಗೇರಿಸಿದ

"ತುಂಬಾ ಉಪಕಾರ ಆಯ್ತಪ್ಪಾ. ಹಾಗೇ ಸ್ವಲ್ಪ ನನ್ನ ಕೈಯನ್ನು ಹಿಡಿದುಕೋ. ಆಗಲೇ ನನಗೆ ನಡೆಯಲು ಸಾಧ್ಯ!" –ಎಂದು ಕ್ಷೀಣ ನಗೆ ನಗುತ್ತಾ ಬೇಡಿದರು ತಾತ.

ಆದರೆ ಗ್ರಾಮವಾಸಿ ಅದನ್ನು ಕಿವಿಗೆ ಹಾಕಿಕೊಳ್ಳದೇ ಮುಂದೆ ನಡೆದ. ಕುಂಟುತ್ತಾ, ಎಡವರಿಸುತ್ತಾ, ತಡವರಿಸುತ್ತಲೇ ಆತನನ್ನು ಹಿಂಬಾಲಿಸಿದರು ಅಜ್ಜ.

೬

ಸುತ್ತುಮುತ್ತಲೂ ನೋಡುತ್ತಾ ಮೆಲ್ಲನೇ ನಡೆದುಬರುತ್ತಿದ್ದ ಆ ಗ್ರಾಮವಾಸಿ, "ಏನು ತಾತ, ನೀವು ಯಾವ ಗಾಡೀಲಿ ಬಂದ್ರಿ?" ಎಂದು ಕೇಳಿದ.

ಮೆಲ್ಲನೆ ಮೇಲುಸಿರು ಬಿಡುತ್ತಾ, ತೂಗಾಡುತ್ತಾ ಬರುತ್ತಿದ್ದ ತಾತ, "ಮಧುರೆ ಪಾರ್ಸಲ್ ಪ್ಯಾಸೆಂಜರ್‌ನಲ್ಲೇ ......" ಎಂದರು.

"ಹಾಗಾದ್ರೆ ಆ ಗಾಡಿ ಹೋದ್ಮೇಲೆ ಬೇರೆ ಯಾವ್ದಾದ್ರೂ ಗಾಡಿ ಬರುತ್ತಾ?"

"ಇಲ್ಲ; ಇದೇ ಕಡೇ ಗಾಡಿ."

"ನಾನೂ ಹಾಗೇ ಅಂದ್ಕೊಂಡೆ" ಎಂದು ಗದ್ಗದ ದನಿಯಲ್ಲಿ ಹೇಳುತ್ತಾ ಮುಂದೆ ನಡೆದ ಗ್ರಾಮವಾಸಿ.

ರೈಲ್ವೇ ಸ್ಟೇಷನ್ ಬಂದಾಕ್ಷಣ ಆ ಗ್ರಾಮವಾಸಿ ಥಟ್ಟೆಂದು, ತನ್ನ ತೋಳಿನ ಮೇಲೆ ಭಾರವಾಗಿ ಕುಳಿತಿದ್ದ ಪೆಟ್ಟಿಗೆ, ಹಾಸಿಗೆಗಳನ್ನು ಕೆಳಗೆ ಇಳಿಸಿಬಿಟ್ಟು, ಪ್ರಯಾಣಿಕರು ತಂಗುವ 'ವೇಟಿಂಗ್ ರೂಂ'ನ ಹತ್ತಿರ ಜರತಾರೀ ಪಂಚೆಯುಟ್ಟು ಸಿಲ್ಕು ಷರಟು ಹಾಕಿಕೊಂಡು ನಿಂತಿದ್ದ ಒಬ್ಬ ದಪ್ಪ ಮನುಷ್ಯರನ್ನು ನೋಡಿ ಅವರತ್ತ ಓಡಿದ.

ಅವರ ಎದುರಿಗೆ ಬಂದು ನಿಂತು ಆ ಗ್ರಾಮವಾಸಿ, ಕೈಜೋಡಿಸಿ ಕೇಳಿದ:

"ನೀವು......ಈಗ ಬಂದು ಹೋದ ಗಾಡಿಯಲ್ಲಿ ತಾನೇ ಬಂದಿರಿ?"

"ಹೌದು; ಯಾತಕ್ಕಾಗಿ ಹಾಗೆ ಕೇಳ್ತೀಯಾ?"

"ಮದರಾಸಿನಿಂದಲೇ ತಾನೇ ನೀವು ಬಂದಿರಿ?"

"ಹೌದು; ಏನು ವಿಷಯ?"

"ಏನೂ ಎಲ್ಲ ......ಮತ್ತೆ ನನ್ನ ಹೆಸರು.... ರಾಮದೊರೆ. ...... ನನ್ನ ತಾಯಿಯ ಹೆಸರು ಮೀನಾಕ್ಷಿ... ನಿಮ್ಮ ಹೆಸರು ವಿನಾಯಕ ಮೂರ್ತಿ ತಾನೇ?...ನೀವು ನನ್ನ ಅಪ್ಪ ತಾನೇ?"

ಆ ಆಸಾಮಿ ಅದನ್ನು ಕೇಳಿ ನಕ್ಕರು. ಆಮೇಲೆ ಏನೋ ಜ್ಞಾಪಿಸಿಕೊಂಡವರಂತೆ ಕೈಬೆರಳುಗಳನ್ನು ಹೊಸೆಯುತ್ತಾ, "ಅರೆರೆ, ಸ್ವಲ್ಪ ಹೊತ್ತಿಗೆ ಮುಂಚೆ ಯಾರೋ ಒಬ್ಬರು ಮುದುಕರು ಇವೇ ಹೆಸರುಗಳನ್ನು ಕೇಳುತ್ತಾ ನನ್ನನ್ನು ವಿಚಾರಿಸಿದರಲ್ಲಾ?" ಎನ್ನುತ್ತಲೇ ತಲೆಯನ್ನೊಮ್ಮೆ ನಿಮಿರಿಸಿ ಎತ್ತಿ, ಅಲ್ಲಿಗೆ ತೂರಾಡಿಕೊಂಡು ಬಂದು ತಲುಪಿದ ತಾತನನ್ನು ತೋರಿಸಿ "ಹೌದು; ಇವರೇ ಅವರು!" ಎಂದರು.

ಸಿಡಿಲು ಬಡಿದವನಂತೆ ಒಮ್ಮೆ ಹಿಮ್ಮೆಟ್ಟಿ ಆ ಗ್ರಾಮವಾಸಿ, ತನ್ನ ಸನ್ನಿಹದಲ್ಲೇ ಬಂದು ನಿಂತ ಹಿರಿಯರನ್ನು ಒಮ್ಮೆ ಸಂಕಟದಿಂದ ನೋಡಿದ.

ವಿಷಯವನ್ನು ಅರಿತುಕೊಂಡು ವಿನಾಯಕ ಮೂರ್ತಿ ದುಃಖದಿಂದ ಚಡಪಡಿಸಿದರು. ಮುಪ್ಪಿನ ನೋವನ್ನು ತಾಳಲಾರದೇ ಬೆಂದು ಬರಡಾಗಿದ್ದ ಅವರ ಕೈ, ಕಾಲು, ತಲೆ ಎಲ್ಲವೂ ಆ ಕೆಲ ನಿಮಿಷಗಳ ಆಘಾತವನ್ನು ಸಹಿಸಲಾರದೇ ಒದ್ದಾಡಿದವು.

ತಂದೆಯೂ ಮಗನೂ ಒಬ್ಬರನ್ನೊಬ್ಬರು ಗುರುತು ಕಂಡುಕೊಳ್ಳಲಾರದೇ ತಪಿಸಿದುದಕ್ಕಾಗಿ ಇದ್ದ ಬಲವತ್ತರ ಕಾರಣ ಈಗ ಇಬ್ಬರಿಗೂ ಹೊಳೆದಿರಬೇಕು. ಓದಿ ಪಟ್ಟಣದಲ್ಲಿ ವಾಸಿಸುತ್ತಿದ್ದ ಅಳಿಯನೊಂದಿಗೂ ಮಗಳೊಂ-

ದಿಗೂ ಮೊಮ್ಮಕ್ಕಳು ಮರಿಮಕ್ಕಳೊಂದಿಗೂ ನವನಾಗರಿಕ ಮದರಾಸು ಪಟ್ಟಣದಲ್ಲಿ ಹಾಯಾಗಿ ಬಾಳುತ್ತಾ ಬಂದಿದ್ದ, ಭಾರೀ ಅಚ್ಚು ಕೂಟದ ಮಾಲಿಕರಾಗಿದ್ದ ವಿನಾಯಕ ಮೂರ್ತಿ, ತಮ್ಮ ಮಗನೂ ತಮ್ಮ ಹಾಗೆಯೇ ಓದಿ ಭಾರಿ ಉದ್ಯೋಗಸ್ಥನಾಗಿಯೋ, ಪ್ರಸಿದ್ಧ ವ್ಯಾಪಾರಿಯಾಗಿಯೋ, ಅಥವ ಯಾವುದಾದರೂ ಪುಟ್ಟ ಒಡೆಯನಾಗಿಯೋ ಇರಬಹುದು ಎಂದು ಎಣಿಸಿ, ಆ ಎಣಿಕೆಗೆ ತಕ್ಕಂತೆಯೇ ಒಂದು ಗಂಭೀರ, ಸುಂದರ, ಸುಕುಮಾರ ಶರೀರವನ್ನು ತಮ್ಮ ಚಿತ್ತ ಭಿತ್ತಿಯ ಎದುರಿಗೆ ಸೃಷ್ಟಿಸಿಕೊಂಡಿದ್ದರು. ಆದರೆ ರಾಮದೊರೆಯಾದರೋ, ಓದದಿದ್ದ ಹಳ್ಳಿ ಗಾಡಿನವನಾಗಿಯೂ ನವನಾಗರಿಕತೆಯರಿಯದ ಪಾಮರನಾಗಿಯೂ ಉಣ್ಣಲು ಕಷ್ಟಪಟ್ಟು ಉತ್ತು ಬೆಳೆಯುವ ಸಾಮಾನ್ಯ ರೈತನಾಗಿಯೂ ಕಾಣಿಸಿದನು. ಅಂತೆಯೇ ಅವರು ತಾವು ಕಲ್ಪನೆ ಮಾಡಿ ಇಟ್ಟಿದ್ದ ವ್ಯಕ್ತಿತ್ವಕ್ಕೆ ಸಂಪೂರ್ಣ ಹೊಂದಿಕೆಯಾಗಿ ಕಾಣಿಸಿದ್ದ ಒಬ್ಬಿಬ್ಬರು ಹಾದಿಗರನ್ನು ಮಾತ್ರ ವಿಚಾರಿಸಿ ಬಿಟ್ಟು ಕಡೆಗೆ ತಮ್ಮ ಸ್ವಂತ ಮಗನನ್ನೇ ಕೂಲಿಕಾರನೆಂದು ಭಾವಿಸಿ ಅವನ ತಲೆಯ ಮೇಲೆ ಹಾಸಿಗೆ ಪೆಟ್ಟಿಗೆಗಳನ್ನು ಹೊರಿಸಿಕೊಂಡು ಬಂದು ಬಿಟ್ಟಿದ್ದರು! ರಾಮದೊರೆಯಾದರೋ ತನ್ನ ತಂದೆಯನ್ನು, ಕರುಣೆ ಅನುತಾಪಗಳಿಂದ ತೂಗಿ ನೋಡಿ, ಮಾನವ ಕರ್ತವ್ಯವನ್ನು ಮಾಡಿದವನಂತೆ ಆ ಕೆಲಸವನ್ನು ಮಾಡಿದ್ದ. ಆದ್ದರಿಂದಲೇ ಅವರನ್ನು ನೇರವಾಗಿ ಒಂದೆರಡು ಬಾರಿ ನೋಡಿದ ಬಳಿಕವೂ ಅವರೇ ತನ್ನ ತಂದೆ ಇರಬಹುದು ಎಂದು ಊಹಿಸಲಾರದೇ ಅವರ ವಯಸ್ಸಾದ ದೇಹವನ್ನು, ಮೃದುತ್ವವನ್ನು ಕಂಡು ಮೋಸ ಹೋಗಿಬಿಟ್ಟಿದ್ದ ಅವ.

ಮನಸ್ಸಿನ ಮೇಲಾಗಿದ್ದ ಆಘಾತದ ನೋವು ಇಬ್ಬರ ಹೃದಯದಿಂದಲೂ ಶಾಂತವಾಗತೊಡಗಿದೊಡನೆಯೇ ತಂದೆಯೂ ಮಗನೂ ಸ್ವಸ್ಥಿತಿಗೆ ಹಿಂತಿರುಗಿ ಒಬ್ಬರನ್ನೊಬ್ಬರು ಪುನಃ ನೋಡುತ್ತ ಉಕ್ಕಿ ಬಂದ ಪ್ರೀತಿ ವಾತ್ಸಲ್ಯಗಳನ್ನು ತಾಳಲಾರದೇ ಅಪ್ಪಿಕೊಂಡರು.

ಮಗನ ಮುಖವನ್ನು ಕಂಡ ಸಂತೋಷದಲ್ಲಿಯೂ ಉತ್ಸಾಹದಲ್ಲಿಯೂ ವಿನಾಯಕ ಮೂರ್ತಿ, "ಏನೋ ರಾಮು! ನನ್ನನ್ನು ಗುರುತು ಹಿಡಿಯೋದಕ್ಕೆ ಆಗಲಿಲ್ವೇನೊ?" ಎಂದರು ತಮಾಷೆಯಿಂದ.

"ನಿಮಗೂ ನನ್ನ ಗುರುತು ಸಿಗ್ಲಿಲ್ಲ ಅಲ್ವಾ?"– ತೃಪ್ತಿಯ ದನಿಯಿಂದಲೂ ಸಂಕೋಚದಿಂದಲೂ ನುಡಿದ ದೊರೆ. ಅವನಿಗೆ ಅವರೇ ತನ್ನ ತಂದೆ ಎಂದು ನಂಬಲು ಇನ್ನೂ ಕಷ್ಟವಾಗಿಯೇ ಇತ್ತು. ರಕ್ತ ಸಂಬಂಧದೊಡನೆಯೆ ಆತ್ಮೀಯ ಹೃದಯಗಳ ಮಿಲನವಾದಾಗ, ಅವನ ಬಾಯಿಂದ ಮಾತುಗಳೇ ಹೊರಬರಲಿಲ್ಲ. ದೇವರ ಮುಂದೆ ಭಕ್ತಿಯಿಂದ ತಲೆಬಾಗಿ ನಿಲ್ಲುವ ಭಕ್ತನಂತೆ ಅವರ ಮುಂದೆ ನಿಂತ ರಾಮದೊರೆ.

"ಹೂಂ, ಎಲ್ಲಾ ನನ್ನ ಹಣೇಬರಹ!" ಎಂದು ದುಃಖದಿಂದ ತಮ್ಮ ಕಣ್ಣುಗಳನ್ನು ಒರೆಸಿಕೊಂಡರು ಹಿರಿಯರು. "ಸರಿ, ಬೇಗ ಹೋಗಿ ಗಾಡಿಯನ್ನು ಕಟ್ಟು. ಹೊರಡೋಣ" ಎಂದರು.

ಕೈಗಳನ್ನು ಒಂದಕ್ಕೊಂದು ಮಸೆಯುತ್ತಾ, ಮುಖದ ಬಣ್ಣ ಬದಲಾಯಿಸುತ್ತಾ ಇರಲು ರಾಮದೊರೆ, "ನಾನು ಗಾಡಿ ಕಟ್ಕೊಂಡು ಬರ್ಲಿಲ್ಲಪ್ಪಾ" ಎಂದು ಶೋಕಪೂರಿತ ಧ್ವನಿಯಲ್ಲಿ ಹೇಳಿದ: "ಅಮ್ಮನಿಗೆ ಔಷಧಿ ಕೊಡಿಸಲು ಗಾಡಿ ಎತ್ತುಗಳನ್ನು ನಾವು ಮಾರಬೇಕಾಯಿತು!"

ಅವನು ಹೇಳಿದ್ದುದು ನಿಜವೇ ಆಗಿದ್ದಿತು. ಆದರೆ ಪಕ್ಕದ ಮನೆಯಲ್ಲಿದ್ದ ಮಿರಾಸುದಾರರ ಹತ್ತಿರ, ರೇಲ್ವೆ ಸ್ಟೇಷನ್ನಿನ ಪರವಿಗಾದರೂ ಗಾಡಿಯನ್ನು ಎರವಲಾಗಿ ತಂದಿರಬಹುದಿತ್ತು. "ಎರಡು ಮೈಲಿ ದೂರಾ ತಾನೆ, ಅಪ್ಪನನ್ನೂ ನಡೆಸ್ಕೊಂಡೇ ಕರ್ಕೊಂಡು ಬರ್ಬೋದು!" ಎಂದೆಂದುಕೊಂಡೇ ಅವರ ಹತ್ತಿರ ಗಾಡಿ ಕೇಳದೆಯೇ ಬಂದುಬಿಟ್ಟಿದ್ದ. ನಡೆಯಲಾರದ ಪರಿಸ್ಥಿತಿಯಲ್ಲಿ ತಂದೆ ಇರಬಲ್ಲರು ಎಂದು ಅವನು ಕನಸು ಕೂಡಾ ಕಂಡಿರಲಿಲ್ಲ.

೭

ಅದು ಮಳೆಗಾಲವಾಗಿರಲಿಲ್ಲ. ಆದರೂ ವಿನಾಯಕ ಮೂರ್ತಿಗಳು ಮಳೆಯಲ್ಲಿ ನೆನೆದಿದ್ದವರಂತೆ ಗಡಗಡನೆ ನಡುಗುತ್ತಿದ್ದರು. ರೈಲಿಗೆ ಹತ್ತುವ ಮೊದಲು ಇದ್ದ ಲವಲವಿಕೆ ಈಗ ಕಡಿಮೆ

# ಒಂದು ಉತ್ತಮ ಶರ್ಟಿಗೆ ಎಷ್ಟು ಕಡಿಮೆ ಬೆಲೆ ?

## ಉತ್ತಮ ಉಡುಪು ಧರಿಸುವ ಮನುಷ್ಯನ ಸಮಸ್ಯೆ

ವ್ಯಾಪಾರ ಜೀವನದಲ್ಲಿ ಮತ್ತು ಸಾಮಾಜಿಕ ಸಮಾರಂಭಗಳಲ್ಲಿ — ಪ್ರತಿಯೊಬ್ಬನೂ ಚುರುಕಾಗಿ ಕಾಣಿಸಕೊಳ್ಳಲು ಇಚ್ಛಿಸುತ್ತಾನೆ. ಆದರೂ ಬಹುಮಂದಿ ಜನರು ಪರಿಮಿತ ಅಂದಾಜು ಪಟ್ಟಿಯ ಪ್ರಕಾರವೇ ಉತ್ತಮ ಉಡುಪುಗಳನ್ನು ಧರಿಸಬೇಕಾಗಿದೆ. ಆದರೆ ಮಫತ್‌ಲಾಲ್ ಗ್ರುಪಿನವರ ಪೋಪ್ಲಿನ್ಸ್ ಕೊಂಡಾಗ ಮಾತ್ರ ಕಡಿಮೆ ಬೆಲೆಗೆ ನೀವು ಒಂದು ಉತ್ತಮ ಶರ್ಟನ್ನು ಪಡೆಯಬಹುದು. ಮಫತ್‌ಲಾಲ್ ಗ್ರುಪಿನವರ ಪೋಪ್ಲಿನ್ಸ್ ನಾನಾ ತರದ ಬೆಲೆಯಲ್ಲಿ ದೊರೆಯುತ್ತವೆ. ಮಫತ್‌ಲಾಲ್ ಗ್ರುಪಿನ ಪ್ರತಿ ಪೋಪ್ಲಿನ್ ಬಟ್ಟೆಯು ಅದರ ಕ್ಷೇತ್ರದಲ್ಲಿ ಅತ್ಯುತ್ತಮವಾಗಿದೆ. ಮಫತ್‌ಲಾಲಿನ ಹೆಸರನ್ನೇ ಕೇಳಿ ಪಡೆಯಿರಿ.




# ಮಫತ್‌ಲಾಲ್ ಗ್ರುಪ್ ಪೋಪ್ಲಿನ್‌ಗಳು

ಸ್ಟ್ಯಾಂಡರ್ಡ್, ಮುಂಬಾಯಿ. ಸಸೂನ್, ಮುಂಬಾಯಿ. ಸುರತ್ ಕಾಟನ್, ಮಫತ್‌ಲಾಲ್ ಫೈನ್, ಇಂಡಿಯನ್ ಡೈಸ್ಟಫ್, ಮುಂಬಾಯಿ.

K.38

ಯಾಗಿರುವಂತೆ ಕಂಡಿತು ಅವರಿಗೆ. ಅಥವ ರೈಲಿನಲ್ಲಿ ರಾತ್ರಿಹೊತ್ತು ಪ್ರಯಾಣ ಮಾಡಿದುದರಿಂದಲಿರಬೇಕು ಇಷ್ಟು ಆಯಾಸ. ಕಣ್ಣು ರೆಪ್ಪೆಗಳು ಅಂಟಿಕೊಳ್ಳುತ್ತಿದ್ದುದೂ ಅದೇ ಕಾರಣದಿಂದಲೇ ಇರಬೇಕು. ಆ ಹಾಳು ಕೆಮ್ಮು ಬೇರೆ ರಾಕ್ಷಸನಂತೆ ಆಗಾಗ್ಗೆ ಅವತರಿಸಿ ಎದೆಯನ್ನು ಕೆತ್ತಿದಂತೆ ಮಾಡಿ ಹುಣ್ಣಾಗಿಸುತ್ತಿತ್ತು. ಆದರೆ ಅವರ ದೇಹ ಈ ವಿಧವಾಗಿ ಕ್ಷೀಣವಾಗಿ ಹೋಗಿದ್ದಿತೇ ಹೊರತು, ಹೃದಯದ ಸ್ಥಿತಿ ಅದಕ್ಕೆ ಸಂಪೂರ್ಣ ವ್ಯತಿರಿಕ್ತವಾಗಿ ಬದಲಾಯಿಸಿತ್ತು

ಹೌದು. ಅವರು ಮನದಾಳದಲ್ಲಿ ಬಹಳ ಉತ್ಸಾಹಿತರಾಗಿಯೇ ಇದ್ದರು ಹೆಂಡತಿ ಮೀನಾಕ್ಷಿಯನ್ನು ನೋಡುತ್ತೇನೆಂಬ ಸಂತಸದಲ್ಲಿ ಅವರು ಮುಖ್ಯ ಒಂದು ವಿಷಯವನ್ನು ಮರೆತೇಬಿಟ್ಟರು. ಅದೇನೆಂದರೆ ಮರಣಶಯ್ಯೆಯಲ್ಲಿ ಪವಡಿಸಿ ಸಾವಿನ ದವಡೆಯಲ್ಲಿ ತುಯ್ದಾಡಿಕೊಂಡಿರುವ ಪತ್ನಿಯನ್ನು ಕಾಣಹೋಗುತ್ತಿದ್ದೇನೆ ಎಂಬ ವಿಚಾರ ಅವರ ಮನದಲ್ಲುದಿಸಲಿಲ್ಲ. ಆರೋಗ್ಯದಿಂದಲೂ ಚಟುವಟಿಕೆಯಿಂದಲೂ ಅವಳಿದ್ದಾಳೆ ಎಂದೇ ಅವರ ಎಣಿಕೆಯಾಗಿತ್ತು ಮೂವತ್ತು ವರ್ಷಗಳಿಗೆ ಮೊದಲು ಇದ್ದ ಪ್ರೀತಿಯ ಮೀನಾಕ್ಷಿಯ ಆ ಸುಂದರ ಶರೀರವೇ ಅವರ ನೆನಪಿನ ಭಿತ್ತಿಯಲ್ಲಿ ಚಿರಸ್ಥಾಯಿಯಾಗಿತ್ತು ಆ ಶರೀರವನ್ನು ಮೂವತ್ತು ವರ್ಷಗಳಿಂದಾಚೆಗೆ ದಾಟಿಸಿಕೊಂಡು ಅದರ ಇಂದಿನ ರೂಪವನ್ನು ಕಾಣುವಂತಾಗಿಸಿಕೊಳ್ಳುವುದು ಅವರಿಂದಾಗಲಿಲ್ಲವೇನೋ? ಆದ್ದರಿಂದಲೇ ಅವರ ಮನಸ್ಸು ಏನೇನೋ ಕಲ್ಪನೆಗಳನ್ನು ಮಾಡಿಕೊಂಡು ಉತ್ಸಾಹವನ್ನೂ ಸಂತಸವನ್ನೂ ಆತುರವನ್ನೂ ತುಂಬಿಸಿಕೊಂಡು ತುಳುಕಾಡಿತು.

ಅಷ್ಟರಲ್ಲಿ ಬೆವರು ಸುರಿಸುತ್ತಾ ಓಡಿಬಂದ ರಾಮದೊರೆ. "ಊರೆಲ್ಲಾ ಹುಡುಕಾಡ್ಬಿಟ್ಟೆ ಅಪ್ಪಾ. ಒಂದು ಗಾಡಿ ಸಹಾ ಸಿಗಲಿಲ್ಲ" ಎಂದ.

"ಒಂದು ಗಾಡೀನೂ ಇಲ್ವಾ? ಮತ್ತೆ ಹೇಗಪ್ಪ ಮನೆಗೆ ಹೋಗೋದು?" ಚಿಂತಾಕ್ರಾಂತರಾದರು ತಂದೆ. ರಾಮದೊರೆ ಉತ್ತರ ಕೊಡಲರಿಯದೇ ತೊಳಲಾಡುತ್ತಿದ್ದ.

"ಹಾಗಾದ್ರೆ ಎಷ್ಟು ಹೊತ್ತಿಗೆ ಗಾಡಿ ಸಿಗ್ಬೋದು?"

"ತುಂಬಾ ಹೊತ್ತಾಗ್ಬೋದು!"

"ಹಾಗಾದ್ರೆ ಅಷ್ಟು ಹೊತ್ತು ಇಲ್ಲೇ ಕೂತಿರ್ಬೇಕೇ?"

"ಬೆಳಕುಹರಿಯುವವರೆವಿಗೂ ನೀವು ಇಲ್ಲೇ ಇರೋಹಂಗಿದ್ರೆ ಒಂದು ಸಮಯ ನೀವು ಬಂದ ಕಾರ್ಯ ಪ್ರಯೋಜನವಾಗದೇ ಹೋಗಬಹುದು. ನಾನು ಮನೆಯನ್ನು ಬಿಟ್ಟು ಹೊರಟಿದ್ದಾಗಲೇ ಅಮ್ಮನ ಸ್ಥಿತಿ 'ಆಗೋ ಈಗೋ' ಅನ್ನೋ ಹಾಗಿತ್ತಪ್ಪಾ. ಈಗ ಅಲ್ಲಿ ಏನೇನಾಗ್ಬಿಟ್ಟಿದ್ಯೋ?"–ದುಃಖದಿಂದ ಹೇಳಿದ ರಾಮದೊರೆ.

ತಮ್ಮನ್ನು ಮೀರಿಬಂದ ಸಂಕಟವನ್ನು ಭರಿಸಲಾರದೇ ತಾತ ಎದ್ದು ನಿಂತರು.

"ಇಷ್ಟೆಲ್ಲಾ ಗೊತ್ತಿದ್ದೂ ಬರೀಕೈಯ್ಯಲ್ಲಿ ಬಂದೆಯಲ್ಲೋ, ಮುಠ್ಠಾಳ!"

ಎಂದು ಕಿರುಚಿ ಮರುಕ್ಷಣವೇ ಆಯಾಸಭಾರದಿಂದ ಕಾಲುಗಳು ಅಲುಗಾಡಿ ಧಡಕ್ಕನೇ ನೆಲಕ್ಕೆ ಕುಸಿದರು.

ತಪ್ಪು ಮಾಡಿದ ಪುಟ್ಟ ಶಾಲಾ ಬಾಲಕನಂತೆ ಬಾಗಿ ಮುದುರಿದ ಮುಖದೊಡನೆ ನಿಂತುಕೊಂಡು ರಾಮದೊರೆ, ಯಾವುದೋ ಒಂದು ನಿರ್ಧಾರಕ್ಕೆ ಬಂದವನಂತೆ ನಿಶ್ಚಿತನಾಗಿ ತಲೆನಿಮಿರಿಸಿ, "ಅಪ್ಪಾ!" ಎಂದು ಅನುಮಾನಿಸುತ್ತಾ ರಾಗವೆಳೆದ. ತಂದೆ ಸಿಟ್ಟಿನಿಂದ ಅವನ ಮುಖ ನೋಡಿದರು.

"ಬಂಡಿಗಾಗಿ ನಾವು ಕಾದಿರಬೇಕಾಗಿಲ್ಲ ಅಪ್ಪಾ! ಈಗಲೇ ಹೊರಟು ಬಿಡೋಣ. ಸಾಮಾನುಗಳನ್ನು ಸ್ಟೇಷನ್ ಮಾಸ್ತರ ಹತ್ತಿರ ಒಪ್ಪಿಸ್ಬಿಟ್ಟು, ನಾಳೆಗೆ ಬಂದು ತೆಗೆದುಕೊಂಡು ಹೋಗ್ತೀವೆಂದು ಹೇಳಿ, ಆಮೇಲೆ ನಿಮ್ಮನ್ನು ನನ್ನ ಹೆಗಲ ಮೇಲೆ ಕೂಡಿಸಿಕೊಂಡು ಮನೆಗೆ ಎತ್ಕೊಂಡು ಹೋಗ್ತೀನಿ."

ಮಗನ ಈ ಹೊಸ ಯೋಚನೆಯನ್ನು ಕೇಳಿ ಹೃದಯ ಕರಗಿದವರಾಗಿ ವಿನಾಯಕಮೂರ್ತಿ, "ಸರಿ, ಸರಿ. ಹೇಗಾದ್ರೂ ಮಾಡು. ಸಾಯೋಕ್ಮುಂಚೆ ನಾನು ಅವಳ ಮುಖಾನ್ನ ಒಂದು ಸರ್ತಿ ನೋಡಿಬಿಡ್ಬೇಕು"– ಎಂದರು.

ಹೃದಯವನ್ನು ಯಾವುದೋ ಒಂದು ಭಲೆ

ಚುಚ್ಚಿದಷ್ಟು ನೋವಾದವನಂತೆ ಎದ್ದುನಿಂತ ರಾಮದೊರೆ.

ಪೆಟ್ಟಿಗೆ ಹಾಸಿಗೆಗಳನ್ನು ಕೊಂಡೊಯ್ದು ಸ್ಟೇಷನ್ ಮಾಸ್ತರರ ಬಳಿ ಒಪ್ಪಿಸಿಬಿಟ್ಟು ಹಿಂತಿರುಗಿ ರಾಮದೊರೆ ಒಣಗಿದ್ದ ತರಗೆಲೆಯಂತೆ ಸಪ್ಪೆಯಾಗಿ ಕುಳಿತಿದ್ದ ತನ್ನ ತಂದೆಯನ್ನು ಬಹಳ ಸುಲಭವಾಗಿ ಎತ್ತಿ ಭುಜದ ಮೇಲೆ ಹಾಕಿಕೊಂಡು, ತಿರುಮಣಿ ಗ್ರಾಮವನ್ನರಸಿ ಹೊರಟ.

೮

ಕಾವಡಿಯನ್ನು ಹೊತ್ತು ಭರಭರನೆ ನಡೆಯುವ ಭಕ್ತನ ಆವೇಶದಿಂದೊಡಗೂಡಿದ ನಡಿಗೆಯಿಂದಲೇ ಮುಂದುವರಿಯುತ್ತಿದ್ದ ರಾಮದೊರೆ. ಅರವತ್ತು ವರ್ಷ ವಯಸ್ಸಿನ ಮುದುಕರೊಬ್ಬರನ್ನು ಹೊತ್ತಿದ್ದರೂ ಶ್ರಮಗೊಳ್ಳದೇ ಅನಾಯಾಸವಾಗಿ ಹೋಗುತ್ತಿದ್ದ ಅವನಲ್ಲಿ ತನ್ನ ತಾಯಿಯ ಕೊನೆಗಾಲದ ಆಶೆಯನ್ನು ಹೇಗಾದರೂ ನೆರವೇರಿಸಿಬಿಡಬೇಕೆನ್ನುವ ಬಲವತ್ತರವಾದ ಹುಚ್ಚು ಹಂಬಲದ ರಸವಾಹಿನಿ ಒಂದೊಂದು ನರನಾಡಿಗಳಲ್ಲಿಯೂ ಪ್ರವಹಿಸುತ್ತಿದ್ದು, ಅವನ ಒಂದೊಂದು ಹೆಜ್ಜೆಹೆಜ್ಜೆಗೂ ಹೊರಹೊಮ್ಮುತ್ತಿತ್ತು.

ಪುಷ್ಪಕ ವಿಮಾನದಲ್ಲಿ ಕುಳಿತು, ಮೆತ್ತನೆಯ ಒರಗುದಿಂಬುಗಳಿಗೆ ಒರಗಿ, ಸೊಗಸಾಗಿ ಪ್ರಯಾಣ ಮಾಡುವ ಹಾಗೆ, ತಮ್ಮ ಸುಪುತ್ರನ ಹೆಗಲ ಮೇಲೆ ಕುಳಿತು ಬಂದರು ವಿನಾಯಕ ಮೂರ್ತಿ. ರೈಲು ನಿಲ್ದಾಣದಲ್ಲಿ ಗಾಡಿ ಸಿಕ್ಕದಿದ್ದುದೂ ಸಹಾ ಒಂದು ವಿಧದಲ್ಲಿ ಒಳ್ಳೆಯದೇ ಆಯಿತು ಎನ್ನಿಸಿತು ಅವರಿಗೆ. ಕಾರಣ, ಆ ಒಡಕಲು ಬಡಬಡಿಸುವ ಬಂಡಿಯಲ್ಲಿ, ಕುದುರೆಯನ್ನೆ ಅಥವ ಎತ್ತನ್ನೋ ಕಟ್ಟಿರಲಿ, ಆ ಚಕ್ಕಳಕ್ಕೆ ಬೆನ್ನು ಕೊಟ್ಟು ಪ್ರಯಾಣ ಮಾಡಿದ ಮೇಲೆ ಅವರಿಗೆ ಚಳಿಜ್ವರವೇ ಬರುವ ಸಂಭವವಿತ್ತು. ಸದ್ಯಕ್ಕೆ, ಹಾಗಾಗದೇ ತಮ್ಮ ಮಗನ ಬೆನ್ನಿನ ಮೇಲೆ ಅಲುಗಾಡದೇ ಕುಲುಕಾಡದೇ ಸುಖ ಪ್ರಯಾಣವನ್ನು ಮಾಡುತ್ತಿದ್ದರು ಅವರು.

ವಿನಾಯಕ ಮೂರ್ತಿಯವರ ಮನಸ್ಸಿನಲ್ಲಿ ಏನೇನೋ ಆಲೋಚನೆಗಳು ಉದ್ಭವಿಸಿದುವು. ಮೂವತ್ತೆರಡು ವರ್ಷಗಳಿಗೆ ಮೊದಲು ಅವರು ಅದೇ ಬಂಡೀ ಮಾರ್ಗವಾಗಿ, ವಾಹನದ ಮೇಲೂ ಒಂಟಿಯಾಗಿಯೂ ಪತ್ನೀ ಸಮೇತರಾಗಿಯೂ ಎಷ್ಟೋ ಸಾರಿ ಬಂದಿದ್ದಾರೆ.

ಅಗೋ ಆ ಪುಟ್ಟ ಕೊಳದಡಿಯೇ ಏಕಾಂತವಾಗಿ ಬೆಳಗುತ್ತಾ ಕಾಣಿಸುತ್ತಿದೆಯಲ್ಲಾ ಒಂದು ದೇವಸ್ಥಾನ, ಅದು ಇಲ್ಲಿ ಸುತ್ತಮುತ್ತಲಿನ ಐದಾರು ಗ್ರಾಮುಗಳ ಪ್ರಜೆಗಳ ಒಟ್ಟು ಸ್ವತ್ತು. ವರ್ಷಕ್ಕೊಮ್ಮೆ ಬರುವ ಕಾರ್ತಿಕದಲ್ಲಿ ಅಷ್ಟು

ಗ್ರಾಮವಾಸಿಗಳೂ :ಕೂಡಿ ಅಲ್ಲಿನ ಅಧಿದೇವತೆಯಾಗಿರುವ ಷಣ್ಮುಖನನ್ನು ತೇರಿನ ಮೇಲೆ ಕೂಡಿಸಿ ಬಹಳ ಕೋಲಾಹಲವಾಗಿ ಭಾರೀ ಹಬ್ಬವನ್ನು ಆಚರಿಸುತ್ತಾರೆ.

ಹಾಗೆ ಒಂದು ಉತ್ಸವ ನಡೆಯುತ್ತಿದ್ದ ಸಮಯ ಅದು. ಮೀನಾಕ್ಷಿ ತನ್ನ ಪತಿಯೊಂದಿಗೆ ತವರಿಗೆ ಬಂದಿದ್ದಳು. ರಾಮದೊರೆ ಆಗ ಮೂರು ವರ್ಷದ ಪುಟ್ಟ ಮಗುವಾಗಿದ್ದ. ಚೊಚ್ಚಲು ಮಗು ಕಮಲಳಿಗೆ ಆಗ ವಯಸ್ಸು ಐದು.

ಅವಳನ್ನು ಅಜ್ಜ ಅಜ್ಜಿಯರ ಹತ್ತಿರವೇ ಬಿಟ್ಟು, ರಾಮದೊರೆಯನ್ನು ಮಾತ್ರವೇ ಎತ್ತಿಕೊಂಡು ಮೀನಾಕ್ಷಿಯೂ ವಿನಾಯಕ ಮೂರ್ತಿಗಳೂ ಆ ದೇವಸ್ಥಾನದ ವಾರ್ಷಿಕ ಉತ್ಸವ ನೋಡಲು ಹೊರಟಿದ್ದರು. ತಿರುಮಣಿ ಗ್ರಾಮಕ್ಕೂ ಈ ದೇವಸ್ಥಾನಕ್ಕೂ ಇದ್ದ ಅಂತರ ಬರೀ ಒಂದೇ ಮೈಲಾಗಿದ್ದುದರಿಂದ ಇಬ್ಬರೂ ಕಾಲು ನಡಿಗೆಯಲ್ಲೇ ಉತ್ಸವಕ್ಕೆ ಬಂದಿದ್ದರು.

ಸ್ವಾಮಿಯ ದರ್ಶನ ಮುಗಿದೊಡನೆಯೇ, ಅಲ್ಲೆಲ್ಲಾ ಹೊಸದಾಗಿ ಇಡಲಾಗಿದ್ದ ಅಂಗಡಿಗಳನ್ನೆಲ್ಲಾ ಸುತ್ತಿ, ಕಂಡಕಂಡ ವಸ್ತುಗಳನ್ನೆಲ್ಲಾ ಕೊಂಡುಕೊಂಡರು. ತೆಪ್ಪವನ್ನೇರಿ ಆ ಕೊಳವನ್ನು ಒಂದು ಪ್ರದಕ್ಷಿಣೆ ಮಾಡಿ ಆನಂದಿಸಿದರು. ಸಣ್ಣ ಮಕ್ಕಳಂತೆ ತೊಟ್ಟಿಲು ರಾಟಿಯಲ್ಲಿ ಕೂಡಬೇಕೆಂದು ಆತುರಪಟ್ಟರು. ಹೀಗೆ ಅರ್ಧ ದಿವಸವನ್ನು ಕ್ಷಣಮಾತ್ರದಲ್ಲಿ ಕಳೆದು ಉಲ್ಲಾಸದಿಂದ ಸಂಜೆ ಆರು ಘಂಟೆಯ ಹೊತ್ತಿಗೆ ಮನೆಗೆ ಹೊರಟರು.

ಮೀನಾಕ್ಷಿ ದಣಿದು ಸೋತಿದ್ದಳು. ಮಗು ರಾಮದೊರೆಯನ್ನು ಕಂಕಳಲೆತ್ತಿಕೊಂಡು ಮುಂದೆ ನಡೆಯಲು ಅವಳಿಂದ ಅಸಾಧ್ಯವಾಯಿತು. ಇದನ್ನು ಗಮನಿಸಿದ ವಿನಾಯಕ ಮೂರ್ತಿ ಮಗುವನ್ನು ಅವಳಿಂದ ಪಡೆದುಕೊಂಡು ಅವನನ್ನು ತಮ್ಮ ಹೆಗಲ ಮೇಲೆ ಕೂಡಿಸಿಕೊಂಡು ಯುದ್ಧರಂಗಕ್ಕಿಳಿಯುತ್ತಿದ್ದ ವೀರ ಯೋಧನಂತೆ ಗಂಡು ಹೆಜ್ಜೆಯನ್ನು ಹಾಕಿದರು. ತಾಯತೋಳಿನಿಂದ ತಂದೆಯ ಹೆಗಲೇರಿದ್ದ ಮಗು ರಾಮದೊರೆ, ತನ್ನ ಪುಟ್ಟ ಮುದ್ದು ಕರಗಳಿಂದ ತಂದೆಯ ಒಪ್ಪವಾಗಿದ್ದ ಕ್ರಾಪನ್ನು ಕೆದರಿಸುತ್ತಲೂ ಅವರ ಕಿವಿಯನ್ನು ನಾಲ್ಕೈದಾಗಿ ಮುದುರಿಸುತ್ತಲೂ ಮತ್ತೆ ತಂದೆಯ ಬೆನ್ನ ಮೇಲೆ ಕುಣಿಯುತ್ತಲೂ ಆಟವಾಡಿದ್ದ.

ಸ್ವಲ್ಪ ದೂರ ನಡೆದ ಬಳಿಕ ಮೀನಾಕ್ಷಿ ಮಗುವನ್ನು ವಾಪಸ್ಸು ಪಡೆಯಲು ಕೈಯನ್ನು ಮುಂದೆ ಚಾಚಿದಳು. ಗಂಡನಿಗೆ ಕಷ್ಟವಾಗುತ್ತಿದೆಯಲ್ಲಾ ಎಂಬ ಆತುರ ಅವಳಿಗೆ. ಆದರೆ ವಿನಾಯಕ ಮೂರ್ತಿಗಳು ಮಗುವನ್ನು ಅವಳ ಕೈಗೆ ಕೊಡಲೊಪ್ಪಲಿಲ್ಲ. "ಸುಮ್ಮನೇ ಬಾ. ನಿನಗೆ ನಡೆಯಲು ಆಗದಿದ್ದರೆ ನೀನೂ ನನ್ನ ಬೆನ್ನು ಹತಿ

ಕುಳಿತುಕೊ. ನಿನ್ನನ್ನೂ ಎತ್ಕೊಂಡು ಹೋ-ಗ್ತೀನಿ" ಎಂದು ತುಂಟತನದಿಂದ ನುಡಿಯುತ್ತಲೇ ಉಲ್ಲಾಸದಿಂದ ನಡೆದಿದ್ದರು. ಮೀನಾಕ್ಷಿಗೆ ತುಂಬಾ ನಾಚಿಗೆಯಾಯಿತು. "ತುಂಬಾ ಚೆನ್ನಾಗಿದೆ ಹೋಗ್ರೀ ನಿಮ್ಮ ಮಾತು," ಎನ್ನುತ್ತ ಮುನಿಸುಗೊಂಡವಳಂತೆ ಪತಿಯ ಮುಖವನ್ನು ಪ್ರೇಮದಿಂದ ನೋಡಿದಳು. ತಾನು ಹೆತ್ತಿದ್ದ ಮಗುವನ್ನು ತನ್ನ ಗಂಡ ಬಾಚಿ ಹೊತ್ತು ನಡೆಯುವ ದೃಶ್ಯವನ್ನು ಕಾಣುವಾಗ ಎಂಥ ಹೆಣ್ಣಿಗೂ ಒಂದು ಬಗೆಯ ಅನಿರ್ವಚನೀಯ ಆನಂದ ಉಕ್ಕಿ ಬರುವುದು ಪ್ರಕೃತಿದತ್ತವಾದ ವಾಡಿಕೆ. ಮನೆಯನ್ನು ಸೇರುವವರೆವಿಗೂ ಅವಳ ಕೈಗೆ ಮಗುವನ್ನು ಕೊಡಲೇ ಇಲ್ಲ ವಿನಾಯಕ ಮೂರ್ತಿಗಳು.

ಇವೆಲ್ಲಾ ಮೂವತ್ತೆರಡು ವರ್ಷಗಳಿಗೂ ಮೊದಲು ನಡೆದಿದ್ದ ಘಟನೆಗಳು. ಆದರೆ ಈಗ ಲಾದರೊ?...

ಇಂದು ಇಲ್ಲಿ ಅದಕ್ಕೆ ಸಂಪೂರ್ಣ ವಿರೋಧ ದೃಶ್ಯ!

ಅದೇ ತಂದೆ ವಿನಾಯಕ ಮೂರ್ತಿಯವರನ್ನು ಮಗ ರಾಮದೊರೆ ಬೆನ್ನಮೇಲೆ ಎತ್ತಿ ಕೂಡಿಸಿಕೊಂಡು, ಅಷ್ಟೇ ಲೀಲಾಜಾಲವಾಗಿ ನಡೆದಿದ್ದ.

ವಿಧಿಯ ವಿಚಿತ್ರ ಲೀಲೆಗಳನ್ನು ಅದೆಂತು ಬಣ್ಣಿಸುವುದು?

ಯಾವುದೋ ಕೆಟ್ಟ ಕನಸು ಕಂಡವರಂತೆ ಬೆದರಿ ಎಚ್ಚೆತ್ತ ವಿನಾಯಕ ಮೂರ್ತಿ ತಮ್ಮನ್ನೆತ್ತಿಕೊಂಡು ಮುಂದುವರಿಯುತ್ತಿದ್ದ ರಾಮದೊರೆಯ ಬೆನ್ನಿಗೆ ಭದ್ರವಾಗಿ ಹಾಗೆಯೇ ಆತುಕೊಂಡರು. ಭುಜಗಳೂ ತೋಳುಗಳೂ ಬಲವಾಗಿಯೂ ಅಗಲವಾಗಿಯೂ ಇದ್ದ ತಮ್ಮ ಮಗನನ್ನೊಮ್ಮೆ ಹೆಮ್ಮೆಯಿಂದ ಹಾಗೂ ಹೀಗೂ ದೃಷ್ಟಿಸಿ ನೋಡಿದರು. ಮೈಯ್ಯಲ್ಲಿ ಬೆವರು ಸುರಿಯುತ್ತಿರಲು, ಅವನು ಭರಭರನೆ ಮುಂದೆ ನಡೆಯುತ್ತಿದ್ದ.

"ರಾಮದೊರೆಯೂ ಕಮಲೆಯೂ ಒಂದೇ ತಾಯಿ ಹೆತ್ತ ಮಕ್ಕಳೇ. ಆದರೆ ಇವನು ಇಲ್ಲಿರುವ ಸ್ಥಿತಿ ಏನು? ಅವಳು ಅಲ್ಲಿರುವ ಸ್ಥಿತಿ ಏನು? ಕಮಲಳಿಗೆ ಬೇಕಾದಷ್ಟು ವಿದ್ಯೆ ಇದೆ, ಬುದ್ಧಿವಂತ ಪತಿ ದೊರಕಿದ್ದಾನೆ. ಮಕ್ಕಳೂ ಮೊಮ್ಮಕ್ಕಳೂ ಸೊಸೆಯಂದಿರೂ ಇದ್ದಾರೆ, ಮನೆ ಮಠ, ಹಣ, ಒಡವೆ ವಸ್ತ್ರ ಎಲ್ಲವೂ ಇವೆ. ಇಷ್ಟು ಸಾಲದೆಂಬಂತೆ ತಂದೆಯ ಆಸ್ತಿಗೂ ಆಸೆಪಟ್ಟು ತನ್ನ ಇಷ್ಟವನ್ನು ಅವನ ಮುಂದೆ ಅವಳು ಹೇಳಿಕೊಂಡೂ ಬಿಟ್ಟಳು. ಅದಕ್ಕಂತಲೆ ನನ್ನನ್ನು ಎಡೆಬಿಡದೇ ನೋಡಿಕೊಳ್ಳುತ್ತಿದ್ದಾಳೆ; ನೋಡಿಕೊಳ್ಳುವವಳಂತೆ ನಟಿಸುತ್ತಿದ್ದಾಳೆ. ಆದರೆ ರಾಮದೊ-ರೆಯೋ? ವಿದ್ಯೆ ಇಲ್ಲ, ಪದವಿ ಇಲ್ಲ, ಆಸ್ತಿ ಸುಖಗಳಿಲ್ಲ. ತಂದೆಯ ಪ್ರೇಮವಾತ್ಸಲ್ಯಗಳಿಂದಲೂ ವಂಚಿತನಾದ ಅವ ಗಾಡಿ ಎತ್ತುಗಳನ್ನು ಮಾರಿ ಜೀವಿಸಬೇಕಾದ ಗತಿಗೆ ಬಂದು ಬಿಟ್ಟಿದ್ದಾನೆ. ಇವನು ಹೀಗೆ ಬಾಳುವುದಕ್ಕೆ ಯಾರು ಕಾರಣ? ಅವನ ಜನ್ಮಕ್ಕೆ ಕಾರಣನಾದ ನಾನೇ? ಯೌವನದ ಮದದಲ್ಲುದ್ಭವಿಸಿದ ಒಂದು ಅಲ್ಪ ಆಸೆಯ ಪೂರೈಕೆಗಾಗಿ ಒಬ್ಬ ಏನೂ ಪಾಪವರಿಯದ ಮಗನ ಜೀವನವನ್ನು ಧೂಳೀಪಟವನ್ನಾಗಿಸಿಬಿಟ್ಟೆನಲ್ಲಾ? ಮೀನಾಕ್ಷಿಯಾದರೋ ತಾಯಾಗಿ ತಾನು ಮಗನಿಗೆ ಮಾಡಬೇಕಾಗಿದ್ದ ಕರ್ತವ್ಯವನ್ನು ಮಾಡಿಬಿಟ್ಟಳು. ಇಲ್ಲದಿದ್ದಲ್ಲಿ ಇವ ಮೂವತ್ತೈದು ವರ್ಷ ವಯಸ್ಸಿನ ಯುವಕನಾಗಿ ಬೆಳೆಯುತ್ತಾನೆಯೋ? ಆದರೆ, ನಾನು ನನ್ನ ಸ್ವಂತ ಮಗನಿಗೆ ಏನು ಮಾಡಿದೆ? ಯಾವ ಕರ್ತವ್ಯವನ್ನು ಪೂರೈಸಿದೆ? ಒಂದೂ ಇಲ್ಲ...... ಒಂದೂ ಇಲ್ಲ... ಒಂದೂ ಸಹಾಯ ಮಾಡದ ನಾನು ಈಗ ಅವನ ಹೆಗಲ ಮೇಲೆ ಸವಾರಿ ಮಾಡುತ್ತಿದ್ದೇನೆ! ಇದಕ್ಕೆ ಮಾತ್ರ ನನಗೆ ಯಾವ ಬಗೆಯ ಹಕ್ಕಿದೆ?"

ವಿನಾಯಕಮೂರ್ತಿಗಳಿಗೆ ಅಸಾಧ್ಯ ಕೆಮ್ಮು ಬಂದುಬಿಟ್ಟಿತು. ಕೆಮ್ಮುತ್ತಲೇ ಬಾಗಿ ಒಮ್ಮೆ ಮಗನ ಮುಖವನ್ನು ನೋಡಿದರು. ಅವನ ಕೈ, ಕಾಲು, ಶರೀರವನ್ನೆಲ್ಲವನ್ನೂ ನೋಡಿದರು. ತಕ್ಷಣ ಆ ಮೂವತ್ತೈದು ವಯಸ್ಸಿನ ಯುವಕನ ಗಂಭೀರ ಆಕಾರ ಅವರ ನೆಟ್ಟನೋಟದಿಂದ ಮರೆಯಾಗಿ, ಮೂವತ್ತೆರಡು ವರ್ಷಗಳ ಹಿಂದಿನ ಆ ಪುಟ್ಟ ಮೂರು ವರ್ಷದ ಮುದ್ದು ಮಗುವಿನ ಎಳೆಯ ಶರೀರವೇ ಕಾಣಿಸಿತು.

ಅವರು ಏಟು ತಿಂದ ಹುಳದಂತೆ ವಿಲಿವಿಲಿ ಒದ್ದಾಡಿದರು!

"ಆ ಹಸುಗೂಸಿನ ಹೆಗಲ ಮೇಲೆ ಅವನ ತಂದೆಯಾಗಿರುವ ನಾನು ಏರಿ ಕುಳಿತಿದ್ದೇನೆಯೇ? ಅಯ್ಯೋ! ನನ್ನನ್ನು ಈ ಪರಿಸ್ಥಿತಿಯಲ್ಲಿ ಅವಳು ನೋಡಿಬಿಟ್ಟರೆ ಏನು ಅಂದುಕೊಳ್ಳುತ್ತಾಳೋ? ಮನಸ್ಸು ಕೆಡಿಸಿಕೊಂಡು ಬೆಂಡಾಗಿಬಿಡುವಳಲ್ಲಾ? ನನ್ನ ಮಮತೆ ಅಡಗಿ ಹೋಗಿದ್ದನ್ನು ನೆನೆದು ಕೈತಟ್ಟಿ ನಗಲಾರಳೇ? ಈ ಮುಯ್ಯನ್ನು, ಇಷ್ಟು ದೊಡ್ಡ ಅವಮಾನವನ್ನು ನೋಡುವುದಕ್ಕಾಗಿಯೇ ನಾನು ಇಷ್ಟು ಕಾಲದನಂತರ ಇಲ್ಲಿಗೆ ಬಂದೆನೇ?"

ಇಳಿಬಿಟ್ಟಿದ್ದ ಎರಡು ಕಾಲುಗಳನ್ನೂ ಪಟಪಟನೇ ಆಡಿಸಿದರು ವಿನಾಯಕಮೂರ್ತಿ. ರಾಮದೊರೆ ಬೆದರಿ ನಿಂತ.

"ಮಗೂ ನನ್ನನ್ನು ಇಳಿಸಿಬಿಡು! ನನ್ನನ್ನು ಇಳಿಸಿಬಿಡು."

ತೋಳಿನಿಂದ ಕೆಳಗೆ ಜಾರಲು ಪ್ರಯತ್ನಿಸಿದರು ತಂದೆ.

"ಏನಪ್ಪಾ ಇದು? ಯಾಕೆ ಹೀಗೆ ದಿಢೀರೆಂದು ಕೆಳಗಿಳೀತೀರಿ? ನಿಮಗೆ ಈಗ ನಡೆಯೋದಕ್ಕೆ ಆಗೋದಿಲ್ಲ. ಇಗೋ, ನಮ್ಮ ಮನೆ ಅಲ್ಲಿ ಕಾಣಿಸುತ್ತಿದೆ. ಸ್ವಲ್ಪ ದೂರಾನೇ!" ಎಂದವರನ್ನು ಸಮಾಧಾನಪಡಿಸಲು ನೋಡಿದ ರಾಮದೊರೆ.

"ಇಲ್ಲ, ಇಲ್ಲ, ನನ್ನಿಂದ ನಡಿಯೋದಕ್ಕೆ ಆಗತ್ತೆ. ನನ್ನನ್ನು ಇಳಿಸಿಬಿಡು, ಕೆಳಗಿಳಿಸು!"

ವಿನಾಯಕಮೂರ್ತಿಗಳಿಗೆ ಎಲ್ಲಿಂದ ಅಷ್ಟು ಬಲ ಬಂದಿತೋ ತಿಳಿಯಲಿಲ್ಲ, ಅವನ ತೋಳಿನಿಂದ ರಭಸದಿಂದಲೇ 'ಕೆಳಗೆ ಧುಮುಕಿದರು. ಧುಮುಕಿದ ಅದೇ ವೇಗದಲ್ಲಿ ತಮ್ಮ ತಲೆ ನಿಮಿರಿಸಿ ಸುತ್ತುಮುತ್ತಲೂ ಒಮ್ಮೆ ನೋಡಿದರು. ಕೂಡಲೇ ತಮ್ಮ ಕೋಟಿನ ಗುಂಡಿಗಳನ್ನು ಸರಿಪಡಿಸಿಕೊಂಡು ಕಾಲರುಗಳನ್ನೊಮ್ಮೆ ಎಳೆದುಕೊಂಡರು. ತಮ್ಮ ಕೈಕೋಲನ್ನು ಬೀಸಿ ದೂರ ಎಸೆದರು. ಸನಿಹದಲ್ಲೇ ಕಾಣುತ್ತಿದ್ದ ತಿರುಮಣಿ ಗ್ರಾಮವನ್ನು ಅರಸಿ, ರಣರಂಗಕ್ಕೆ ಇಳಿಯುವ ಯೋಧನ ತೆರದಲ್ಲಿ ಕೈಗಳನ್ನು ಬೀಸಿಕೊಂಡು ಮುನ್ನಡೆದರು.

ಏನು ಮಾಡುವುದೆಂದರಿಯದೇ ಬೆದರಿದ ರಾಮದೊರೆ ಅವರನ್ನು ಹಿಂಬಾಲಿಸಿದ.

೯

ಬೆಳಕು ಹರಿದುದನ್ನು ಶಂಖನಾದದೊಡನೆ ಸ್ವಾಗತಿಸುವಂತೆ ಕೋಳಿಯೊಂದು ಕೂಗಿತು.

ರಾತ್ರಿಯೆಲ್ಲ ಎಚ್ಚರವಾಗಿದ್ದು, ಬಾಗಿಲ ಹೊಸಲ ಮೇಲೆಯೇ ದೀಪದೊಂದಿಗೆ ಒರಗಿ ಕುಳಿತುಕೊಂಡಿದ್ದ ರಾಮದೊರೆಯ ಹೆಂಡತಿ ಪೊನ್ನಮ್ಮ ಅವಸರ ಅವಸರವಾಗಿ ಎದ್ದು ಒಳಗೆ ಓಡಿದಳು.

ಮನೆಯ ಮುಂದೆ ಬಂದು ನಿಂತರು ವಿನಾಯಕ ಮೂರ್ತಿ. ಅವರನ್ನು ದಾಟಿಕೊಂಡೇ ರಾಮದೊರೆ ಮನೆಯೊಳಕ್ಕೆ ಹೊಕ್ಕ. ತವಕದಿಂದ ಮಗನನ್ನು ಹಿಂಬಾಲಿಸಿದರು ವಿನಾಯಕಮೂರ್ತಿ. ಮುಂದಿನ ಕೋಣೆಯಲ್ಲಿ ಮೂರು ಚಿಕ್ಕ ಕಂದಮ್ಮಗಳು ಸಾಲಾಗಿ ಮಲಗಿಕೊಂಡು ಸುಖನಿದ್ರೆಯನ್ನು ಕಾಣುತ್ತಿದ್ದುವು. ಅವು ರಾಮದೊರೆಯ ಮಕ್ಕಳಿರಬೇಕು. ಅವುಗಳನ್ನು ನೋಡುತ್ತ ವಿನಾಯಕ ಮೂರ್ತಿ ಒಳಗೆ ಬಂದರು

"ಬನ್ನೀಪ್ಪಾ, ಇದರ ಮೇಲೆ ಕೂತ್ಕೊಳ್ಳಿ" ಎಂದು ಹೇಳುತ್ತಾ ಹಳೆಯ ಕುರ್ಚಿಯೊಂದನ್ನು

ಒಣಗಿಹೋಗಿದ್ದ ಗಂಟಲನ್ನು ಕೆಮ್ಮಿ ಸರಿಪಡಿಸಿಕೊಳ್ಳುತ್ತಾ, ಕತ್ತಿಗೆ ಸುತ್ತಿದ್ದ ಬೀಸಣಿಗೆಯಂಥ ಮಡಕೆಗಳಿದ್ದ ಜರೀ ಅಂಗವಸ್ತ್ರದ ಎರಡು ತುದಿಗಳನ್ನು ಹಿಡಿದುಕೊಂಡು ವಿನಾಯಕ ಮೂರ್ತಿ ಕುರ್ಚಿಯ ಮೇಲೆ ಘನಗಂಭೀರ ವದನದವರಾಗಿ ಕುಳಿತುಕೊಂಡರು.

ಎಲ್ಲೆಲ್ಲೂ ಒಂದೇ ರೀತಿಯ ಶಾಂತಿ...ಮೌನ ...ಒಂದು... ಎರಡು... ಮೂರು... ನಾಲ್ಕು... ಐದು ನಿಮಿಷಗಳು ಕಳೆದುವು

ಮುಂದಿನ ಕೋಣೆಯ ಎದುರಿಗೇ ಇದ್ದ ಒಂದು ಕಿರುಕೊಠಡಿಯ ಬಾಗಿಲು ಮೆಲ್ಲನೇ ತೆರೆಯಲ್ಪಟ್ಟಿತು. ಬಲಗಡೆ ರಾಮದೊರೆಯೂ ಎಡಭಾಗದಲ್ಲಿ ಪೊನ್ನಮ್ಮನೂ ಬಹು ಜಾಗ್ರತೆಯಾಗಿ ಹಿಡಿದುಕೊಂಡಿರಲು ಎಲುಬು ಹಂದರವಾಗಿದ್ದ, ಸುಕ್ಕುಕಟ್ಟಿದ ಚರ್ಮದ ದೇಹದ ವೃದ್ಧೆಯೊಬ್ಬಳು ಮಂಚದಿಂದ ತಡವರಿಸುತ್ತಾ ಎದ್ದು ಬಾಗಿದ ತಲೆಯೊಂದಿಗೆ ನಡೆದುಬಂದಳು.

ಹೌದು; ಸಂದೇಹವಿಲ್ಲ, ಅವಳೇ ಮಿನಾಕ್ಷಿ!...

ತೆರೆದ ರೆಪ್ಪೆ ಮಿಟುಕಿಸದೇ ಅವಳನ್ನೇ ನೋಡುತ್ತಾ ಕುಳಿತ್ತಿದ್ದರು ವಿನಾಯಕ ಮೂರ್ತಿ. ಅವರ ಮುಖದ ಮೇಲೆ ಆಗ ಇದ್ದಕ್ಕಿದ್ದ ಹಾಗೆಯೇ ಅಸಾಧಾರಣವಾದ ಒಂದು ತುಂಟ ಮುಗುಳುನಗೆ ಮಿಂಚಿತು.

ಮೀನಾಕ್ಷಿ ಅವರೆದುರಿಗೆ ಬಂದು ನಿಂತಳು ಅವಳನ್ನು ಹಿಡಿದುಕೊಂಡಿದ್ದ ಮಗನೂ ಸೊಸೆಯೂ ಅವಳ ಕೈಬಿಟ್ಟು ಸರಿದು ನಿಂತರು. ಆಗ ಆಕೆ ತನ್ನ ದೇಹವನ್ನು ಸಂಪೂರ್ಣವಾಗಿ ಆವರಿಸಿದ್ದ ಸೀರೆಯ ಸೆರಗನ್ನು ಸ್ವಲ್ಪವಾಗಿ ಸರಿಸಿದಳು.

ಮರುನಿಮಿಷ: ಶಾಂತರಾಗಿ ಮೌನವಾಗಿ ಕುಳಿತಿದ್ದ ವಿನಾಯಕ ಮೂರ್ತಿಯವರನ್ನು ಭಾರೀ ಕಡಲ ರಾಕ್ಷಸ ಅಲೆಯೊಂದು ಬಂದು ಎತ್ತಿಸೆದಂತೆ ಭಾಸವಾಯಿತು. ಅವಸರವಸರವಾಗಿ ಕಂಣುಗಳನ್ನು ಅಗಲವಾಗಿ ತೆರೆದು ನೋಡಿದರು ಅವರು.

ಸಂಶಯುವಿಲ್ಲ; ಅದೇ ರವಿಕೆಯೇ ಅದು! ಅದೇ ಹೊಚ್ಚ ಹೊಸಾ ಗುಲಾಬೀ ಬಣ್ಣದ ತೋಳಿಲ್ಲದ ವೆಲ್ವೆಟ್ಟು ರವಿಕೆಯೇ! ಮೂವತ್ತು ವರ್ಷಗಳಿಗೆ ಮೊದಲು ಅವರು ಅವಳಿಗೆ ಕೊಂಡುಕೊಟ್ಟಿದ್ದ ಆ 'ಬಾಲಾಮಣೀ ಫ್ಯಾಷನ್' ರವಿಕೆಯನ್ನೇ ಮೀನಾಕ್ಷಿ ಈಗ ಧರಿಸಿಕೊಂಡಿದ್ದಳು!

ಮೀನಾಕ್ಷಿ ಮೆಲ್ಲನೆ ತಲೆಯನ್ನು ಮೇಲೆತ್ತಿದಳು. ರಸವಿಲ್ಲದೇ ಬತ್ತಿ ಹೋಗಿದ್ದ ಅವಳ ಕಣ್ಣುಗಳು, ಅದೇ ಆ ಹಿಂದಿನ ಯೌವನ ತುಂಬಿದ್ದ ಕಾಂತಿಯುಕ್ತಮೋಹಕ ದೃಷ್ಟಿಯಿಂದಲೇ ಅವರತ್ತ ನೋಡಿದಂತೆ ಅನ್ನಿಸಿತು ಮೂರ್ತಿಗಳಿಗೆ ಅವರೂ ಅವಳನ್ನು ನೋಡಿದರು. ಇಬ್ಬರೂ ಒಬ್ಬರನ್ನೊಬ್ಬರು ಮೌನವಾಗಿ ನೋಡಿದರು

ನಿಮಿರಿ ಕುಳಿತಿದ್ದ ವಿನಾಯಕ ಮೂರ್ತಿಯವರ ದೇಹ ಈಗ ಪುನಃ ಕುಂದಿ ಬಾಡಿ ಬಾಗಿತು. ತಲೆ ಸುತ್ತಲೂ ತೂರಾಡಿತು. ಎದೆಯ ಎಡಭಾಗವನ್ನು ಒತ್ತಿ ಹಿಡಿದುಕೊಂಡು ಕುರ್ಚಿಯ ಮೇಲೆ ಹಾಗೆಯೇ ಒರಗಿದಂತೆ ಉರುಳಿದರು ಅವರು. ಅವರ ಕಣ್ಣುಗಳು ಮಂಜಾದವು ಕಣ್ಣೀರಿನ ಮುತ್ತುಗಳು ಗಲ್ಲದ ಮೇಲೆ ಓಲಾಡಿದುವು. ಆದರೂ ಅವರು ಅವಳನ್ನು ನೋಡುತ್ತಲೇ ಇದ್ದರು.

ಮೀನಾಕ್ಷಿ ಹಿಂತಿರುಗಿ ತನ್ನ ಮಗನನ್ನು ನೋಡಿದಳು. ಅವನು ಬೇಗ ಬಂದು ಆಕೆಯನ್ನು ಮೆಲ್ಲಗೆ ಹಿಡಿದುಕೊಂಡು, ತನ್ನ ತಂದೆಯ ಪಾದದಡಿಯಲ್ಲಿ ಕೂಡಿಸಿದ ಆಕೆ ಅವರ ಕಾಲುಗಳನ್ನು ಮುಟ್ಟಿ ತನ್ನ ಕಣ್ಣಿಗೊತ್ತಿಕೊಂಡಳು.

ಕೊಟ್ಟಿಗೆಯಲ್ಲಿ ಕಟ್ಟಿದ್ದ ಎಮ್ಮೆಯೊಂದು ಅದೇಕೋ ಬೋರೆಂದು ಕೂಗು ಹಾಕಿತು.

ವಿನಾಯಕ ಮೂರ್ತಿಯವರ ಮುಖ ಅದೇ ಕಿರುನಗೆಯೊಂದಿಗೇ ತಮ್ಮ ಪತ್ನಿಯನ್ನು ದೃಷ್ಟಿಸುತ್ತಿತ್ತು. ಅವರ ಕಣ್ಣರೆಪ್ಪೆಗಳು ಮಿಟುಕಿಸುವ ತಮ್ಮ ಸಹಜ ಕಾರ್ಯವನ್ನು ನಿರಂತರವಾಗಿ ನಿಲ್ಲಿಸಿಬಿಟ್ಟಿದ್ದವು. *



This Magazine owned by the Loka Shikshana Trust, Hubli is printed and published by Shri H. R. Purohit at the Samyukta Karnatak Press, Koppikar Road, Hubli.

